ಸದಾ ಲವಲವಿಕೆಯಿಂದಿರಿ

ಸುಪ್ರಭಾತ ಉತ್ತೇಜಕರ ನೆಸ್‌ಕಾಫೆಯ
ರುಚಿ ಸವಿಯಿರಿ

# ನೆಸ್‌ಕಾಫೆ®




100% ಶುದ್ಧವಾದ ಕಾಫಿಯಿಂದ
ತಯಾರಿಸಲ್ಪಟ್ಟ ಏಕಮಾತ್ರ
ಇನ್‌ಸ್ಟಂಟ್ ಕಾಫಿ



ವಿಶ್ವದಲ್ಲೇ
ಅತ್ಯಂತ ಹೆಚ್ಚು
ಮಾರಾಟವಾಗುವ
ಇನ್‌ಸ್ಟೆಂಟ್ ಕಾಫಿ

NSC-2/77 KAN

# ಕಸ್ತೂರಿ



ವ್ಯವಸ್ಥಾಪಕ ಸಂಪಾದಕ :
ರಂಗನಾಥ ದಿವಾಕರ

ಪ್ರಧಾನ ಸಂಪಾದಕರು:
ಖಾಂಡ್ರಿ ಶಾಮಣ್ಣ

ಕಲೆ:
ಕೆ. ಬಿ. ಕುಲಕರ್ಣಿ

ಮುಖಪುಟ:
ಹಳೆಬೀಡಿನ ಹೊಯ್ಸಳೇಶ್ವರ
ದೇವಾಲಯ ಶಿಲ್ಪದಲ್ಲಿ
ಇಂದ್ರ–ಶಚಿ–
ಕೆ. ಬಿ. ಕುಲಕರ್ಣಿ

## ಲೇಖಕರಿಗೆ ಸೂಚನೆ

ಕಸ್ತೂರಿಯಲ್ಲಿ ಪ್ರಕಟಣೆಗಾಗಿ ಕಳುಹಿಸುವ ಲೇಖ, ಪ್ರಬಂಧ, ಕಥೆ ಮೊದಲಾದವನ್ನು ಕಾಗದದ ಒಂದೇ ಮಗ್ಗಲಿಗೆ ವಿರಳವಾಗಿ ಬರೆದಿರಬೇಕು. ಲೇಖಕರ ಹೆಸರು ವಿಳಾಸ ಸ್ಪಷ್ಟವಿರಬೇಕು. ಅನುವಾದ ರೂಪಾಂತರ ಇಲ್ಲವೆ ಸಾಧಾರ ಲೇಖನಗಳಾದರೆ ಮೂಲ ಲೇಖಕರ ಮತ್ತು ಪ್ರಕಾಶಕರ ಹೆಸರು ವಿಳಾಸಗಳಿರಬೇಕು. ಇಂಥ ಲೇಖನಗಳಿಗೆ ಪೂರ್ವಾನುಮತಿ ದೊರಕಿಸಿಕೊಂಡರೆ ಉತ್ತಮ. ಅಸ್ವೀಕೃತ ಲೇಖನಗಳು ತಿರುಗಿ ಬೇಕಾಗಿದ್ದರೆ, ಜತೆಗೆ ಸಾಕಷ್ಟು ಅಂಚೆ ಚೀಟಿಗಳನ್ನು ಇರಿಸಿ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗೆ ಇದೆ.

## ಚಂದಾದಾರರಿಗೆ ಸೂಚನೆ

ಕಸ್ತೂರಿ ತಿಂಗಳ ಒಂದನೇ ದಿನಾಂಕದೊಳಗೇ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲುಪದೇ ಹೋದರೆ ಚಂದಾದಾರರು ತಮ್ಮ ಟಪಾಲುಕಟ್ಟೆಯಲ್ಲಿ ಮೊದಲು ವಿಚಾರಿಸಿ, ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

ಚಂದಾ ದರ

| | | |
|---|---|---|
| ೩ ವರ್ಷ | (ಅಂಚೆ ಸೇರಿ) | ರೂ. ೩೫-೦೦ |
| ೨ ವರ್ಷ | ,, | ರೂ. ೨೫-೦೦ |
| ೧ ವರ್ಷ | ,, | ರೂ. ೧೪-೦೦ |
| ಅರ್ಧ ವರ್ಷ | ,, | ರೂ. ೭-೫೦ |

KASTURI April 1977

# ಈ ಸಂಚಿಕೆಯಲ್ಲಿ

# ಸಹಚಿಂತನ

## ಮೂರು ಕಥೆಗಳು

ಮಾರ್ಚ್ ಸಂಚಿಕೆಯಲ್ಲಿ ಹಿಂದಿಯಿಂದ ಕನ್ನಡದಲ್ಲಿ ಅನುವಾದಗೊಂಡು ಪ್ರಕಟವಾಗಿರುವ ಶ್ರೀ ಭಗವತಿ ಚರಣ ವರ್ಮಾರವರ ಕಥೆ 'ಉಡುಗೊರೆ' ನಿಜಕ್ಕೂ ಸ್ವಾಗತಾರ್ಹವಾದದ್ದು. ಜೀವನದಲ್ಲಿ ತಪ್ಪು ಮಾಡಿದ ಹೆಣ್ಣು ಆ ತಪ್ಪನ್ನೊಪ್ಪಿಕೊಂಡು ತನ್ನ ಬದುಕಿನಲ್ಲಿ ಹೊಸ ಮೌಲ್ಯಗಳನ್ನು ಕಂಡುಕೊಳ್ಳಲು ಪ್ರಯತ್ನಿಸಿ ಹೇಗೆ ನಿಷ್ಕ್ರಿಯಳಾಗುತ್ತಾಳೆ ಎಂಬುದನ್ನು ಸರಳವಾಗಿ, ಸುಂದರವಾಗಿ ಚಿತ್ರಿಸಿದ್ದಾರೆ. ಹಾಗೆಯೇ ಇದೇ ಸಂಚಿಕೆಯಲ್ಲಿ ಬಂದ 'ಹಣ' ತುಂಬ ಪರಿಣಾಮಕಾರಿ ಕಥೆ. ಒಬ್ಬ ಮನುಷ್ಯ (ಏಕಾಂತದಲ್ಲಿ) ಹಂತಹಂತವಾಗಿ ಉನ್ನತ ಮಟ್ಟಕ್ಕೇರಿ ಪ್ರಾಪಂಚಿಕ ಸುಖಗಳಿಂದ ಹೇಗೆ ಮುಕ್ತಿಯನ್ನು ಪಡೆಯುತ್ತಾನೆಂಬುದು ಇಲ್ಲಿ ಸೊಗಸಾಗಿ ಮೂಡಿಬಂದಿದೆ. 'ಕವಾಟ' ಕಥೆ ಅಷ್ಟಕ್ಕಷ್ಟೆ.

ಸೊಂಡೂರು —ಎ. ಜೈತುಂಬಿ

ಮಾರ್ಚ್ 'ಕಸ್ತೂರಿ'ಯಲ್ಲಿ ಪ್ರಕಟಗೊಂಡ 'ಮೃತ್ಯುವಿನ ಮುಖದಲ್ಲಿ' ಮೈನವಿರೇಳುವಂತಿದೆ.

ಕೋಲಾರ —ಎಂ. ಎಸ್. ನರಸಿಂಹಮೂರ್ತಿ,

ಮಾರ್ಚ್, ೧೯೭೭ರ 'ಕಸ್ತೂರಿ'ಯನ್ನು ನೋಡಿ ಮತ್ತು ಓದಿ ತುಂಬ ಸಂತೋಷವಾಯಿತು ಏಕೆಂದರೆ ಮುಖ್ಯವಾಗಿ-

೧) 'ಐಹೊಳೆ ಶಿಲ್ಪ' ಚಿತ್ರ ಲೇಖನವನ್ನು ಕಂಡು 'ಕಸ್ತೂರಿ'ಯ ಇತ್ತೀಚಿನ ಸಂಚಿಕೆಗಳಲ್ಲಿ ಅಂಥ ಲೇಖನಗಳು ಕಂಡುಬಂದಿರಲೇ ಇಲ್ಲ.

೨) ಮುಖಚಿತ್ರದ ಆಯ್ಕೆ. ಛಾಯಾಚಿತ್ರಗಳ ವ್ಯಾಮೋಹ ಬಿಟ್ಟು ಚಿತ್ರಕಲೆಯನ್ನು ಪ್ರೋತ್ಸಾಹಿಸಿದುದು ಮತ್ತು ಚಿತ್ರಕಲಾವಿದರಿಂದ ಚಿತ್ರಗಳನ್ನು ಆಹ್ವಾನಿಸಿದುದು,

೩) ಎಲ್ಲ ರೀತಿಯ ಲೇಖನಗಳನ್ನು, ಉತ್ತಮ ಕಥೆಗಳನ್ನು, ಕವನಗಳನ್ನು ಪ್ರಕಟಿಸಿದುದು.

'ಸಹಚಿಂತನ'ದಲ್ಲಿ ಫೆಬ್ರವರಿಯ 'ಬದುಕಲು ಕಲಿಯಿರಿ'ಯನ್ನ ಟೀಕಿಸಿದುದಕ್ಕೆ ಕಾರಣವೇನೆಂದು ಹೊಳೆಯಲಿಲ್ಲ. ಅಂತಹ ಉತ್ತಮ ಲೇಖನವನ್ನು ವ್ಯಂಗ್ಯವಾಗಿ ಕಂಡುದರ ಔಚಿತ್ಯವೇನು? ಇದೇ ಸಂಚಿಕೆಯಲ್ಲಿನ 'ಕನ್ನಡಿ: ಅದರ ಹಿಂದು-ಮುಂದು' ಲೇಖನ ಈ ಹಿಂದೆಯೇ ಇನ್ನೊಂದು ಒಂದು ಕನ್ನಡ ಪತ್ರಿಕೆಯಲ್ಲಿಯೇ, ಬರೀ ವಾಕ್ಯಗಳ ಬದಲಾವಣೆಯೊಂದಿಗೆ, ಪ್ರಕಟವಾಗಿತ್ತು.

ಸಾಲಾಡಿ (ದ. ಕ). —ಯು. ಶಶಿಧರ

## ವಿಟಮಿನ್ ಎ

ಬಗ್ಗೆ ನಾನು ಬರೆದ ಲೇಖನವನ್ನು ಪ್ರಕಟಿಸಿದ್ದಕ್ಕೆ ಧನ್ಯವಾದಗಳು. ಅದೇ ಲೇಖನದ ಪುಟ ೯೩ರ ಎರಡನೇ ಕಾಲಮಿನ ೨೫ನೇ ಸಾಲಿನಲ್ಲಿ 'ಕೆಲವು ವೇಳೆ ಎಲೋಪೇಸಿಯವೆಂಬ ಎಲುವುನೋವೂ ಉಂಟಾಗುವುದು'' ಎಂದು ತಪ್ಪಾಗಿ ಅಚ್ಚಾಗಿದೆ. ಆದರೆ ಎಲೋಪೇಶಿಯ (Alopecia) ಅಂದರೆ ಕೂದಲು ಉದುರುವುದು; ಎಲುವು ನೋವು ಅಲ್ಲ.

ವಿಟಮಿನ್ ಎ ಅಗಾಧವಾಗಿ ಸೇವಿಸಿದರೆ ಎಲೋಪೇಸಿಯವೂ ಬರುತ್ತದೆ. ಇವು ಎರಡು ಬೇರೆ ಬೇರೆ ಚಿಹ್ನೆಗಳೇ ವಿನಾ, ಒಂದೇ ಅಲ್ಲ.

ಮಂಗಳೂರು —ಡಾ ಪಿ. ಎಸ್. ನರಸಿಂಹಭಟ್ಟ

## ಚಹದ ಕಪ್ಪಿನಲ್ಲಿ ಬಿರುಗಾಳಿ

'ಕಸ್ತೂರಿ'ಯ ಏಪ್ರಿಲ್ ಸಂಚಿಕೆಯಲ್ಲಿ ಪ್ರಕಟವಾದ 'ಚಹದ ಕಪ್ಪಿನಲ್ಲಿ ಬಿರುಗಾಳಿ' ಲೇಖನ ಚೆನ್ನಾಗಿದೆ. ಇತಿಹಾಸದ ಗರ್ಭದಲ್ಲಿ ಬಹು ಕಾಲದ ಹಿಂದೆಯೇ ಸೇರಿಹೋದ ಸ್ವಾರಸ್ಯಕರ ಸಂಗತಿಯನ್ನು ಪ್ರಸ್ತುತಪಡಿಸಿದುದಕ್ಕೆ ಧನ್ಯವಾದಗಳು.

ಮಂಡ್ಯ —ಎಂ. ಕೆ. ಸೀತಾಪತಿ

'ಚಹದ ಕಪ್ಪಿನಲ್ಲಿ ಬಿರುಗಾಳಿ' ಲೇಖನಕ್ಕೆ ಸಂಬಂಧಿಸಿ ನನ್ನ ಈ ಪ್ರತಿಕ್ರಿಯೆ.

ಬಹುಕಾಲದ ಹಿಂದೆಯೇ ಇತಿಹಾಸದ ಗರ್ಭದಲ್ಲಿ ಸೇರಿ ಹೋದ ಇಂತಹ ಘಟನೆಯನ್ನಾಧರಿಸಿದ ಲೇಖನಗಳಿಗೆ 'ಸೇಲ್ಸ್ ವ್ಯಾಲ್ಯೂ' ಮಾತ್ರ ಇದೆಯೇ ಹೊರತು ಐತಿಹಾಸಿಕ ದೃಷ್ಟಿಯಿಂದ ಯಾವುದೇ ಮಹತ್ವವಿರುವುದಿಲ್ಲ. ಸಾರ್ವಜನಿಕ ಕ್ಷೇತ್ರದಲ್ಲಿದ್ದುಕೊಂಡು ಇತಿಹಾಸದ ಪರ್ವ ಕಾಲದಲ್ಲಿ ಭಾಗವಹಿಸಿದ ವ್ಯಕ್ತಿಗಳ ಮೌಲ್ಯಮಾಪನವಾಗಬೇಕಾದದ್ದು ಅವರ ಸಾಧನೆಗಳಿಂದಲೇ ಹೊರತು ವೈಯಕ್ತಿಕ ನಂಬಿಕೆ-ವಿಶ್ವಾಸಗಳಿಂದಲ್ಲ.

ಹಾಸನ —ಎಸ್. ಎಂ. ರಾಮಪ್ಪಶೆಟ್ಟಿ

## ಗಂಗಾಧರ ಪಂತರ ಪಾನಿಪತ್

ನಿಮ್ಮ ಮಾರ್ಚ್ ಪುಸ್ತಕ ವಿಭಾಗ 'ಗಂಗಾಧರಪಂತರ ಪಾನಿಪತ್' ಇತ್ತೀಚಿನ ಒಂದೆರಡು ವರ್ಷಗಳಲ್ಲಿ 'ಕಸ್ತೂರಿ'ಯಲ್ಲಿ ಬಂದ ಪುಸ್ತಕ ವಿಭಾಗಗಳಲ್ಲಿ ಉತ್ತಮವಾದುದು. 'ಕಟಾಸ್ಟ್ರೋಫಿ ಥಿಯರಿ'ಯಂಥ ಒಂದು ಸಿದ್ಧಾಂತವನ್ನು (ಬಹುಶಃ ಅದನ್ನು ಇದಮಿತ್ಥಂ ಎಂದು ಹೇಳಬಹುದಾದಷ್ಟು ಖಚಿತ ಸಿದ್ಧಾಂತವಾಗಿಲ್ಲವೆಂದು ನನ್ನ ಭಾವನೆ) ಬಳಸಿಕೊಂಡು ಕಟ್ಟಿ ಬೆಳೆಸಿದ ಈ ಕಥೆ ಓದಿಸಿಕೊಂಡು ಹೋಗುತ್ತದೆ. ಆದರೆ ಪಂತರು ಒಂದು ಆಘಾತದ ಕಾರಣದಿಂದ ವರ್ತಮಾನವನ್ನು ಪೂರ್ತಿ ಮರೆತು ಊಹೆಯಿಂದ ಮಾತ್ರ ನಿರ್ಮಾಣವಾಗಬಲ್ಲಂಥ ಸ್ಥಿತಿಗೆ ಹೋದರೆಂದು ಹೇಳಿದರೆ ಅವರ ಮಾನಸಿಕ ಅಸ್ವಸ್ಥೆಯನ್ನು ಅರ್ಥ ಮಾಡಿಕೊಳ್ಳಬಹುದು. ಆದರೆ ಅವರ ಅನುಭವ ಬರಿ ಮಾನಸಿಕವಾಗಿರಲಿಲ್ಲ. ಅವರ ಅನುಭವ ಈ ಆಘಾತದ ನಂತರ ಪುಣೆಯಿಂದ ಮುಂಬಯಿಗೆ ಹೋದರೆಂಬುದೂ ಮುಂಬಯಿಯಲ್ಲಿ ಅವರಿಗೆ ಮತ್ತೊಂದು ಆಘಾತ

ಮಾತ್ರ ನಮ್ಮ ತಿಳುವಳಿಕೆಯ ಈಗಿನ ಅವಸ್ಥೆಯಲ್ಲಿ ಕಠಿಣ ವೆನಿಸುತ್ತದೆ. ಆದರೆ ಇದು ವೈಜ್ಞಾನಿಕ 'ಕಥೆ'ಯಾಗಿ ರುವುದರಿಂದ ಓದಿಗೆ ಮಾತ್ರ ರಸಭಂಗವಾಗುವುದಿಲ್ಲ.

ಜಮಖಂಡಿ -ಆರ್. ಎಸ್.

## ಜಿಮ್ಮಿ ಕಾರ್ಟರ್

ಮಾರ್ಚ್ 'ಕಸ್ತೂರಿ'ಯಲ್ಲಿ ಅಮೇರಿಕದ ನೂತನ ಅಧ್ಯಕ್ಷ ಜಿಮ್ಮಿ ಕಾರ್ಟರ್ ಬಗ್ಗೆ ಬಂದ ಲೇಖನ ಸಮಯೋಚಿತವಾಗಿದೆ. ಪ್ರಜಾತಂತ್ರ ಅಮೇರಿಕದಂಥ ಸಂಪನ್ನವಾದ ರಾಷ್ಟ್ರದಲ್ಲಿ ಮಾತ್ರವೇ ಸಮರ್ಥವಾಗಿ ಕಾರ್ಯ ಮಾಡಬಲ್ಲುದು ಎಂಬ ಭಾವನೆ ಇದುವರೆಗೆ ನನಗಿತ್ತು. ಆದರೆ ನಮ್ಮ ಭಾರತದಲ್ಲಿ ಇತ್ತೀಚೆ ಲೋಕಸಭೆಗೆ ನಡೆದ ಚುನಾವಣೆಯ ಪರಿಣಾಮಗಳನ್ನು ಗಮನಿಸಿದರೆ ನಮಗೂ ಪ್ರಜಾತಂತ್ರದ ರೀತಿಯಲ್ಲಿ ನಮ್ಮನ್ನಾಳಬೇಕಾದ ಸರಕಾರವನ್ನು ಚುನಾಯಿಸಲು ಶಕ್ಯವಿದೆ ಎಂದೆನಿಸುತ್ತಿದೆ. ಅಮೇರಿಕದ ಅಧ್ಯಕ್ಷರ ಆಯ್ಕೆಯ ನಂತರ ಆ ದೇಶದ ಅಧ್ಯಕ್ಷನನ್ನು ಕುರಿತು ಬರೆದಿರುವಂತೆಯೇ ಭಾರತದ ಈ ಚುನಾವಣೆಯ ಪರಿಣಾಮದ ಅರ್ಥವನ್ನೂ ಅದರಿಂದ ನಮ್ಮ ದೇಶದ ಭವಿಷ್ಯತ್ತಿನ ಮೇಲಾಗಬಹುದಾದ ಪರಿಣಾಮವನ್ನೂ ಕುರಿತು 'ಕಸ್ತೂರಿ' ತನ್ನ ಹಿಂದಿನ ಭವ್ಯ ಪರಂಪರೆಗೆ ಅನುಗುಣವಾಗಿ ವಿಚಾರಪೂರ್ಣ ಲೇಖನವೊಂದನ್ನು ಪ್ರಕಟಿಸಬೇಕೆಂದು ನಾನು ಸೂಚಿಸಬಹುದೆ?

ಹುಬ್ಬಳ್ಳಿ -ಎನ್. ಆರ್ ಜೈನಾಪುರ

## ಎಂ. ವಿ. ಸೀತಾರಾಮಯ್ಯ

ಬಹಳ ದಿನಗಳ ನಂತರ 'ಕಸ್ತೂರಿ'ಯಲ್ಲಿ ಒಳ್ಳೆಯ ವ್ಯಕ್ತಿಚಿತ್ರಣವೊಂದನ್ನು ನೋಡಿ ನನಗಂತೂ ಖಂಡಿತ ಆನಂದವಾಯಿತು. ಶ್ರೀ ಸೀತಾರಾಮಯ್ಯನವರಂಥ "ಮನಸ್ಸಾಮರ್ಥ್ಯ"ದಿಂದಲೇ ರೋಗಸಾಗರ ಮೀರಿ ನಿಂತ ಸಾಹಿತಿಯ ಪರಿಚಯ ಮಾಡಿಕೊಟ್ಟ ಶ್ರೀ ವಿ. ವೆಂಕಟರಾಯರನ್ನು ಮನಸಾರೆ ಅಭಿನಂದಿಸುತ್ತೇನೆ.

ಕಲಬುರ್ಗಿ -ಮ. ಶಾಂತಣ್ಣ

## ಪವಿತ್ರ ಧರ್ಮ

ಶ್ರೀ ಖಾದ್ರಿ ಶಾಮಣ್ಣನವರು ಮಾರ್ಚ್ 'ಕಸ್ತೂರಿ'ಯ ಮೊದಲ ಪುಟಗಳಲ್ಲಿ ಬರೆದ 'ಪವಿತ್ರ ಧರ್ಮ' ಅರ್ಥಗರ್ಭಿತ.

ಚಾಮರಾಜನಗರ -ಜಿ. ಶಿವಪ್ರಸಾದ

## ಬೆಂಕಿಯ ಮೇಲೆ ನಿಂತ ಪಟ್ಟಣ

ಬೆಂಕಿಯ ಮೇಲೆ ನಿಂತ ಪಟ್ಟಣ ಝರಿಯಾದ ಕುರಿತು ಶ್ರೀ ಪಿ. ಆರ್. ಆಚಾರ್ಯರು ಬರೆದ ಲೇಖನ ಓದಿ ಮುಗಿಸಿದಾಗ ಕೊನೆಗೂ ನನ್ನ ಮನಸ್ಸಿನಲ್ಲಿ ಉಳಿದುಬಿಡುವುದು ಒಂದು ಮಾತು ಮಾತ್ರ. ಆ ನಗರವಾಸಿಗಳು "ತಮ್ಮದೇ ಸುರಕ್ಷಿತತೆಯ ವಿಷಯದಲ್ಲಿ ಒಂದು ಬಗೆಯ ಹತಾಶಭಾವವನ್ನೂ ಅದೃಷ್ಟ ಭಾವವನ್ನೂ ತಾಳಿದ್ದಾರೆ'' ಎಂಬುದು. ಮೊನ್ನೆಯ ಚುನಾವಣೆಯಲ್ಲಿ ಪ್ರಜಾತಂತ್ರದ ಬಗ್ಗೆ ಖಂಡಿತ ಅಭಿಪ್ರಾಯವನ್ನು ನಿಸ್ಸಂದಿಗ್ಧವಾಗಿ ವ್ಯಕ್ತಪಡಿಸಿದ ಬಿಹಾರದ ಜನ ಸ್ವಸುರಕ್ಷಿತತೆಯ ಬಗ್ಗೆ ಇಷ್ಟೊಂದು ಅಸಡ್ಡೆಯುಂಡಿರುವುದೊಂದು ವೈಪರೀತ್ಯವೇ ಅಲ್ಲವೆ?

ಕಾರವಾರ -ಮಂಜುಳಾ

## ಅಂದ ಹೆಚ್ಚಲಿ

ಮಾರ್ಚ್ 'ಕಸ್ತೂರಿ' ಒಳ್ಳೆಯದಾಗಿದೆ. ಚಿತ್ರಕಲೆಗೆ ಪ್ರೋತ್ಸಾಹವೀಯುವ ನಿಮ್ಮ ನಿರ್ಧಾರ ಶ್ಲಾಘನೀಯವೇ.

ಆದರೆ 'ಕಸ್ತೂರಿ' ಇನ್ನೂ ಒಳ್ಳೆಯದಾಗಲು ಸಾಧ್ಯವಿದೆಯೆಂಬ ಭಾವನೆ ಮಾತ್ರ ಖಂಡಿತ ಉಳಿದುಬಿಡುತ್ತದೆ. ವಿಶೇಷತಃ ಲೇಖನಗಳ ಮುಕ್ತಾಯದ ಸಂಕೇತವಾದ ಚುಕ್ಕೆಯನ್ನು ಪ್ರಕಟಿಸಿದ ನಂತರ ಒಂದು ಗರಿಯನ್ನೋ ಗೆರೆಗಳ ಒಂದು ಸಮೂಹವನ್ನೋ (ಬೇಕಾದ ಚಿತ್ರವನ್ನೋ ಎನ್ನಿರಿ) ಹಾಕಿ ಅನಂತರ ಒಂದು ನಗೆಹನಿಯನ್ನೋ ಸುಭಾಷಿತ ವಾಕ್ಯವನ್ನೋ ಹಾಕುವುದರಿಂದ ಪುಟದ ಸೌಂದರ್ಯ ಹೆಚ್ಚುತ್ತದೆಂದು ನಿಮ್ಮ ಅಭಿಪ್ರಾಯವೊ? ನನಗಂತೂ ಅದು ಚೆಂದವೆನಿಸುತ್ತಿಲ್ಲ.

ಪುಸ್ತಕ ವಿಭಾಗದ ಮುಖಚಿತ್ರ ಅಂದವಾಗಿದೆ. ಸಾಮಾನ್ಯವಾಗಿ ನಿಮ್ಮ ಎಲ್ಲ ಸಂಚಿಕೆಗಳಲ್ಲೂ ಈ ಚಿತ್ರ ಚೆನ್ನಾಗಿಯೇ ಇರುವುದುಂಟು. ಆದರೆ ಹತ್ತಿಪ್ಪತ್ತು ಪುಟಗಳಷ್ಟು ದೀರ್ಘವಾಗಿರುವ ಈ ವಿಭಾಗದಲ್ಲಿ ನಡುನಡುವೆ ಅರ್ಥಪೂರ್ಣ ಚಿತ್ರಗಳನ್ನು ಹಾಕಿದರೆ ಓದುಗರಿಗೆ 'ಬೋರ್' ಅನಿಸುವುದಿಲ್ಲವಲ್ಲ.

'ಕಸ್ತೂರಿ'ಯ ಗುಣದ ಜೊತೆಗೆ ಅದರ ಅಂದವನ್ನೂ ಹೆಚ್ಚಿಸಿದರೆ ಅದು ಪುನಃ ಸಂಗ್ರಾಹ್ಯವೆನಿಸುವುದರಲ್ಲಿ ಸಂದೇಹವಿಲ್ಲ. ಅಂತೆಯೇ ನನ್ನ ಈ ನಮ್ರ ಸೂಚನೆ. ಅದರ ಒಳ ಪುಟಗಳ ವಿನ್ಯಾಸಕ್ಕೆ ನೀವು ಇನ್ನೂ ಹೆಚ್ಚು ಗಮನವೀಯುವುದು ಅಗತ್ಯ.

'ಕಸ್ತೂರಿ'ಯು ಕನ್ನಡ ಅಂಕಿಗಳನ್ನೇ ಬಳಸುತ್ತಿರುವುದು ಅಭಿನಂದನಾರ್ಹ.

ಊರು ಇಲ್ಲ -ಬಾಣ

[ನಿಮ್ಮ ಸೂಚನೆಗಾಗಿ ನಾವು ಕೃತಜ್ಞರು. 'ಕಸ್ತೂರಿ'ಯ ಅಂದವನ್ನು ಯಾವ ರೀತಿ ಹೆಚ್ಚಿಸಬೇಕು ಎಂಬ ಬಗ್ಗೆ ಅಭಿಪ್ರಾಯಭಿನ್ನತೆಯಿರಬಹುದು. ಆದರೆ ಓದುಗರ ಕಣ್ಣಿಗೆ ಅದರ ಒಳಮೈ ಇನ್ನೂ ಹೆಚ್ಚು ಹಿತಕರವಾಗಬೇಕು ಎಂಬುದಂತೂ ನಿಸ್ಸಂದೇಹ. ಅದನ್ನು ಸಾಧಿಸಲು ನಾವು ಸದಾ ಪ್ರಯತ್ನಶೀಲರಾಗಿರುತ್ತೇವೆಂದು ಮಾತ್ರ ಖಂಡಿತ ಆಶ್ವಾಸನವೀಯುತ್ತೇವೆ.

ಇನ್ನೊಂದು ಮಾತು. ನಿಮ್ಮಂಥ ಪ್ರಾಜ್ಞ ಓದುಗರು ನಿಮ್ಮ ಪತ್ರಗಳಲ್ಲಿ ನಿಮ್ಮ ಹೆಸರು, ವಿಳಾಸಗಳನ್ನೂ ಸೂಚಿಸಿದರೆ ನಮ್ಮ-ನಿಮ್ಮ ನಡುವೆ ಒಂದು ಬಗೆಯ ಆತ್ಮೀಯ ಸಂಪರ್ಕ ಬೆಳೆಯಲು ಸಾಧ್ಯವೆಂದು ನಮ್ಮ ಭಾವನೆ. -ಸಂ.]



# ಕಸ್ತೂರಿ

ಸಂಚಿಕೆ : ೮ | ಕಸ್ತೂರಿ, ಎಪ್ರಿಲ್ ೧೯೭೭ | ವರ್ಷ : ೨೧

# ಜನತಂತ್ರದ ಪವಾಡ

ಖಾ. ಶಾ.

ಜನಮತ ಬಗೆಬಗೆಯಲ್ಲಿ ವ್ಯಕ್ತವಾಗುತ್ತದೆ. ಚುನಾವಣೆಯೂ ಒಂದು ರೂಪ. ನಿರ್ಬಂಧ, ಬಲಾತ್ಕಾರ ಇರುವಾಗ ಜನ ತೆಪ್ಪಗೆ ಇರಬಹುದು. ಮೌನವನ್ನು ಅರ್ಧಸಮ್ಮತಿ ಎಂದು ಹೇಳಿದರೂ ಸಮ್ಮತಿ ಎಂದು ತಿಳಿಯಬಾರದು.ಕಾಲಬಂದಾಗ ಮೌನವು, ವಾಚಾಳಿತನವಾಗಿ ರೂಪಾಂತರಗೊಳ್ಳಬಹುದು. ಪ್ರತಿಭಟನೆಯೂ ಆಗಬಹುದು. ಚುನಾವಣೆಯಲ್ಲಿ ವ್ಯಕ್ತಪಡಿಸುವ ಸಾಮೂಹಿಕ ಪ್ರತಿಭಟನೆ ಜನತಂತ್ರದಲ್ಲಿ ವ್ಯಕ್ತಿಗಳಿಗೆ ದುರಂತಕಾರಿ ಆಗಬಹುದು. ದೇಶಕ್ಕೆ ಹಿತಕಾರಿ.

ನಮ್ಮ ದೇಶದಲ್ಲಿ ನಡೆದಿರುವ ಪ್ರಸಕ್ತ ಲೋಕಸಭೆ ಚುನಾವಣೆ ಅನೇಕ ದೃಷ್ಟಿಯಿಂದ ಕುತೂಹಲಕಾರಿ. ಅತ್ಯುನ್ನತ ಸ್ಥಾನದಲ್ಲಿದ್ದ ಶ್ರೀಮತಿ ಇಂದಿರಾ ಗಾಂಧಿ ಅವರನ್ನು ಜನ ಬೆಂಬಲಿಸಲಿಲ್ಲ. ಪ್ರಧಾನಮಂತ್ರಿ ಸ್ಥಾನದಲ್ಲಿ ಇದ್ದವರಾರನ್ನೂ ಇದುವರೆಗೆ ಭಾರತದ ಜನತೆ ಹೀಗೆ ಧಿಕ್ಕರಿಸಿರಲಿಲ್ಲ. ಇಲ್ಲಿ ಜನತೆ ಒಬ್ಬ ವ್ಯಕ್ತಿಯನ್ನು ಮಾತ್ರ ತಿರಸ್ಕರಿಸಲಿಲ್ಲ, ಅವರ ಪಕ್ಷವನ್ನೂ ತಿರಸ್ಕರಿಸಿಬಿಟ್ಟಿತು. ಇದು ವಿಶೇಷ. ಭಾರತದಲ್ಲಂತೂ ಇದು ಆಗುತ್ತಿರುವುದು ಮೊದಲ ಬಾರಿಗೆ. ಫಲಿತಾಂಶ ಬರುವ ಹಿಂದಿನ ದಿನವೂ ಯಾರೂ ಇದನ್ನು ಎಣಿಸಿರಲಿಲ್ಲ.

ಚುನಾವಣೆಯಲ್ಲಿ ಮತದಾರರಿಗೆ ಮುಖ ತೋರಿಸದೆಯೇ ಗೆಲ್ಲುವುದೂ ಉಂಟು. ಅಪಾರ ಬಹುಮತವೂದೊ ರೆತೀತು. ಬಿಹಾರದ ಮುಜ-

ಘರಪುರದಿಂದ ಆರಿಸಿಬಂದ ಜಾರ್ಜ್ ಫರ್ನಾಂಡಿಸ್ ಅಲ್ಲಿನ ಮತದಾರರನ್ನು ಕಂಡೇ ಇಲ್ಲ. ದೆಹಲಿಯ ತಿಹಾರ್ ಜೇಲಿನಿಂದ ನಾಮಪತ್ರ ಕಳಿಸಿದ ವ್ಯಕ್ತಿಯನ್ನು ಮೂರು ಲಕ್ಷ ಮೂವತ್ತಾ ಲ್ಕು ಸಾವಿರ ಬಹುಮತದಿಂದ ಆರಿಸುವುದು ಚುನಾವಣೆ ಪವಾಡವೇ. ಮೊದಲಿನಿಂದ ನಮ್ಮ ದೇಶದ ಜನ ತ್ಯಾಗ ಬಲಿದಾನಗಳನ್ನು ಪೂಜಿಸಿದ್ದಾರೆ. ಗಾಂಧೀಜಿಯ ಹಿಂದೆ ದೇಶಕ್ಕೆ ದೇಶವೇ ಹೋದುದು ಈ ಕಾರಣದಿಂದಲೇ.

ಸರ್ವಾಧಿಕಾರ – ಪ್ರಜಾತಂತ್ರಗಳ ಭಾವನಾತ್ಮಕ ಮೌಲ್ಯಗಳನ್ನು ನಮ್ಮ ಜನ ಅರ್ಥ ಮಾಡಿಕೊಳ್ಳಲಾರರೇನೋ! ಅವು ವ್ಯಕ್ತವಾಗುವ, ಪ್ರತ್ಯಕ್ಷವಾಗುವ ಕ್ರಮಗಳ ಮೂಲಕ ಅವು ಜನರ ಕಣ್ಣಿಗೆ ಕಟ್ಟುತ್ತವೆ. ಬಲಾತ್ಕಾರದ ಕುಟುಂಬಯೋಜನೆಯ ಶಸ್ತ್ರಚಿಕಿತ್ಸೆಯೇ ಉತ್ತರ ಭಾರತದ ಜನಸ್ತೋಮದ ಪಾಲಿಗೆ ಮರೆಯಲಾಗದ "ಜುಲುಂ" ಆಯಿತು. ಅದು ಅರ್ಥವಾಯಿತು. ಮತದ ಪೆಟ್ಟಿಗೆಯಲ್ಲಿ ಅದರ ಉತ್ತರ ಅತಿ ಮಾರ್ಮಿಕವಾಗಿ ದೊರೆಯಿತು. ಪ್ರಚಂಡವಾಗಿ ವ್ಯಕ್ತವಾಯಿತು. ಗದ್ದುಗೆಯೇ ಅಲ್ಲಾಡಿಹೋಯಿತು.

ನಮ್ಮ ದೇಶದ ಜನ ಬಡವರು. ವಿದ್ಯೆ ಬಲ್ಲವರಲ್ಲ. ಆದರೆ ಸೂಕ್ಷ್ಮಮತಿಗಳು. ಬಡತನ, ಅಜ್ಞಾನ ಅವರು ಆರಿಸಿಕೊಂಡುದಲ್ಲ. ಅವರ ಪಾಲಿನ ಅನಿವಾರ್ಯವಿಧಿ. ಆದರೆ ಅವರಿಗೂ ಯೋಚಿಸುವ ಶಕ್ತಿ ಇದೆಯಲ್ಲ. ಅವರಿಗೆ ಅರಿವಾಗುವಂತೆ ಹೇಳಿದಾಗ ಎಂಥ ಗಹನ ಸಂಗತಿಯಾದರೂ ಅರ್ಥವಾಗುತ್ತದೆ. ಚುನಾವಣೆಯಲ್ಲಂತೂ ಚೆನ್ನಾಗಿ ತಿಳಿಯುತ್ತದೆ.

ಈ ಬಾರಿ ನಡೆದ ಚುನಾವಣೆ ಒಂದು ಸತ್ಯ ಸಾರಿ ಹೇಳಿದೆ: ನಮ್ಮ ಜನ ನಾವು ತಿಳಿದಷ್ಟು ಮೂರ್ಖರಲ್ಲ. ಅವರನ್ನು ಸ್ವಲ್ಪ ಕಾಲ ಮೈಮರೆಸಬಹುದು; ಸದಾಕಾಲವೂ ಅಲ್ಲ. ಇದನ್ನು ಅರಿಯಲಾರದ ಮುಖಂಡರ ವಿಷಯದಲ್ಲಿ ಮರುಕ ತಾಳಬೇಕು ಅಷ್ಟೆ. ಅಕ್ಷರ ಜ್ಞಾನಕ್ಕೂ ತಿಳಿವಳಿಕೆಗೂ ಸಂಬಂಧ ಇರಲೇಬೇಕೆಂದೇನೂ ಅಲ್ಲ. ಅಕ್ಷರ ಬಲ್ಲವರೆಲ್ಲ ತಿಳಿವಳಿಕೆ ಉಳ್ಳವರೆಂದೇನೂ ಅಲ್ಲ. ಜನತಂತ್ರ, ಮೂಲ ನಾಗರಿಕ ಹಕ್ಕುಗಳು ಇರಬೇಕೆಂದು ಜನ ತೀರ್ಪು ಕೊಟ್ಟಿದ್ದಾರೆ. ಜನ ಸ್ವಾತಂತ್ರ್ಯಕ್ಕೆ ಜೀವದಾನ ಮಾಡಿದ್ದಾರೆ. ಸ್ವಾತಂತ್ರ್ಯಕ್ಕೆ ಹಿಡಿದಿದ್ದ ಗ್ರಹಣವನ್ನು ಬಿಡುಗಡೆಗೊಳಿಸಿದ್ದಾರೆ. ಸಹನೆಯ ಮತ್ತೊಂದು ಅಧ್ಯಾಯ ಬರೆದಿದ್ದಾರೆ.



ಪ್ರಜಾಪ್ರಭುತ್ವವೆಂದರೆ ಪ್ರಜೆಗಳ, ಪ್ರಜೆಗಳಿಂದ, ಪ್ರಜೆಗಳಿಗಾಗಿ ನಡೆಸಲ್ಪಡುವ ಸರಕಾರ. ಅದು ಶಾಶ್ವತ ಮೌಲ್ಯಗಳ ಮೇಲೆ ನಿಂತ ದೈವನಿರ್ಮಿತವಾದ ಶಾಶ್ವತ ತತ್ವ. ಇದನ್ನೆಲ್ಲ ಸಂಕ್ಷಿಪ್ತವಾಗಿ 'ಸ್ವಾತಂತ್ರ್ಯ' ಎಂಬ ಒಂದೇ ಶಬ್ದದಲ್ಲಿ ಹೇಳಬಹುದು

–ಥಿಯೋಡೋರ್ ಪಾರ್ಕರ್

*

"...ಆದ್ದರಿಂದಲೇ ಅಪ್ಪಟ ಪ್ರಜಾಪ್ರಭುತ್ವ ಲಜ್ಜಾರಹಿತವಾದದ್ದೆಂದು ನಾನೆನ್ನುವುದು."

–ಎಡ್ಮಂಡ್ ಬರ್ಕ್

# ಅಣಬೆಗಳು

ನೀವಿನ್ನೂ ಎಳೆ ವಯಸ್ಸಿನವರಿದ್ದಾಗ ಹಿರಿಯರು ನಿಮಗೂ ಹೆದರಿಸಿರಬೇಕು–ಅದು ಮಹಾ ವಿಷಾರಿ, ಅದನ್ನು ತಪ್ಪಿ ಕೂಡ ಮುಟ್ಟಬೇಡ ಎಂದು. ನಾಯಿ ಕೊಡೆ, ಅಣಬೆ ಎಂದೆಲ್ಲ ನಿಮಗೆ ಪರಿಚಿತವಿರುವ ಗೋಂಬೆಯಾಟದ ಛತ್ರಿಯಾಕಾರದ ವನಸ್ಪತಿಗಳನ್ನು ನೀವು ಬೇಕಷ್ಟು ನೋಡಿರಬೇಕು. ಆದರೆ ವಿಜ್ಞಾನಿಗಳು ಅದರ ಜಾತಿಗಳಲ್ಲಿ ಹಾಗೂ ಅದರ ಪ್ರಭೇದಗಳಲ್ಲಿ ಗುರುತಿಸಿರುವ ವೈವಿಧ್ಯವನ್ನು ಕಂಡರೆ ಮಾತ್ರ ನಿಮಗೆ ಖಂಡಿತ ಆಶ್ಚರ್ಯವಾಗುತ್ತದೆ. ಇವುಗಳಿಗೆ ಸಸ್ಯಶಾಸ್ತ್ರದ ಪ್ರಕಾರ ಇರುವ ಹೆಸರನ್ನು ಹೇಳುವುದಾದರೆ ಇವು "ಅಗ್ಯಾರಿಕೇಲಿಸ್ ವಿಭಾಗದಲ್ಲಿ ಬರುವ ಬೆಸಿಡಿಯೋ ಬೀಜಾಣು ವರ್ಗಕ್ಕೆ ಸೇರಿವೆ. ಇದರಲ್ಲಿ ಸುಮಾರು ೧೨೫ ಜಾತಿಗಳೂ ೪,೦೦೦ ಪ್ರಭೇದಗಳೂ ಇದ್ದು ಎಲ್ಲೆಡೆಯೂ ಪಸರಿಸಿವೆ. ಕಣ್ಣಿಗೆ ಕಾಣುವ ಭಾಗದಲ್ಲಿ ಮೇಲುಗಡೆ ಛತ್ರಿಯಾಕಾರದ ಹಣ್ಣಿನ ಭಾಗವಿದ್ದು, ಅದರ ಕೆಳಭಾಗದಲ್ಲಿ ಒಂದು ತೊಟ್ಟು ಹಾಗೂ ಟೊಪ್ಪಿಗೆ ಇವೆ. ಈ ಛತ್ರಿಯಾಕಾರದ ಭಾಗದ ಒಳಭಾಗದಲ್ಲಿ ಹಲವು ಪದರಗಳನ್ನೊಳಗೊಂಡ ಹಾಳೆಪದರಗಳಿವೆ (ಗಿಲ್ಸ್). ಇದರಲ್ಲಿ ಬೆಸಿಡಿಯೋ ಜೀವಾಣುಗಳು ಹುಟ್ಟುತ್ತವೆ. ಅಣಬೆಗಳು ಮಾನವನ ಆಹಾರಕ್ಕೂ ಔಷಧಿಗಳಿಗೂ ಉಪಯುಕ್ತವೆನಿಸಿವೆ..." ಮುಂತಾಗಿ 'ಕನ್ನಡ ವಿಶ್ವಕೋಶ' ಹೇಳುತ್ತದೆ.

ಅಣಬೆಗಳ ಬಗ್ಗೆ ಭಾರತದಲ್ಲಿ ಕೆಲ ಮಟ್ಟಿಗೆ ಸಂಶೋಧನ ಕಾರ್ಯ ನಡೆದಿದೆಯಾದರೂ ಆ ಕ್ಷೇತ್ರದಲ್ಲಿ ಗಮನಾರ್ಹ ಸಂಶೋಧನೆ ನಡೆದುದು, ನಡೆಯುತ್ತಿರುವುದು ಮುಖ್ಯವಾಗಿ ಯುರೋಪು, ಅಮೇರಿಕಗಳಲ್ಲೆ. ಅಣಬೆಗಳಲ್ಲಿ ಕಣ್ಣಿಗೆ ಕಾಣುವ ರೂಪವೈವಿಧ್ಯವೇ ಬೇಕಾದಷ್ಟಿದೆ. ಅವುಗಳ ಮಾಟ, ವರ್ಣಸಂಮಿಶ್ರಣ, ಆಕಾರ ಮುಂತಾದ ವಿಷಯಗಳಲ್ಲಿನ ವೈವಿಧ್ಯವನ್ನು ಕಂಡ ಪ್ರಾಚೀನ ರೋಮನ್ ಮತ್ತು ಗ್ರೀಕರು ಅಣಬೆಗಳು ರಾತ್ರಿ ಜಗವೆಲ್ಲ ಮಲಗಿದಾಗ ದೇವತೆಗಳು ಭೂತಲಕ್ಕೆ ಬಂದು ನರ್ತಿಸುವ ಸಲುದಾಣಗಳೆಂದು ಭಾವಿಸಿದ್ದರು.

ಅಂಥ ಸೌಂದರ್ಯದ ಅನುಭವ ಅಣಬೆಗಳನ್ನು ನೋಡುವ ಯಾರಿಗೂ ಆದೀತು. ಮನುಷ್ಯ ಅಣಬೆಗಳನ್ನು ಕುತೂಹಲದಿಂದ ನೋಡಿದ್ದಾನೆ, ಭಯದಿಂದ ವೀಕ್ಷಿಸಿದ್ದಾನೆ. ಭಾರತೀಯರ ಮಟ್ಟಿಗೆ ಅವುಗಳು ಭಯಾವಹವೇ ಅನಿಸಿವೆ. ಅವರ ಭಯದ ಹಿಂದೆ ಸತ್ಯಾಂಶವೂ ಇದೆ. ಕೆಲ ಜಾತಿಯ ಅಣಬೆಗಳು ಮನುಷ್ಯನಿಗೆ ತೀವ್ರ ಮಾರಕವೂ ಅಹುದು. ಆದರೆ ಆಹಾರದ ಬಗ್ಗೆ ನಮ್ಮಷ್ಟು 'ಮಡಿವಂತ'ರಲ್ಲದ ಅನೇಕರು ಅಣಬೆಗಳು ಮನುಷ್ಯನಿಗೆ ಪೌಷ್ಟಿಕಾಂಶವುಳ್ಳ ಆಹಾರವೂ ಆಗಿವೆಯೆಂದು ಗುರುತಿಸಿದ್ದಾರೆ. ಅಮೇರಿಕದಲ್ಲಿ ಕೆಲವು ವಿಶಿಷ್ಟ ಜಾತಿಯ ಅಣಬೆಗಳನ್ನು ಆಹಾರ ಪದಾರ್ಥವೆಂದೇ ಇಂದಿಗೂ ಬಹು ದೊಡ್ಡ ಪ್ರಮಾಣದಲ್ಲಿ ಬೆಳೆಯುತ್ತಾರೆ. ಅಲ್ಲದೆ ಅಣಬೆಯ ವರ್ಗದಲ್ಲೇ ಹಲವು ಬಗೆಗಳಿಂದ ಪರಿಣಾಮಕಾರಿ ಔಷಧಗಳನ್ನು ತಯಾ-

ರಿಸುತ್ತಿದ್ದಾರೆ. ಇಂದು ಪೆನಿಸಿಲಿನ್‌ನಂತಹ ಪ್ರಭಾವೀ ಔಷಧದ ಮೂಲ ಸಾಮಗ್ರಿ ಅಣಬೆಯ ಜಾತಿಗೆ ಸೇರಿದ ವಸ್ತುಗಳಿಂದಲೇ ದೊರೆಯುತ್ತಿದೆ.

ಅಣಬೆಗಳು ಒಂದು ವಿಶಿಷ್ಟ ಲಕ್ಷಣವೆಂದರೆ ಅವುಗಳಲ್ಲಿ ಇತರ ವನಸ್ಪತಿಗಳಲ್ಲಿರುವಂತೆ ಕ್ಲೋರೋಫಿಲ್ ಇಲ್ಲ. ಆದರಿಂದಾಗಿ ಅವು ತಮ್ಮ ಆಹಾರವನ್ನು ತಾವೇ ಸೃಷ್ಟಿಸಿಕೊಳ್ಳಲಾರವು. ಈ ದೃಷ್ಟಿಯಿಂದ ಇವು ಪರೋಪಜೀವಿಗಳೇ.

ಈ ಲೇಖನದೊಂದಿಗಿರುವ ಪುಟಗಳಲ್ಲಿ ವಿವಿಧ ಬಗೆಯ ಅಣಬೆಗಳನ್ನು ಆಯ್ದುಕೊಂಡಿರುವುದು ಮುಖ್ಯವಾಗಿ ಅವುಗಳ ವೈವಿಧ್ಯಪೂರ್ಣ ನೋಟಕ್ಕಾಗಿ, ಸೃಷ್ಟಿಕರ್ತನ ಮೋಡಿ ಎಂತೆಂಥ ರೂಪಗಳಲ್ಲಿ ವ್ಯಕ್ತವಾಗುತ್ತಿದೆ ಎಂಬುದನ್ನು ಕಲೆಯ ಆರಾಧಕರಾಗಿ ನೋಡುವುದಕ್ಕಾಗಿ.

ಚಿತ್ರ ೧ ರಲ್ಲಿರುವುದು 'ಕಾರ್ಟಿನಾರಿಯಸ್ ವಾಯೋಲಾಸಿಯಸ್' ಎಂಬ ಒಂದು ಪ್ರಭೇಧ. ಅದರ ತಲೆಗಿರುವ ಕೊಡೆಯಾಕಾರದ ಚಕ್ರದ ಕೆಳಗಿರುವ 'ಕಡ್ಡಿ'ಗಳನ್ನು ನೋಡಿ. ಅದರ ಒಂದೊಂದು ಕಡ್ಡಿಯೂ ಅಸಂಖ್ಯ ಬೀಜಕೋಶಗಳನ್ನು ಹೊಂದಿರುತ್ತದೆ. ಅವು ಪಕ್ವಗೊಂಡ ನಂತರ ಉದುರುವುದಲ್ಲದೆ ಗಾಳಿಯಿಂದ ದೂರ ದೂರಕ್ಕೆ ಹಾರಿ ಹೋಗಿ ಮತ್ತೆಲ್ಲೋ ಮೊಳೆತು ಪುನಃ ಈ ಜಾತಿಯ ಅಣಬೆಗಳು ಹುಟ್ಟುವುದಕ್ಕೆ ಕಾರಣವಾಗುತ್ತವೆ. ಈ ಬೀಜಕೋಶಗಳು ಅದೆಷ್ಟು ಸದೃಢವಾಗಿರುತ್ತವೆಂದರೆ ಎಲ್ಲೋ ಬಿದ್ದ ಅವುಗಳಿಗೆ ಫಲಿತವಾಗಲು ಅನುಕೂಲ ಹವಾಮಾನ ಸಿಕ್ಕದಿದ್ದಾಗ ಅವು ಶತಮಾನಗಳ ಕಾಲ ಕಾಯಬಲ್ಲವು. ಮುಂದೆ ಅನುಕೂಲ ವಾತಾವರಣವೇರ್ಪಟ್ಟಾಗ ಮೊಳೆತು ಮೇಲೇಳಬಲ್ಲವು. ಈ ಚಿತ್ರದ ಕೆಳಕ್ಕೆ ಪುಟ್ಟ ಟೇಬಲ್ ಲ್ಯಾಂಪುಗಳಂತೆ ಕಾಣುತ್ತಿರುವ ಅಣಬೆಗಳು 'ಮರಾಸ್ಮಿಯಸ್', ಜಾತಿಯವು. ೨, ೩, ೪ ಮತ್ತು ೫ ರಲ್ಲಿರುವಂಥವು 'ಸೆಪ್,' 'ಇಂಕ್ ಕ್ಯಾಪ್', 'ಮೊರೆಲ್' ಹಾಗು 'ಅಮಾನಿತಾ ಸೀಜರಿ' ಎಂಬ ನಾಲ್ಕು ಬಗೆಯ ಖಾದ್ಯ ಅಣಬೆಗಳು. ಇವುಗಳನ್ನು ಯಾರೂ ಖಂಡಿತ ತಿನ್ನಬಹುದಲ್ಲದೆ ಇವುಗಳನ್ನುಪಯೋಗಿಸಿ ಖಾದ್ಯ ಪದಾರ್ಥಗಳನ್ನು ತಯಾರಿಸುವುದೂ ಇದೆ. ಆದರೆ ಚಿತ್ರ ೯, ೧೦, ೧೧, ೧೨ ರಲ್ಲಿರುವವು ಮಾತ್ರ ಪೂರ್ಣ ವಿಷಕಾರಿ ಅಣಬೆಗಳು. ಇವುಗಳ ಸೌಂದರ್ಯಕ್ಕೆ ಮನಸೋತು ಯಾರಾದರೂ ಇವುಗಳನ್ನು ತಿಂದರೆ ಜೀವವನ್ನೇ ಕಳೆದುಕೊಳ್ಳಬೇಕಾದಂಥ ಅಪಾಯವೂ ಇದೆ. ಇವುಗಳನ್ನು ಅನುಕ್ರಮವಾಗಿ 'ಡೆತ್ ಕ್ಯಾಪ್', 'ಫೂಲ್ಸ್ ಮಶ್ರೂಮ್', 'ಫ್ಲೈ ಅಗಾರಿಕ್', 'ಡೆವಿಲ್ಸ್ ಬೊಲೆಟಸ್' ಎಂದು ಹೆಸರಿಸಲಾಗಿದೆ.

ಚಿತ್ರ ೬ ಮತ್ತು ೭ ರಲ್ಲಿರುವುದು ಮತ್ತೆರಡು ಬಗೆಯ ಖಾದ್ಯ ಅಣಬೆಗಳು–'ಅಗಾರಿಕಸ್ ಬೈಸ್ಪೋರಸ್' ಮತ್ತು 'ಹುಚ್ಚರ ಹೂವಿ'ನಂತೆ ಕಾಣುವ 'ರಸ್ಸುಲಾ ಸೈನೋಕ್ಸಾಂತಾ'. ಚಿತ್ರ ೮ ರಲ್ಲಿ ಕಂಗೊಳಿಸುತ್ತಿರುವ 'ಅಮಾನಿತಾ' ಜಾತಿಯ ಬಿಳಿಯ ಛತ್ರಿಗಳು ಮಾತ್ರ ಭಾರಿ ಅಪಾಯಕಾರಿ. 'ಡಿಸ್ಟ್ರಾಯಿಂಗ್ ಏಂಜೆಲ್' ಎಂಬ ಹೆಸರಿರುವ ಇದನ್ನು ಒಮ್ಮೆ ಕಡಿದರೂ ಸಾಕು ಕೆಲವೇ ತಾಸುಗಳಲ್ಲಿ ಭಯಂಕರ ಹೊಟ್ಟೆ ನೋವು ಸುರುವಾಗಿ ರಕ್ತಕಣಗಳೇ ಒಡೆದು ಕೊನೆಯ ಕ್ಷಣವನ್ನೆದುರುನೋಡುವುದೊಂದೇ ಬಾಕಿ ಉಳಿಯುತ್ತದೆ.

ಯಾವುದು ಖಾದ್ಯ, ಯಾವುದು ವಿಷಾರಿ-ಅಣಬೆ ಎಂಬುದನ್ನು ಗುರುತಿಸುವುದಕ್ಕೆ ಯಾವುದೇ ನಿರ್ದಿಷ್ಟ ನಿಯಮಗಳಿಲ್ಲವೆಂದು ತಜ್ಞರು ಹೇಳುತ್ತಾರೆ. 'ಮೈಕಾಲಜಿ' ಎಂಬ ಒಂದು ಶಾಸ್ತ್ರವೇ ಬೆಳೆದಿದೆಯಾದರೂ ಈಗಲೂ ಅನುಭವವೇ ಇಲ್ಲಿ ದೊಡ್ಡ ಶಾಸ್ತ್ರವೆಂದು ತಜ್ಞರು ಬರೆಯುತ್ತಾರೆ. ✡

# ಪ್ರಜಾಸತ್ತೆಯ ದೇಖಾವೆ

ಲಾಂಗೂಲಾಚಾರ್ಯ

ನನಗೆ ಪ್ರಜಾತಂತ್ರ ಎಂದರೆ ಬಲು ಇಷ್ಟ. ರಾಜಸತ್ತೆಗಿಂತ ಅದರಲ್ಲಿ ಜನಕ್ಕೆ ಹೆಚ್ಚು ಸುಖವಾಗುತ್ತದೆ ಎಂದಲ್ಲ. ಯಾವ ರಾಜ್ಯ ಬಂದರೂ ರಾಗೀ ಬೀಸೋದು ತಪ್ಪೀತೇ ಎಂದು ಹೇಳಿದ ಪತ್ತಿನ ಮಾತು ಇಂದಿಗೂ ಸರಿಯೇ. ಆದರೆ ಪ್ರಜಾತಂತ್ರದಲ್ಲಿ ನಾವು ನಮ್ಮನ್ನು ಆಳುವ ಮೋಸಗಾರರನ್ನು ಆಗಾಗ್ಗೆ ಬದಲಿಸಬಹುದು, ಮೋಸಗಾರರಲ್ಲದವರನ್ನು ಅಧಿಕಾರಕ್ಕೆ ತರಬಹುದು ಎಂದು ಇದರ ಅರ್ಥವಲ್ಲ. ಅದು ಒಳ್ಳೇದೂ ಅಲ್ಲ. ಸಂಭಾವಿತರ ರಾಜ್ಯ ಅಂದರೆ ಆಕಳಿಕೆ ರಾಜ್ಯ. ಇಂಗ್ಲೆಂಡಿನಲ್ಲಿ ಚಾರ್ಲ್ಸ್ ರಾಜನ ತಲೆ ಕಡಿದು ಕ್ರಾಮ್‌ವೆಲ್ ಹನ್ನೆರಡು ವರ್ಷ ರಾಜ್ಯಭಾರ ಮಾಡಿದ. ಭಲೆ ಸಂಭಾವಿತ ವ್ಯಕ್ತಿ. ಕುಡಿದವನಲ್ಲ, ಕುಣಿದವನಲ್ಲ, ಹೆಣ್ಣುಗಳನ್ನು ಕಣ್ಣೆತ್ತಿ ನೋಡಿದವನಲ್ಲ: ಆಚಾರವಂತನೆಂದರೆ ಆಚಾರವಂತ. ಮಡಿ ಮಡಿಯೆಂದು ಮೂರು ಮಾರು ಹಾರುವ ಪುರಂದರದಾಸರ ಚಿಕನಾಸಿಗಿಂತಲೂ ಮಡಿವಂತ. ಅವನು ದೇವಾಲಯಗಳಲ್ಲಿದ್ದ ಚಿತ್ರಗಳನ್ನೆಲ್ಲಾ ತೆಗೆಸಿ ಥಾಳಾಗಿ ಸುಣ್ಣ ಬಳಿಸಿದ. ನಾಟಕ ಕಂಪನಿಗಳನ್ನು ಮುಚ್ಚಿದ. ಇದರಿಂದ ಜನರು ಪಾಪಮುಕ್ತ ಜೀವನ ನಡೆಸಿ ಸ್ವರ್ಗಲೋಕಕ್ಕೆ ಅರ್ಹರಾಗುತ್ತಾರೆಂದು ಆತ ನಂಬಿದ್ದ. ಏನಾಯಿತು? ಸ್ವರ್ಗದಲ್ಲಿ ಮಿತಿಮೀರಿ ಜನದಟ್ಟಣೆಯಾಗಿ ದೇವರಿಗೆ ತಮ್ಮೀ ಸಜ್ಜನ ಭಕ್ತನನ್ನು ಭೂಲೋಕದಲ್ಲಿ ಇನ್ನೂ ಉಳಿಸಿದರೆ ಕ್ಷೇಮವಿಲ್ಲ ಎನಿಸಿರಬೇಕು. ಆಲಿವರ್ ಕ್ರಾಮ್‌ವೆಲ್ಲನಿಗೆ ಕರೆ ಕಳುಹಿದ. ಆತ ಹೋದದ್ದೇ ಸರಿ, ಜನ ಹತ್ತಿಕ್ಕಿಕೊಂಡಿದ್ದ ಆಕಳಿಕೆಯನ್ನೆಲ್ಲಾ ಒಮ್ಮೆಲೇ ಹೊರಗೆ ಬಿಟ್ಟು, ಓಡಿಹೋಗಿ ಪರದೇಶದಲ್ಲಿ ತಲೆ ಮರೆಸಿಕೊಂಡಿದ್ದ ರಾಜಪುತ್ರನನ್ನು ಕರೆತಂದು ಪಟ್ಟಕ್ಕೇರಿಸಿದರು. ಮತ್ತೆ ಅರಸಾಳಿಕೆಯ ಎಲ್ಲಾ ಮೋಜುಗಳೂ ಮೋಸಗಳೂ ಆರಂಭವಾದವು. ನಾಟಕಗಳು ಸುರುವಾದವು. ಜನ ಕುಡಿದರು, ಕುಣಿದರು. ಹಾದರ ಮಾಡಿದರು. ಸಾಯುವವರೆಗೆ ಸುಖವಾಗಿರತೊಡಗಿದರು. ನಮ್ಮ ಮೊರಾರ್ಜಿ ದೇಸಾಯಿಯವರನ್ನು ನಾವು ಯಾಕೆ ಪ್ರಧಾನಮಂತ್ರಿಯಾಗಿ ಮಾಡಲಿಲ್ಲ ಅಂದರೆ ಇದಕ್ಕಾಗಿಯೇ. ಬೀಡಿ, ಸಿಗರೇಟು, ಕುಡಿತ, ಕುಣಿತ, ಸಿನೆಮಾ, ನಾಟಕ, ಬತ್ತಲೆ ಚಿತ್ರ, ಜೂಜು. ಲಾಟರಿ ಇದೊಂದೂ ಇಲ್ಲದ ಕ್ರಾಮ್‌ವೆಲ್ ರಾಜ್ಯವನ್ನು ತರುವುದಕ್ಕೆ ಅವರು ಪ್ರಯತ್ನಿಸುವರೆಂದು ನಮಗೆ ಭಯವಾಯಿತು.

ಇಲ್ಲ ಸ್ವಾಮಿ, ಪ್ರಜಾತಂತ್ರದಲ್ಲಿ ಮೋಸ

---

ಕಳೆದ ತಿಂಗಳಷ್ಟೇ ನಮ್ಮ ಲೋಕಸಭೆಯ ಚುನಾವಣೆಗಳು ಮುಗಿದು ಕೇಂದ್ರ ಸ್ವಾತಂತ್ರ್ಯಾನಂತರ ಪ್ರಪ್ರಥಮ ಸಲ ಕಾಂಗ್ರೆಸ್ಸೇತರ ಸರಕಾರ ಬಂದಿದೆ. ೧೯೭೧ ರ ಚುನಾವಣೆಗಳ ನಂತರ ಆ ವರ್ಷದ ಏಪ್ರಿಲ್ ಸಂಚಿಕೆಯಲ್ಲಿ ಶ್ರೀ ಲಾಂಗೂಲಾಚಾರ್ಯರು ಬರೆದೊಂದು ಹರಟೆ ಪ್ರಕಟವಾಯಿತು. ಅದರಲ್ಲಿಯ ಪ್ರತಿ ಶಬ್ದವೂ ಅರ್ಥವತ್ತಾಗಿರುತ್ತದೆಂಬ ಕಾರಣಕ್ಕಾಗಿ ಅದನ್ನು ಪುನಃ ಈಗಲೂ ಎತ್ತಿಕೊಟ್ಟಿದ್ದೇವೆ, ಓದುಗರಿಗೆ ರುಚಿಸುವುದೆಂಬ ವಿಶ್ವಾಸದಿಂದ.

ಗಾರರು ಇರುವುದಿಲ್ಲೆಂದಾಗಲಿ ಇರಬಾರದೆಂದಾಗಲಿ ನನ್ನ ಹೇಳಿಕೆಯುಲ್ಲ. ಮೋಸಗಾರರೇ ನಮ್ಮನ್ನು ಆಳುವವರು. ಯೇಡ್ಸ್ಗಡ್ಕ ರತ್ನ ಹೇಳಿದ ಹಾಗೆ, "ಮೋಸ ಮಾಡ್ಬೇಕಂತ ಜೇಪ್ತೈಜ್ಜಗತ್ತು." ಆದರೆ ರಾಜಸತ್ತೆಯಲ್ಲಿ ಮತ್ತು ಸರ್ವಾಧಿಕಾರದಲ್ಲಿ ನಿಮ್ಮನ್ನಾಳುವ ಮೋಸಗಾರರನ್ನು ನೀವೇ ಆರಿಸಿಕೊಳ್ಳಲಾರಿರಿ. ಪ್ರಜಾಸತ್ತೆಯಲ್ಲಿ ಆ ಹಕ್ಕು ನಿಮಗಿದೆ. ಈ ಮೋಸಗಾರರು ಒಳ್ಳೆಯವರೆಂಬ ಭ್ರಾಂತಿಯಿಂದ ನಾವು ಅವರಿಗೆ ಮತ ಕೊಡುತ್ತೇವೆಂದಲ್ಲ. ಅವರ ಮೋಸಗಳು ಸಾಕಷ್ಟು ಪಾರದರ್ಶಕವಾಗಿರುತ್ತವೆ. [illegible] ಅವರ [illegible] ಅವರ [illegible] ಸೂತ್ರ-ದಾರನಿಗೆ ಕಣ್ಣೂ ಇಲ್ಲ, ಚರ್ಮವೂ ಇಲ್ಲ ಎಂದ ಹಾಗಾಗುತ್ತದೆ. ಎರಡು ಸೆಟ್ ಕಳ್ಳರ ಪೈಕಿ ಕಡಿಮೆ ಕಳ್ಳರನ್ನು ನಾವು ಆರಿಸುತ್ತೇವೆಂದೂ ಅಲ್ಲ. ಅವರೆಲ್ಲರೂ ರಾಜಕಾರಣದ ಮೋಸಾಟದಲ್ಲಿ ಸುಮಾರಾಗಿ ಒಂದೇ ರ್ಯಾಂಕಿನಲ್ಲಿ ಗ್ರ್ಯಾಜುಯೇಟಿತರಾದವರು. ಒಮ್ಮೆ ಒಂದು ಸೆಟ್ ಕಳ್ಳರನ್ನೂ ಇನ್ನೊಮ್ಮೆ ಇನ್ನೊಂದು ಸೆಟ್ ಕಳ್ಳರನ್ನೂ ನಾವು ಅಧಿಕಾರಕ್ಕೆ ತರುತ್ತೇವೆ.

ಇದರಲ್ಲಿ ಎರಡೊಂದು ಅನುಕೂಲ ಇದೆ. ಒಂದು–ಒಂದು ಸೆಟ್ ಕಳ್ಳರನ್ನು ಇನ್ನೊಂದು ಸೆಟ್ ಕಳ್ಳರ ಮೇಲೆ ಕಣ್ಣಿಡುವುದಕ್ಕೆ ನಾವು ವಿನಿಯೋಗಿಸಿಕೊಂಡಂತಾಗುತ್ತದೆ. ಆದ್ದರಿಂದ ಎಲ್ಲವನ್ನೂ ಕದಿಯುವುದಕ್ಕೆ ಅವರಿಗೆ ಸಾಧ್ಯವಾಗುವುದಿಲ್ಲ. ವಿರೋಧಿ ಕಳ್ಳರು ಕಳ್ಳತನದ ವಿರೋಧಿಗಳಲ್ಲವೆಂದು ನಮಗೆ ಗೊತ್ತು. ವಾಸ್ತವಿಕವಾಗಿ ರಾಜಕಾರಣಿಗಳ ಹಕ್ಕುಬಾಧ್ಯತೆಗಳ ಮೇಲೆಯೇ ಯಾರಾದರೂ ಗದೆ ಎತ್ತುವುದಕ್ಕೆ ಹೊರಟರೆ ಎರಡು ಅಥವಾ ಮೂರು ಅಥವಾ ನಾಲ್ಕು ಅಥವಾ ಅದಕ್ಕೂ ಹೆಚ್ಚು ಪಂಗಡಗಳವರೆಲ್ಲಾ ಒಂದಾಗುತ್ತಾರೆ. ಉದಾಹರಣೆಗೆ ತಮ್ಮ ಸಂಬಳ ಸಾರಿಗೆ ವೈಯುಕ್ತಿಕ ಪ್ರಾಶಸ್ತ್ಯ ಮೊದಲಾದವುಗಳ ವಿಚಾರದಲ್ಲಿ ಅವರೆಲ್ಲರೂ ಏಕಾಭಿಪ್ರಾಯದಿಂದ ಮತ ಕೊಟ್ಟುಕೊಳ್ಳುತ್ತಾರೆ. ವಿರೋಧಿ ಪಕ್ಷಗಳಲ್ಲಿದ್ದವರು ಅಧಿಕಾರದಲ್ಲಿದ್ದವರನ್ನು ಸರ್ವಾಪಹರಣ ಮಾಡಗೊಡದೆ ಇದ್ದರೆ ಅದಕ್ಕೆ ಕಾರಣ ಬೇರೆ ಇದೆ. ತಮಗೆ ಅಧಿಕಾರ ಸಿಕ್ಕಿದಾಗ ಕದಿಯುವುದಕ್ಕೆ ಏನೂ ಉಳಿಯಲಿಕ್ಕಿಲ್ಲ ಎಂಬುದೇ ಅದರ ಹೇತು.

ಎರಡನೇ ಅನುಕೂಲ ಎಂದರೆ ಪ್ರಜಾತಂತ್ರ ಒಳ್ಳೇ ಮನೋರಂಜಕ ನಾಟಕವಾಗಿದೆ. ಎರಡು ಅಥವಾ ಹೆಚ್ಚು ಸೆಟ್ ಕಳ್ಳರು ಸಂಭಾವಿತರ ವೇಷಗಳನ್ನು ಹಾಕಿಕೊಂಡು ಪರಸ್ಪರವಾಗಿ ಜರೆದಾಡುವ ದೃಶ್ಯಗಳು ಪರದಾಚಾರಿ ನಾಟಕಗಳನ್ನು ಬಣ್ಣಗೆಡಿಸುವಂಥವಾಗಿರುತ್ತವೆ. ಕೆಲವರು ಇದನ್ನು ಕ್ರಿಕೆಟ್ ಆಟ ಎನ್ನುವುದುಂಟು. ನಾನು ಒಪ್ಪುವುದಿಲ್ಲ. ಕ್ರಿಕೆಟ್ ಎಂದರೆ ಎರಡು ಸಂಭಾ-ವಿತ ತಂಡಗಳು ಜಗಳಗಂಟರ ಹಾಗೆ ನಟಿಸುತ್ತ ಹೋರಾಡುವುದು. ಅದರಲ್ಲಿ ಆಟಗಾರರು ಚೆಂಡನ್ನು ಒಗೆಯುತ್ತಾರೆ, ಚೆಂಡನ್ನು ಹೊಡೆಯುತ್ತಾರೆ, ಚೆಂಡನ್ನು ಹಿಡಿಯುತ್ತಾರೆ. ಪ್ರಜಾತಂತ್ರದಲ್ಲಿ ಹಾಗಲ್ಲ. ಇಲ್ಲಿ ಜನರು ಒಬ್ಬರಿಗೊಬ್ಬರು ಕಾಲಡ್ಡ ಹಾಕಿ ನೆಲ ಹಿಡಿಸುತ್ತಾರೆ. ಪ್ರಜಾತಂತ್ರವನ್ನು ಆಟಕ್ಕೆ ಹೋಲಿಸಲೇಬೇಕಾದರೆ ಫುಟ್‌ಬಾಲ್ ಆಟಕ್ಕೆ ಹೋಲಿಸಬಹುದು. ಅದರಲ್ಲಿ ಚೆಂಡನ್ನು ಒದೆಯಲಾಗದಿದ್ದರೆ ಎದುರು ಪಕ್ಷದವನ ಕಾಲನ್ನು ಅಥವಾ ಅದರ ಮೇಲ-ಕ್ಕಿರುವ ಯಾವುದೇ ಭಾಗವನ್ನು ಒದೆಯಲಾಗುತ್ತದೆ. ಚೆಂಡೂಂತ ಒದ್ದೆ. ಪಾಪ ನಿನ್ನ ಕಾಲಿಗೆ ಬಡಿಯಿತೇ, sorry! ಎಂದು ಸಂಭಾವಿತತನ ತೋರಿಸಿ ಪಾರಾಗಿಬಿಡಬಹುದು. ಕಾಲು ಮುರಿದುಕೊಂಡವ ಆಟ ಮುಗಿಯುವ ವರೆಗಂತೂ ಆಸ್ಪತ್ರೆಯಿಂದ ವಾಪಸು ಬರಲಾರ.

ಇಂಗ್ಲೆಂಡು ಪ್ರಜಾತಂತ್ರದ ದೇಶ. ಅಲ್ಲಿ ಕ್ರಿಕೆಟ್ಟು ಬಹಳ ಜನಪ್ರಿಯ. ಅವರ ಫುಟ್‌ಬಾಲ್ ಎಲ್ಲಾ ಪಾರ್ಲಿಮೆಂಟಿನಲ್ಲಿ ಆಡಲ್ಪಡು-ತ್ತದೆ. ಆದರೆ ಪಾರ್ಲಿಮೆಂಟರಿ ಪ್ರಜಾಸತ್ತೆ

ಇಲ್ಲದ ದಕ್ಷಿಣ ಅಮೇರಿಕದ ದೇಶಗಳಲ್ಲಿ ಕ್ರಿಕೆಟನ್ನು ಕೇಳುವವರೇ ಇಲ್ಲ. ಅಲ್ಲಿ ಫುಟ್‌ಬಾಲ್ ಜನಪ್ರಿಯ. ಕ್ರಿಕೆಟಿನಲ್ಲಿ ಯಾರಾದರೂ ತಪ್ಪಾಡಿದರೆ "ಹೌಸ್ ಇಟ್ ಅಂಪಾಯರ್?" ಎಂದು ಅಂಪಾಯರನನ್ನು ಕೇಳಲಾಗುತ್ತದೆ. ಆದರೆ ಫುಟ್‌ಬಾಲ್ ಜನಪ್ರಿಯವಾಗಿರುವ ದೇಶಗಳಲ್ಲಿ ಯಾವ ದೇಶದಲ್ಲಿ ಆಟ ನಡೆಯುತ್ತಿದೆಯೋ ಆ ದೇಶದ ಟೀಮಿನವರು ಸೋಲುವ ಹಾಗೆ ಕಂಡರೆ ಅವರು ಅಂಪಾಯರನ ತಲೆಯ ಮೇಲೆ ಪ್ರೇಕ್ಷಕರಿಗೆ ಅಪೀಲು ಮಾಡುತ್ತಾರೆ. ಅಪೀಲು ನ್ಯಾಯಾಧೀಶರು ಬೇಲಿಗಳನ್ನು ಮುರಿದು ಮೈದಾನದಲ್ಲಿ ನುಗ್ಗಿ ಅಂಪಾಯರನನ್ನು ಜಜ್ಜಿ, ಹೊರದೇಶದಿಂದ ಬಂದ ಆಟಗಾರರನ್ನು—ಅಷ್ಟರಲ್ಲೇ ಓಡಿಹೋಗಿರದಿದ್ದರೆ—ಥಳಿಸುತ್ತಾರೆ. ಪ್ರಜಾತಂತ್ರ, ಪಾರ್ಲಿಮೆಂಟು ಇವೆಲ್ಲ ಇದ್ದರೆ ಇದೆಲ್ಲ ಹಿಂಸೆ ಅಗತ್ಯವೇ ಇಲ್ಲ. ಅಹಿಂಸಾವಾದಿಯಾದ ನಾನು ಅಹಿಂಸಾತ್ಮಕ ಫುಟ್‌ಬಾಲ್ ಆದ ಪ್ರಜಾತಂತ್ರದ ಪಾರ್ಲಿಮೆಂಟರಿ ಪ್ರಭುತ್ವಕ್ಕೆ ಬೆಂಬಲ ಕೊಡುವುದಕ್ಕೆ ಇದೂ ಒಂದು ಕಾರಣ.

ಸರ್ವಾಧಿಕಾರಿ ದೇಶಗಳಲ್ಲಿಯೂ ಕಳ್ಳರು ತಮ್ಮೊಳಗೆ ಜಗಳವಾಡುವುದಿಲ್ಲ ಎಂತಲ್ಲ. ವಾಸ್ತವಿಕವಾಗಿ ಜಗತ್ತಿನಲ್ಲಿ ನಿಮ್ಮ ನಮ್ಮಂಥವರು ಇನ್ನೂ ಬದುಕಿ ಉಳಿದಿರುವುದು ನಮ್ಮ ಸ್ವಂತ ಶಕ್ತಿಯಿಂದಲ್ಲ ಎಂದು ನನ್ನ ಮತ. ಕಳ್ಳರು ಇಂದಲ್ಲ ನಾಳೆ ತಂತಮ್ಮೊಳಗೆ ಜಗಳವಾಡಿಯೇ ತೀರುತ್ತಾರೆಂಬುದರಿಂದ ಸಾಮಾನ್ಯರು ಇನ್ನೂ ಉಳಿದುಕೊಂಡಿದ್ದಾರೆ. ಏನು ಹೇಳುತ್ತಿದ್ದೆ?—ಹೌದು, ಸರ್ವಾಧಿಕಾರಿ ದೇಶಗಳಲ್ಲಿಯೂ ರಾಜಕಾರಣಿಗಳು ಕಚ್ಚಾಡುತ್ತಿರುತ್ತಾರೆ. ಆದರೆ ಅವರೆಲ್ಲರೂ ಒಂದೇ ಪಾರ್ಟಿಯವರಾದ್ದರಿಂದ ಗುಟ್ಟು ಹೊರಗೆ ಬೀಳುವುದೇ ಇಲ್ಲ. ನಾಟಕವೆಲ್ಲಾ ಗ್ರೀನ್ ರೂಮಿನಲ್ಲೇ ಮುಗಿದು ಹೋಗುತ್ತೆ. ಏನೊಂದೂ ತಿಳಿಯದೆ ಹೊಂಡದಲ್ಲಿ ಕಾಯುತ್ತ ಕುಳಿತ ಪ್ರೇಕ್ಷಕರಿಗೆ ನಾಟಕದ ಕೊನೇ ಅಂಕದ ಕಡೇ ದೃಶ್ಯದ ಕಡೇ ಭಾಗ ಮಾತ್ರ ತೋರಿಸಲ್ಪಡುತ್ತದೆ. ಕೆಲವು ರುಂಡುಗಳು ಅಕಾರಣವಾಗಿ ರಂಗದ ಮೇಲೆ ಬಂದು ಬೀಳುತ್ತವೆ. ಪರದೆಯ ಹಿಂದಿನಿಂದ ಒಂದು ಅದೃಶ್ಯವಾಣಿ ಹೇಳುತ್ತದೆ: "ಇವರು ಜನತೆಯ ಶತ್ರುಗಳು! ಜನತೆ ಇವರಿಗೆ ತಕ್ಕ ಶಾಸ್ತಿ ಮಾಡಿದೆ! ಇನ್‌ಕಿಲಾಬ್ ಜಿಂದಾಬಾದ್!" ನೀವು ರುಂಡಗಳನ್ನು ಗುರುತಿಸಿ ಆಶ್ಚರ್ಯಪಡುತ್ತೀರಿ. ಏಕೆಂದರೆ, ಈ ರುಂಡಗಳ ಮಾಲಕರೆಲ್ಲ ಜನತೆಯ ಉದ್ಧಾರಕರು ಎಂದು ನಿನ್ನೆಯವರೆಗೆ ನಿಮಗೆ ಹೇಳಲಾಗುತ್ತಿತ್ತು. ಟಿಕೆಟ್ಟು ಕೊಟ್ಟು ಬಂದವರಿಗೆ ನಾಟಕದ ಯಾವ ಸನ್ನಿವೇಶವನ್ನೂ ತೋರಿಸದೆ ಕೇವಲ ಕ್ಲೈಮ್ಯಾಕ್ಸನ್ನಷ್ಟೇ ತೋರಿಸಿದರೆ ಅವರು ಕೊಟ್ಟ ಹಣಕ್ಕೆ ತಕ್ಕ ಪ್ರತಿಫಲ ಸಿಕ್ಕಿದಂತಾಯಿತೇ? ಇದು ಅನ್ಯಾಯವಲ್ಲವೆ?

ಈಗ ಭಾರತದಲ್ಲೇ ನೋಡಿ. ಇದು ಸರ್ವಾಧಿಕಾರಿ ದೇಶವಾಗಿತ್ತು ಅಂದುಕೊಳ್ಳಿ. ೧೯೭೯ ಜೂನ್ ಜುಲೈಯಿಂದ ನೀವು ಉತ್ಸುಕತೆಯಿಂದ ನಾಟ್ಯಶಾಲೆಯ ಹೊಂಡದಲ್ಲಿ ಕಾಯುತ್ತ ಕುಳಿತಿದ್ದೀರಿ. ಗ್ರೀನ್ ರೂಮಿನಲ್ಲಿ ಯಾರು ಯಾರು ಯಾಕೆ ಯಾಕೆ ಆಯಾ ವೇಷ ಹಾಕಿಕೊಂಡರು. ಇದರ ಬಗ್ಗೆ ನಟನಟಿಯರಲ್ಲಿ ಏನೇನು ಜಗಳವಾಯಿತು ಎಂಬುದು ನಿಮಗೆ ಸರಿಯಾಗಿ ತೋರಿಸಲ್ಪಡಲಿಲ್ಲವೆಂಬುದು ನಿಜ. ಆದರೆ ಗ್ರೀನ್ ರೂಮನ್ನು ಯಾವ ನಾಟಕ ಕಂಪನಿಯವರು ತೋರಿಸುತ್ತಾರೆ ಹೇಳಿ? ರಂಗದ ಮೇಲೆ ನಡೆದ ದೃಶ್ಯಗಳು ತುಂಬಾ ಸ್ವಾರಸ್ಯವಾಗಿದ್ದವು, ಎಂಬುದಲ್ಲವೇ ನಿಮಗೆ ಮುಖ್ಯ? ಎರಡೂ ಎರಡೂ ನಾಲ್ಕು ಎನ್ನುವಷ್ಟು ಗಣಿತ ಬಂದವರೆಲ್ಲ ರಂಗದ ಮೇಲೆ ನಡೆಯುವುದನ್ನು ನೋಡಿಯೇ ಗ್ರೀನ್ ರೂಮಿನಲ್ಲಿ ಏನಾಯಿತೆಂದು ತರ್ಕಿಸಿಕೊಳ್ಳಬಲ್ಲವರಾದರು. ನಾಟಕದ ಕೊನೆಯ ದೃಶ್ಯದಲ್ಲಿ ಕಥೆ ಅತ್ಯಂತ ಅನಿರೀಕ್ಷಿತ ತಿರುವನ್ನು ತೆಗೆದುಕೊಂಡು ರಾವಣ ಪಕ್ಷದವರು ಉರುಳಿದರು, ರಾಮಪಕ್ಷದವರು ಗೆದ್ದರು; ಅಥವಾ ನೀವು ಪಕ್ಷಾಂತರ ಮಾಡದವರಾದರೆ ರಾಮಪಕ್ಷದವರು ಬಿದ್ದರು,

ರಾವಣ ಪಕ್ಷದವರು ಗೆದ್ದರು ಎಂದು ಹೇಳುತ್ತೀರಿ. ಹೇಗಾದರೂ ನಾಟಕ ಪ್ರೇಕ್ಷಣೀಯವಾಗಿತ್ತು. ಬಿದ್ದವರು ಸತ್ತಿಲ್ಲವೆಂದು ನಮಗೆ ಖಂಡಿತಾ ಗೊತ್ತಿದೆ. ನೀವು ಒನ್ಸ್‌ಮೋರ್ ಹಾಕಿದರೆ ಅವರು ಎದ್ದು ಶೋಕಗೀತ ಹಾಡಿ ಮತ್ತೊಮ್ಮೆ ಸಾಯುವರೆಂದೂ ನೀವು ಗ್ಯಾರಂಟಿ ಹಿಡಿಯಬಹುದು. ನಾಳೆಯ ದೇಖಾವೆಯಲ್ಲಿ ಈಗ ರಾವಣನಾಗಿದ್ದವನನ್ನು ರಾಮನ ಪಾತ್ರದಲ್ಲಲ್ಲದಿದ್ದರೂ ಹನುಮಂತನ ಪಾತ್ರದಲ್ಲಿ ನೋಡುವ ಛಾನ್ಸ್ ಇದ್ದೇ ಇದೆ.

ಆದರೆ ಇದೇ ನಾಟಕ ರಶಿಯದಲ್ಲಿ ನಡೆದಿತ್ತೆಂದುಕೊಳ್ಳಿ. ಪ್ರೇಕ್ಷಕರು ಇಪ್ಪತ್ತೊಂದು ತಿಂಗಳ ಕಾಲ ಖಾಲಿ ಪರದೆಯನ್ನೇ ತದೇಕ ದೃಷ್ಟಿಯಿಂದ ನೋಡುತ್ತ ಕುಳಿರಬೇಕಾಗುತ್ತಿತ್ತು. ತಮ್ಮಲ್ಲೇ ಗುಜು ಗುಜು ಮಾತಾಡಿ ಗ್ರೀನ್ ರೂಮಿನ ಆಗುಹೋಗುಗಳ ಬಗ್ಗೆ ಚರ್ಚಿಸುವುದ ಸಹಿತ ಅವರಿಗೆ ಸಾಧ್ಯವಿರಲಿಲ್ಲ. ಯಾಕೆಂದರೆ ನಿಮ್ಮ ಬಲಕ್ಕೆ ಕೂತಿರುವವನು ಗುಪ್ತ ಪೋಲೀಸನೋ ಎಡಕ್ಕಿದ್ದವನು ಗುಪ್ತ ಪೋಲೀಸನೋ ಅಥವಾ ನೀವೇ ಗುಪ್ತ ಪೋಲೀಸನೋ ಎಂದು ನಿಮಗೆ ಗೊತ್ತಿರಲಾರದು. ಆಮೇಲೆ ೧೯೭೧ ಮಾರ್ಚ್ ೧೧ರಿಂದ ೧೨ರ ವರೆಗೆ ಕೆಲ ನೂರು ರುಂಡಗಳು ರಂಗಸ್ಥಳದಲ್ಲಿ ಕಾಣಿಸುತ್ತಿದ್ದವು. ಕಾಮರಾಜ, ನಿಜಲಿಂಗಪ್ಪ, ಅತುಲ್ಯ ಘೋಷ, ಸಂಜೀವ ರೆಡ್ಡಿ, ಎಸ್. ಕೆ. ಪಾಟೀಲ ಮೊದಲಾದವರ ರುಂಡಗಳನ್ನು ನೀವು ಗುರುತಿಸುತ್ತಿದ್ದಿರಿ ಮತ್ತು ಓನ್ಸ್‌ಮೋರ್ ಹಾಕಿದ್ದರೆ ಈ ರುಂಡಗಳು ಮೌನವಾಗಿ ತಮ್ಮ ಕಾಣದ ಕಣ್ಣುಗಳಿಂದ ನಿಮ್ಮನ್ನು ಪಿಳಿಪಿಳಿ ನೋಡುತ್ತಿದ್ದವು. ✡



ನೆಪೋಲಿಯನ್ನನ ಸೈನ್ಯ ವಿಯೆನ್ನಾ ಪಟ್ಟಣವನ್ನು ಸುತ್ತುವರಿದಿತ್ತು. ಯುದ್ಧ ಮಾಡದೆ ತಾನಾಗಿಯೇ ಶರಣಾದರೆ ಚೆನ್ನ ಎಂದು ನೆಪೋಲಿಯನ್ ತನ್ನ ದೂತನನ್ನು ಸಂಧಾನಕ್ಕಾಗಿ ಶ್ವೇತಧ್ವಜದೊಡನೆ ನಗರದಲ್ಲಿ ಕಳಿಸಿದ. ಆದರೆ ಫ್ರಾನ್ಸಿನವರ ಬಗ್ಗೆ ತೀರ ವೈರಭಾವವಿದ್ದ ಜನ ಅವನನ್ನು ಕೊಂದುಹಾಕಿದರು. ಇದನ್ನು ಕೇಳಿ ನೆಪೋಲಿಯನ್ ಕ್ರುದ್ಧನಾಗಿ ವಿಯೆನ್ನಾದ ಮೇಲೆ ಯುದ್ಧವನ್ನು ಪ್ರಾರಂಭಿಸಿದ. ಫಿರಂಗಿಗಳು ಬೆಂಕಿಯನ್ನು ಕಾರತೊಡಗಿದವು. ವಿಯೆನ್ನಾ ತತ್ತರಿಸತೊಡಗಿತು. ಆಗ ಒಬ್ಬ ದೂತ ಆ ನಗರದಿಂದ ಸಂಧಿಗಾಗಿ ಶ್ವೇತಧ್ವಜದೊಡನೆ ಬಂದ.

ಆತ ನೆಪೋಲಿಯನ್ನನ ಸೇನಾನಿಯೊಡನೆ, "ಸ್ವಾಮಿ, ತಮ್ಮ ಆಕ್ರಮಣದಿಂದ ನಮ್ಮ ಮಹಾರಾಜರು ವಿವಶರಾಗಿದ್ದಾರೆ. ರಾಜಪುತ್ರಿ ಹಾಸಿಗೆಯನ್ನೇ ಹಿಡಿದಿದ್ದಾಳೆ. ಯುದ್ಧ ನಿಲ್ಲಿಸಿ ದಯೆದೋರಲಾಗದೆ?" ಎಂದ.

"ಅಹುದು! ಅದು ಹೇಗಾದೀತು? ಶಾಂತಿಗಾಗಿ ಕಳಿಸಿದ ದೂತನನ್ನು ನೀವು ಕೊಂದು ಹಾಕಿದ್ದೀರಿ. ಪರಿಸ್ಥಿತಿ ಕೈಮೀರಿದೆಯೆಂದು ಈಗ ಶಾಂತಿಯ ಮಾತಾಡುತ್ತಿದ್ದೀರಿ. ಯುದ್ಧವೇ ನಮ್ಮ ಧರ್ಮ. ಇದರಿಂದ ನಾವು ಹಿಂದೆಗೆಯುವವರಲ್ಲ," ಎಂದ ನೆಪೋಲಿಯನ್ನನ ಸೇನಾಪತಿ.

ಆಗ ನೆಪೋಲಿಯನ್ ಮಧ್ಯೆ ಪ್ರವೇಶಿಸಿ, "ಕ್ಷಾತ್ರಧರ್ಮದ ವಿಷಯ ಈಗ ಬೇಡ. ಮಾನವಧರ್ಮಕ್ಕಿಂತ ಹಿರಿದಾದದ್ದು ಬೇರಾವುದಾದರೂ ಇದೆಯೇ? ರೋಗಗ್ರಸ್ತಳಾದ ರಾಜಕುಮಾರಿಯ ಬಗೆಗೆ ದಯೆದೋರಲೇಬೇಕು," ಎಂದ. ಕೂಡಲೇ ಯುದ್ಧ ನಿಂತಿತು.

# ಎರಡು ಕವನಗಳು

## ಪರಿಪಾಠ

ಅದೇ ಮುಗಿಲ ಚಂಚಲ. ಮತ್ತೆ
ನಿಂತಲ್ಲೇ ನಿಲ್ಲುವ ನೆಲದ ಮೊಂಡು
                    ಹಟ ಇದ್ದಾಗ
ಭಾರಕ್ಕೆ ಹಾಗೇಗು ವಾಲಿ ವರುಷ ಕಳೆದಾಗ
ಬಾಳು ಬೇಸರ ಕಂಡರೆ ಬರಲೇಬೇಕಲ್ಲ
                    ನಶ್ವರಕೆ ಬೆಲೆ!
ಏನಂದಿ?
ಹುಚ್ಚಿ, ನಗುತ್ತೀಯಾ
ನೋಡಲ್ಲ
ನೀನಂತೂ ಸಾವಿರ ಗಾಲಿಯುಡಿ
ಅಂಗಾತ ಮಲಗಿ ಖುಶಿ ನಗುವ
ರಬ್ಬರು ರಸ್ತೆ.
ಈ ಡೊಂಕು ನಾಯಿ ಬಾಲ
ಅಭಿಲಾಷೆ ಇದೆಯಲ್ಲ!
            ಶೀರ-ಮೂಢತ್ವದ ಸೃಷ್ಟಿ ಕಣೆ!
ಆದರೂ ನಾನೇನು ಗಾಳಿ ಮಳೆ ಚಳಿ ತೂರದ
ಖಾಲಿ ಮನೆ ಹೊಳ್ಳೆ ಅಂದಿಯಾ!
ಕಕ್ಕಸು ಬಚ್ಚಲುಗಳ ಬಳಿ ಸೇರದ
ಕೆರೆ ಬಳಿಯ ಜೋರಲು ಅಲ್ಲಾಡದ ಕಲ್ಲೆ!
ಅಲ್ಲ, ನೆತ್ತರ ಹರಿ, ಮಾಂಸದ ಮನ
ಎದೆಯ ಚಡಪಡಿಕೆ
ಮಿದುಳಿನ ಗುಬ್ಬಿ-ಇಪ್ಪಿದರ ಸಜುವ ಜಿಳಿಪ
ತಥಾಪಿ ತಿಳಿಗೇಡಿತನ,
ಪ್ರಾಣದೊಳಗೆ ಕಲಬೆರಸಿ ತಿರಿಚಿ
ಸ್ವಲ್ಪ ಅತ್ತಿತ್ತಾದರೆ ಜೀವ ಕೊಲ್ಲುವ
ಅನಿರ್ವಚನೀಯ ಪ್ರೀತಿಗಳ
                    ಸನಾತನ ಕುಲುಮೆ.

ಗೊತ್ತಿಲ್ಲಾ ಎಂದರೆ ಇದ್ದಲ್ಲೇ ಸುಖ.
ಹೊಳಪು ಬಹಳ. ತೃಪ್ತಿ ಬಹಳ.
ಕೊರಳೆತ್ತಿ ಗಹಗಹನೆ
ನಗುವುದೂ ಬಹಳ.
ಮತ್ತೆ
ಸಾಹಿಸ ನೆನಪೆಲ್ಲಿ ಉಳಿಯುತ್ತದೆ ಹೇಳು!
ನಾಳಿನ ದಿನ ಜೀಕಿ ಜೀಕಿ ಉಲಿಯುವ
ನನ್ನಿನ್ನ ಚಿತೆಯೂ ಮರೆತು
ಹೋಗುತ್ತದೆ.
ಸಂಬಂಧ ಬಿಗಿಯುತ್ತದೆ.
ಒಮ್ಮೆ ಕೈ ಅಡಿಸಿ ನೂಕಿದ ನಿನ್ನನ್ನು
ಇನ್ನೊಮ್ಮೆ ಬರಸೆಳೆದು
ಬದುಕುವಾ
                    ಅಂತ ಕಾಣುತ್ತದೆ.

—ಆನಂದ ಟಿ. ಪೂಜಾರಿ

## ಎಪ್ರಿಲ್

ಉರಿವ ನಾಲಿಗೆ ಚಾಚಿ
ದ ಗುಲ್‌ಮೊಹರ್
ಬಿಟ್ಟ ಕೆಂಗಣ್ಣ ಎಪ್ರಿಲ್
ಹೊತ್ತಿಸುತ್ತದೆ ತಲೆ ತುಂಬ ಅಗ್ನಿ ಕಾಂಡಗಳ.
ಆ ಸ್ವೇಚ್ಛೆಯ ಕಟುಕ
ಹೊಣೆಗೇಡಿ ನಿರ್ಲಜ್ಜ
ಕೆಂಡ ಕಾರುವ ಶಬ್ದಗಳು
ಉರಿವ ಅಗ್ನಿಹೋತ್ರಗಳು
ಕುದಿವ ಪಾತ್ರಗಳು ನಿತ್ಯ
ನೂರು ಯಾತನೆ ಹೊತ್ತು
ನನ್ನ ಕೊರಳ ಸುತ್ತಿದ ಮುತ್ತು
ಗಳ ಮತ್ತು
ಪರಿ ಪರಿ ಸುಟ್ಟು
ವೇಷಗಳ ಬಿಟ್ಟು ಸತ್ಯ
ಸಾವಿರ ಕೊಂಡಿಯ ವೃಶ್ಚಿಕ
ಕಚ್ಚಿದ ಕಾರಣ
ಬಿಚ್ಚಿದ ಉರುಪಿನ ಎಪ್ರಿಲ್
ಬಾ ಅಗ್ನಿಪರೀಕ್ಷೆಗೆ
ನಿಂತೇ ಇರುವೆ ಸೀತೆ
ಸಾಕ್ಷಿಗೆ.

# ಕಪ್ಪು-ಬಿಳುಪು

## ಬ್ರಿಟಿಶ್ ಶಾಸನದ ಗತ್ತು

ನಾನು ರೇಲ್ವೆಯಲ್ಲಿ ಪ್ರವಾಸ ಮಾಡುತ್ತಿದ್ದೆ. ಇಂಗ್ಲೀಷರು ಹೇಗೆ ರಾಜ್ಯವಾಳುತ್ತಿದ್ದರು ಎಂಬ ವಿಷಯದ ಬಗ್ಗೆ ನಮ್ಮ ಡಬ್ಬಿಯಲ್ಲಿ ಕುಳಿತಿದ್ದವರಲ್ಲಿ ಚರ್ಚೆ ನಡೆಯಿತು. ಪ್ರತಿಯೊಬ್ಬರೂ ತಮ್ಮ ತಮ್ಮ ಜೀವನದಲ್ಲಿ ಅನುಭವಕ್ಕೆ ಬಂದ ಒಂದೊಂದು ಘಟನೆಯನ್ನು ಹೇಳತೊಡಗಿದರು. ಡಬ್ಬಿಯಲ್ಲಿ ಕಾನಪುರದ ಟಿಕೆಟ್ ಮಾಸ್ತರರೂ ಇದ್ದರು. ಅವರು ಹೇಳಿದರು:

ನಾನು ಕಾನಪುರದಲ್ಲಿ ಮೇಲ್ತರಗತಿಯ ಟಿಕೆಟ್ಟುಗಳನ್ನು ಮಾರುವ ಕಾರಕೂನ. ಒಂದು ದಿನ ಒಬ್ಬ ಆಂಗ್ಲ ಗೃಹಸ್ಥ ಬಂದು ಚಕೇರಿ ಸ್ಟೇಶನ್ನಿಗೆ ಫಸ್ಟ್‌ಕ್ಲಾಸ್ ಟಿಕೆಟ್ಟು ಕೊಡಲು ಹೇಳಿದ. ಟಿಕೆಟ್ಟಿನ ಬೆಲೆ ಒಂಭತ್ತು ಆಣೆಯಿತ್ತು. ಟಿಕೆಟ್ಟು ಕೊಟ್ಟ ಬಳಿಕ ಆತ ಒಂದು ನೂರು ರೂಪಾಯಿಯ ನೋಟನ್ನು ನನ್ನ ಮುಂದೆಸೆದ.

"ನೂರು ರೂಪಾಯಿಯ ಚಿಲ್ಲರೆ ನನ್ನಲ್ಲಿಲ್ಲ," ನಾನೆಂದೆ.

"ಅದೆಲ್ಲ ನನಗೆ ಗೊತ್ತಿಲ್ಲ. ಎಲ್ಲಿಂದಾದರೂ ತಂದು ಕೊಡು," ಆತ ಹೇಳಿದ.

"ಈ ಸ್ಟೇಶನ್ನಿನಲ್ಲಿ ಹತ್ತು ರೂಪಾಯಿಗಿಂತ ಹೆಚ್ಚು ಚಿಲ್ಲರನ್ನು ಇಟ್ಟುಕೊಳ್ಳುವುದಿಲ್ಲ. ನಾನು ನಿಮ್ಮ ನೋಟಿಗೆ ಚಿಲ್ಲರೆ ಕೊಡಲಾರೆ."

"ಬೇಗ ಕೊಡು. ನಾನು ಈ ಗಾಡಿಗೆ ಹೋಗಲೇಬೇಕು. ಕಾಯುತ್ತ ಕೂಡ್ರಲಾರೆ."

ನಾನು ನನ್ನ ಮೇಲಧಿಕಾರಿಯನ್ನು ಕೇಳಲು ಹೊರಟೆ. ಆ ಆಂಗ್ಲ ಮನುಷ್ಯ ನೂರು ರೂಪಾಯಿಯ ನೋಟನ್ನು ಅಲ್ಲಿಯೇ ಬಿಟ್ಟು ಹೋಗಿ ಗಾಡಿಯಲ್ಲಿ ಕುಳಿತುಬಿಟ್ಟ. ಪೇಚಾಟಕ್ಕಿಟ್ಟುಕೊಂಡ ನಾನು ಮೇಲಧಿಕಾರಿಯ ಬಳಿಗೆ ಹೋಗಿ ಎಲ್ಲವನ್ನೂ ಹೇಳಿದೆ. ಅವರು, "ಸಾಯಲಿ ಮಗ. ಆತ ಫಸ್ಟ್‌ಕ್ಲಾಸ್ ಡಬ್ಬಿಯಲ್ಲಿ ಕುಳಿತಿರಬೇಕು. ಹೋಗಿ ನೂರು ರೂಪಾಯಿಯ ನೋಟನ್ನು ಅವನ ಮುಖಕ್ಕೆಸೆದು ಬಾ. ಟಿಕೆಟ್ಟಿನ ಒಂಭತ್ತಾಣೆಗಳನ್ನು ನಾನು ತುಂಬುತ್ತೇನೆ," ಎಂದರು.

ನಾನು ಓಡೋಡುತ್ತ 'ಪ್ಲ್ಯಾಟ್‌ಫಾರ್ಮಿಗೆ ಹೋದೆ. ಆದರೆ ಫಸ್ಟ್ ಕ್ಲಾಸ್ ಡಬ್ಬಿಯನ್ನು ಮುಟ್ಟುವದರೊಳಗಾಗಿ ಗಾಡಿ ಹೊರಟು ಬಿಟ್ಟಿತು.

ಮಾರನೆಯ ದಿನ ಡಿ. ಟಿ. ಎಸ್.ರಿಂದ ಪತ್ರ ಬಂತು. ಅದರೊಂದಿಗೆ ಇಂಗ್ಲೀಷರವನು ಮಾಡಿಕೊಂಡಿದ್ದ ದೂರಿನ ನಕಲೂ ಇತ್ತು. ಅದಕ್ಕೆ ಉತ್ತರವಾಗಿ ನನ್ನ ಮೇಲಧಿಕಾರಿ ತೊಂಭತ್ತೊಂಬತ್ತು ರೂಪಾಯಿ ಏಳಾಣೆಗಳನ್ನು ಡಿ. ಟಿ. ಎಸ್.ಗೆ ಕಳಿಸಿ, "ನಮ್ಮಲ್ಲಿ ಹತ್ತು ರೂಪಾಯಿಗಳಿಗಿಂತ ಹೆಚ್ಚಿನ ಚಿಲ್ಲರೆ ಇಟ್ಟುಕೊಳ್ಳುವದಿಲ್ಲ. ಆದ್ದರಿಂದ ಅವರಿಗೆ ಚಿಲ್ಲರೆ ಕೊಡಲು ಸಾಧ್ಯವಾಗಲಿಲ್ಲ. ಟಿಕೆಟ್ ಕಾರಕೂನನ ತಪ್ಪೇನೂ ಇದರಲ್ಲಿಲ್ಲ," ಎಂದು ಬರೆದು ತಿಳಿಸಿದರು.

ಒಂದು ವಾರದ ನಂತರ, "ಟಿಕೆಟ್ ಕಾರಕೂನ ಚಿಲ್ಲರೆ ಯಾಕೆ ಕೊಡಲಿಲ್ಲ? ಅವನಿಗೆ ಐದು ರೂಪಾಯಿ ದಂಡ ವಿಧಿಸಿದೆ," ಎಂಬ

ಮತ್ತೊಂದು ಪತ್ರ ಬಂತು.

ಈಗ ಈ ಪ್ರಕರಣ ನನ್ನ ಪ್ರಶ್ನೆಯಾಗಿ ಉಳಿದಿರಲಿಲ್ಲ. ನನ್ನ ಮೇಲಧಿಕಾರಿಯದಾಗಿತ್ತು. ಅವರು ಈ ದಂಡವನ್ನು ಪ್ರತಿಭಟಿಸಿ ಬಲವಾದ ಉತ್ತರ ಬರೆದರು.

ಕೆಲ ದಿನಗಳ ನಂತರ ನನ್ನ ಹೆಸರಿಗೆ ಡಿ. ಟಿ. ಎಸ್.ರಿಂದ ಪತ್ರ ಬಂತು. "ದೊಡ್ಡವರ ಮರ್ಜಿ ಕಾಯಲು ನಿಮಗೆ ದಂಡ ವಿಧಿಸಲಾಗಿದೆ (You are fined simply to please the gentleman.)"

ಇದೇ ಬ್ರಿಟಿಶ್ ಶಾಸನದ ಗತ್ತು.

**ಮಹಾತ್ಮಾ ಭಗವಾನ ದೀನಜಿ**

## ರಾಜಿಂದರ್

ಆಗ ರಾಜೇಂದ್ರಪ್ರಸಾದರನ್ನು ಹೊತ್ತ ಗಾಡಿ ಪಾಟಣಾದಿಂದ ದಿಲ್ಲಿಯ ಕಡೆ ಹೊರಟಿತ್ತು. ಫತ್ತೇಪುರದಲ್ಲಿ ಗಾಡಿ ನಿಲ್ಲುವುದು ಕ್ರಮವಾದರೆ ಅಂದು ಯಾವುದೋ ಕಾರಣದಿಂದ ಫತ್ತೇಪುರಕ್ಕಿಂತ ಹಿಂದಿನ ನಿಲ್ದಾಣವೊಂದರಲ್ಲಿ ಗಾಡಿ ತಳವೂರಿಬಿಟ್ಟಿತು. ಅಲ್ಲಿಂದ ಅದು ಹೊರಡುವುದು ಎರಡು ಗಂಟೆ ತಡವಾಗುತ್ತದೆಂದೂ ತಿಳಿಯಿತು.

ರಾಜೇಂದ್ರಬಾಬು ಪ್ಲ್ಯಾಟ್‌ಫಾರಂ ಕಡೆಗೆ ನೋಡುತ್ತಾ ಸುಮ್ಮನೆ ತಮ್ಮ ಸ್ಥಳದಲ್ಲಿ ಕುಳಿತಿದ್ದರು. ಒಡನೆಯೇ ಅರೆಬತ್ತಲೆಯಾದ ಕೃಶಕಾಯದ ವ್ಯಕ್ತಿಯೊಬ್ಬನನ್ನು ಅವರು ನೋಡಿ ಕೂಗತೊಡಗಿದರು. ರಾಜೇಂದ್ರಬಾಬು ಕರೆಯುವ ಈ ಮಹಾವ್ಯಕ್ತಿ ಯಾರು? ಎಂದು ಎಲ್ಲರೂ ಕುತೂಹಲದಿಂದ ನೋಡತೊಡಗಿದರು. ಆತ ಪ್ರಯಾಣಿಕರಿಗೆ ನೀರು ಕೊಡುವ ಒಬ್ಬ ಸಾಮಾನ್ಯ ನೌಕರ. ಅವನು ರಾಜೇಂದ್ರಬಾಬು ಇರುವ ಗಾಡಿಯ ಕಿಟಕಿಯೊಳಗೆ ತಲೆಹಾಕಿದನು. ಒಡನೆಯೇ ರಾಜೇಂದ್ರಬಾಬು, "ಅರೇ ರಾಮದೇವ್, ನೀನು ಇಲ್ಲಿ ಹೇಗೆ?" ಎಂದು ಕೇಳಿಯೇಬಿಟ್ಟರು.

ನಮಗೆ ಇದಾವುದೂ ಅರ್ಥವಾಗಲಿಲ್ಲ. ಇದು ರಾಜೇಂದ್ರಬಾಬುಗಳಿಗೂ ಗೊತ್ತಾಗಿರಬೇಕು. ಆತನ ಅಂಗೈಯನ್ನು ತಟ್ಟುತ್ತಾ ಅವರು ಪರಿಚಯಮಾಡಿಕೊಟ್ಟರು: "ಇವರು ನಮ್ಮ ಬಾಲ್ಯ ಸ್ನೇಹಿತರು. ಸಣ್ಣವರಾಗಿದ್ದಾಗ ನಾವು ಒಟ್ಟಿಗೇ ಚಿಣಿಫಣಿ, ಕಬಡ್ಡೀ ಆಟಗಳನ್ನು ಆಡಿದವರು. ಒಂದೇ ಶಾಲೆಯಲ್ಲಿ ಕಲಿತವರು." ನಾವು ನೋಡುತ್ತಿರುವಂತೆಯೇ ರಾಜೇಂದ್ರಬಾಬು ಗಾಡಿಯಿಂದ ಹೊರಗೆ ಇಳಿದು ತಮ್ಮ ಬಾಲ್ಯ ಸ್ನೇಹಿತನ ಹೆಗಲ ಮೇಲೆ ಕೈಯಿಟ್ಟು ಸಂತಸದ ನಗೆಯನ್ನು ಬೀರಿದರು.

ರಾಮದೇವನಿಗೆ ಆನಂದಾಶ್ರು ಉಕ್ಕಿಬರುತ್ತಿತ್ತು. ಆತ ಮೂಕನಾಗಿಹೋಗಿದ್ದ. ರಾಜೇಂದ್ರಬಾಬು ಅವನ ತೋಳಿಗೆ ತೋಳು ಸಿಲುಕಿಸಿ ನಡೆಯುತ್ತ, "ಇಲ್ಲಿ ನೀನೇನು ಮಾಡುತ್ತೀ? ಮಕ್ಕಳೆಲ್ಲಿದ್ದಾರೆ?" ಎಂದು ಮುಂತಾಗಿ ತುದಿ ಮೊದಲಿಲ್ಲದ ಪ್ರಶ್ನೆಗಳನ್ನು ಕೇಳಿದರು.

ಇಂಥ ಸ್ನೇಹಹೃದಯಿ ಬಾಲ್ಯಮಿತ್ರನನ್ನು ಹೇಗೆ ಸ್ವಾಗತಿಸಲೆಂದು ಇನ್ನೂ ರಾಮದೇವ ವಿಚಾರಮಾಡುತ್ತ ಗೊಂದಲದಲ್ಲಿದ್ದ. ಆದರೆ ರಾಜೇಂದ್ರಬಾಬು ಎಲ್ಲಿ ಬಿಡಬೇಕು? ಅವನು ನಿಲ್ದಾಣಕ್ಕೆ ಹತ್ತಿರದಲ್ಲಿ ವಾಸಿಸುತ್ತಾನೆಂಬುದನ್ನು ತಿಳಿದುಕೊಂಡ. ಅವರು ಅವನ ಮನೆಯ ಕಡೆಗೆ ಹೊರಟರು. ಅಲ್ಲಿ ಮಿತ್ರನ ಪತ್ನಿ ಮತ್ತು ಪರಿವಾರದವರೊಡನೆ ಮಾತನಾಡಿದರು. ರಾಮದೇವನ ಕೈಲಿ ಮಜ್ಜಿಗೆ ಕುಡಿದು ತಮ್ಮೂರಾದ ಜಿರಾದಿ ಮತ್ತು ಹತ್ತಿರದ ಹಳ್ಳಿಗಳ ಸಮಾಚಾರವನ್ನು ವಿಚಾರಿಸಿದರು. ಹೀಗೆ ಅವರು ಅಂದು ಐವತ್ತು ವರ್ಷಗಳ ಹಿಂದಿನ ಬಾಲ್ಯಜೀವನಕ್ಕೆ ತಿರುಗಿದ್ದರು. ಇಲ್ಲಿ ಅವರು ಕಾಂಗ್ರೆಸ್ ಅಧ್ಯಕ್ಷರಾದ ರಾಜೇಂದ್ರಬಾಬು ಆಗಿರದೆ ಬರಿಯ 'ರಾಜಿಂದರ್' ಆಗಿದ್ದರು.

**ಪ್ರದ್ಯುಮ್ನ ಪಂಡಿತ**

# ಮಾನವಶಾಸ್ತ್ರದಲ್ಲೊಂದು ಪತ್ತೇದಾರಿ

ಶ್ರೀವತ್ಸ ವಟಿ

ಚಾರ್ಲ್ಸ್ ಡಾರ್ವಿನ್ ಸುಮಾರು ಇನ್ನೂರು ವರ್ಷಗಳ ಹಿಂದೆ ಪ್ರತಿಪಾದಿಸಿರುವ ವಿಕಾಸವಾದವು ಪ್ರಪಂಚದ ಜೀವವಿಜ್ಞಾನಿಗಳೆಲ್ಲರ ಮನ್ನಣೆ ಗಳಿಸಿದೆ. ಮಂಗವು ಮಾನವನಾಗಿ ಕೋಟ್ಯನುಕೋಟಿ ವರ್ಷಗಳ ಅವಧಿಯಲ್ಲಿ ಹೇಗೆ ಉನ್ನತಿಗೊಂಡಿತೆನ್ನುವುದನ್ನು ಆತ ಹಂತಹಂತವಾಗಿ ವಿಸ್ತಾರವಾಗಿ ವಿವೇಚಿಸಿದ್ದಾನೆ.

ಕೋತಿಯು ಮಂಗಮಾನವನಾಗಿ ಉತ್ಕ್ರಾಂತಿಗೊಂಡಿತೆಂಬುದನ್ನು ಸಿದ್ಧಪಡಿಸಲು ಅವನಿಗೆ ಸಾಕಷ್ಟು ಪಳೆಯುಳಿಕೆಗಳು ಸಿಕ್ಕಿದ್ದವು. ಜೊತೆಗೆ ಪೀಕಿಂಗ್, ಸ್ವಾನ್ ಕೂಂಬ್ (ಇಂಗ್ಲೆಂಡ್), ಜಾವಾ ದ್ವೀಪ ಮುಂತಾದ ಅನೇಕ ಕಡೆ ಆದಿಮಾನವರ ಅವಶೇಷಗಳೂ ದೊರೆತಿದ್ದವು. ಡಾರ್ವಿನ್ ಇಲ್ಲಿ ಒಂದು ಅಂತರವನ್ನು ಗಮನಿಸಿದ.

ಭೂಮಿಯ ಮೇಲೆ ಎರಡೇ ಕಾಲುಗಳ ಮೇಲೆ ಬಾಗಿಕೊಂಡು ನಡೆದು ಮುಂದಿನ ಕಾಲುಗಳನ್ನು ಬೇರೆ ಕೆಲಸಗಳಿಗೆ ಇಂದಿನ ಕೈಗಳಂತೆ ಉಪಯೋಗಿಸಲಾರಂಭಿಸಿದ ಪ್ರಪ್ರಥಮ ಪ್ರೈಮೇಟ್ ಎನಿಸಿದ ತ್ರಿಯನ್‌ಸ್ಟೈಲ್‌ನಿಂದ ಬಿಡದು, ಸೊಂಟವನ್ನು ಬಲಪಡಿಸಿಕೊಂಡು ಎರಡು ಕಾಲುಗಳಿಂದಲೇ ಓಡಾಡುತ್ತ, ಕೈಗಳನ್ನು ಸಂಪೂರ್ಣವಾಗಿ ಬೇರೆ ಕೆಲಸಗಳಿಗೆ

ಉಪಯೋಗಿಸಿಕೊಂಡಂತಹ ಆಸ್ಟ್ರಲೋಪಿಥಿಕಸ್‌ಗಳವರೆಗೆ ಹಂತಹಂತವಾಗಿ ವಿಕಾಸಗೊಂಡಿದ್ದು ಸ್ಪಷ್ಟವಿದೆ. ಅದರ ಮುಂದಿನ ಹಂತವಾಗಿ ಆದಿಮಾನವರ ಅವಶೇಷಗಳಿವೆ. ಆಸ್ಟ್ರಲೋಪಿಥಿಕಸ್‌ಗಳು ಬುದ್ಧಿವಂತ ಜೀವಿಗಳಾದದ್ದು ಹೇಗೆ? ಎಂದು ಡಾರ್ವಿನ್ನನಿಗೆ ಸಂಶಯ ಬಂದಿತು. ಏಕೆಂದರೆ ಆಸ್ಟ್ರಲೋಪಿಥಿಕಸ್‌ಗಳು ನಡೆಯುವನ್ನೂ ಕೈಗಳನ್ನೂ ಅಭಿವೃದ್ಧಿಪಡಿಸಿಕೊಂಡು ನೇರವಾಗಿ ನಿಂತು ಓಡಾಡುವ, ಸಮತೋಲನವನ್ನು ಕೈಕೊಳ್ಳುವ ಯೋಗ್ಯತೆಯನ್ನು ಸಂಪಾದಿಸಿಕೊಂಡಿದ್ದವು. ಆದರೆ ಅವುಗಳ ಮಿದುಳು ಇನ್ನೂ ವಿಕಾಸಗೊಂಡಿರಲಿಲ್ಲ. ಹಣೆ ಮುಂದೆ ಚಾಚದೆ ಹುಬ್ಬುಗಳ ಏಣು ಹಾಗೇ ಉಳಿದಿತ್ತು. ಬುರುಡೆಯಲ್ಲಿ ಮಿದುಳಿಗೆ ಸಾಕಷ್ಟು ಹೆಚ್ಚಿನ ಜಾಗವಿರಲಿಲ್ಲ. ಆದರೆ ಜಾವಾ, ಪೀಕಿಂಗ್‌ನಲ್ಲಿ ಸಿಕ್ಕಿದ ಆದಿಮಾನವರ ಮಿದುಳು ಸಾಕಷ್ಟು ಬೆಳೆದಿದ್ದು, ಅವರು ಯೋಚಿಸಬಲ್ಲ, ನೆನಪುಮಾಡಿಕೊಳ್ಳಬಲ್ಲ ಲಕ್ಷಣಗಳನ್ನು ಹೊಂದಿದ್ದರು. ಈ ಆದಿಮಾನವರು ಬೇಟೆಯಾಡುವ ಚುರುಕನ್ನೂ, ಕಲ್ಲನ್ನು ಕಡಿದು ಆಯುಧಗಳನ್ನು ತಯಾರಿಸಿ ಪ್ರಯೋಗಿಸುವ ಜಾಣ್ಮೆಯನ್ನೂ ಹೊಂದಿದ್ದರು. ಆಸ್ಟ್ರಲೋಪಿಥಿಕಸ್ ಕೇವಲ ಮಂಗಮಾನವ. ಆದಿಮಾನವರು ಸಂಪೂರ್ಣ ಮಾನವರು. ಆಸ್ಟ್ರಲೋಪಿಥಿಕಸ್ ಧಿಡೀರನೆ ಮಾನವನಾಗಿರಲು ಸಾಧ್ಯವಿಲ್ಲ. ಅದಕ್ಕೂ ಮಾನವರಿಗೂ ಮಧ್ಯೆ ವಿಕಾಸಗೊಳ್ಳುತ್ತಿದ್ದ ಮಿದುಳನ್ನು ಬೆಳೆಸಿಕೊಳ್ಳುತ್ತಿದ್ದಂತಹ ಒಂದು ವರ್ಗ—ಇದನ್ನು ಸಧ್ಯಕ್ಕೆ "ಮಾನವಮಂಗ" ಎಂದು ಹೆಸರಿಸಬಹುದು—ಇರಬೇಕು ಎಂದು ಊಹಿಸಿ, ಅದನ್ನು ಕಪಿಮಾನವ ಹಾಗೂ ಆದಿಮಾನವರ ಮಧ್ಯೆ ಕಾಣೆಯಾಗಿರುವ ಕೊಂಡಿ ಅಥವಾ ಮಿಸ್ಸಿಂಗ್ ಲಿಂಕ್ ಎಂದು ಡಾರ್ವಿನ್ ತೀರ್ಮಾನಿಸಿದ.

ಸಾಕಷ್ಟು ಆಧಾರಗಳಿಂದ ಡಾರ್ವಿನ್ ಮಂಡಿಸಿದ್ದರಿಂದ ವಿಜ್ಞಾನಿಗಳು ಇದನ್ನು ಸ್ವಾಗತಿಸಿದರು. ಅದರ ಹಿಂದೆಯೇ 'ಕಾಣೆಯಾದ ಕೊಂಡಿ'ಗಾಗಿ ರಭಸದ ಶೋಧನೆ ಮುಂದುವರಿಯಿತು. ಆದರೆ ಬಹಳ ಕಾಲದ ವರೆಗೆ ಇದರ ಮೇಲೆ ಬೆಳಕು ಚೆಲ್ಲುವಂತಹ ಯಾವುದೇ ಸಾಕ್ಷಿ ಸಿಕ್ಕಿರಲಿಲ್ಲ. ೧೯೦೭ರಲ್ಲಿ ಜರ್ಮನಿಯ ಡಾ. ಒಟ್ಟೋ ಪೊಟೆನ್ಸಾಕ್ ಎಂಬಾತನಿಗೆ ಹೈಡಲ್‌ಬರ್ಗ್ ಪಟ್ಟಣದ ಸಮೀಪದಲ್ಲಿ ಭದ್ರವಾದ ಹಲ್ಲುಗಳನ್ನು ಹೊಂದಿದ ಒಂದು ಕೆಳದವಡೆ ಸಿಕ್ಕಿತು. ಕಳೆದುಹೋದ ಕೊಂಡಿಯ ಅವಶೇಷ ಇದೆಂದು ಜೀವವಿಜ್ಞಾನಿಗಳು ಕೂಡಲೆ ಅದರ ಮೇಲೆ ಮುಗಿಬಿದ್ದರು.

ಆದರೆ ಅದರ ಬಗ್ಗೆ ಸಂಶೋಧನೆ ನಡೆಯುತ್ತಿದ್ದಾಗಲೇ ವಿಜ್ಞಾನ ಜಗತ್ತಿಗೆ ಸವಾಲೊಡ್ಡುವಂತಹ ಮತ್ತೊಂದು ಪಳಿಯುಳಿಕೆ ಸಿಕ್ಕಿತು. ಇದನ್ನು ಕಂಡುಹಿಡಿದಾತ ಇಂಗ್ಲೆಂಡಿನ ನಿವಾಸಿಯಾದ ಚಾರ್ಲ್ಸ್ ಡಾಸನ್ ಎಂಬುವವನು. ೧೯೧೧ರಲ್ಲಿ ಈತ ಪಿಲ್ಟ್‌ಡೌನಿನಲ್ಲಿ ತನಗೆ ಸಿಕ್ಕಿತೆಂದು ತಲೆಬುರುಡೆಯ ಒಂದು ಭಾಗ ಮತ್ತು ಒಂದು ಕೆಳದವಡೆಯನ್ನು ತಂದು ಕೊಟ್ಟ. ಅದನ್ನು ನೋಡಿದಾಗ ಅದರ ಮಿದುಳಿನ ಭಾಗ ಸುಮಾರು ೨೦೦ ಘನ ಸೆಂಟಿಮೀಟರ್‌ಗಳಷ್ಟು ಬೆಳೆದಿದ್ದು ಹಣೆಯು ಮುಂದೆ ಚಾಚಿಕೊಂಡಿದ್ದು, ಹುಬ್ಬಿನ ಏಣುಗಳು ಮಾಯವಾಗಿದ್ದುದು ಕಂಡುಬಂತು. ಆದರೆ ಇದರ ಕೆಳದವಡೆಯ ಲಕ್ಷಣ ಆದಿಮಾನವನದಾಗಿರಲಿಲ್ಲ. ಅದು ಆಸ್ಟ್ರಲೋಪಿಥಿಕಸ್‌ಗಳಿಗಿಂತ ಹಿಂದಿನ ಕಾಲದ ಮಂಗಗಳನ್ನು ಅಥವಾ ಇಂದಿನ ಏಪ್ (Ape—ಅಂದರೆ ಗೋರಿಲ್ಲಾ, ಚಿಂಪಾಂಜಿಯಂತಹ ಬಾಲವಿಲ್ಲದ ನರವಾನರು)ಗಳಂಥವುಗಳ ಕೆಳದವಡೆಯಾಗಿತ್ತು. ಆದರೆ ಅವುಗಳಂತೆ ನೀಳವಾಗಿದ್ದು, ಬಾಗಿರದ, ಇಂದಿನ ಮಾನವರನ್ನು ಹೋಲುವ ಕೋರೆಹಲ್ಲು ಹಾಗೂ ಇತರ ಹಲ್ಲುಗಳನ್ನು ಹೊಂದಿತ್ತು. ಪೂರ್ಣವಾಗಿ

ಆಸ್ಟ್ರಲೋಪಿಥಿಕಸ್‌ನಂತಾಗಲೀ ಹೋಲುವ ಈ ಅವಶೇಷ ಅವೆರಡಕ್ಕೂ ನಡುವಿನದಾಗಿರಬಹುದು ಎಂದು ಊಹಿಸಿದ ವಿಜ್ಞಾನಿಗಳು ಕಡೆಗೂ ಕಾಣೆಯಾದ ಕೊಂಡಿ ಸಿಕ್ಕೇಬಿಟ್ಟಿತು! ಎಂದು ಖುಷಿಪಟ್ಟರು.

ಮುಂದಿನ ಪರೀಕ್ಷೆಗಳಲ್ಲಿ ಈ ಮೂಳೆಗಳು ಆಸ್ಟ್ರಲೋಪಿಥಿಕಸ್ ಅಥವಾ ಆದಿಮಾನವರ ಅವಶೇಷಗಳು ನೀಡಿದ ವಿವರಗಳಿಗಿಂತ ಹೆಚ್ಚಿನ ಮಾಹಿತಿಯನ್ನು ಕೊಡುವ ಬದಲು ಇಲ್ಲದ ಸಮಸ್ಯೆಯನ್ನೇ ತಂದೊಡ್ಡಿದವು. ಏಕೆಂದರೆ ಮಾನವ ವಿಕಾಸದಲ್ಲಿ ಕಂಡುಬರುವ ಪ್ರಮುಖ ಅಂಶವೇಂದರೆ ಸೊಂಟದ ಮೂಳೆಯ ಬೆಳವಣಿಗೆ ಹಾಗೂ ಬೆನ್ನೆಲುಬಿನಲ್ಲಿ S ಆಕಾರದ ಮಾರ್ಪಾಡು (ಇದು ನೆಟ್ಟಗೆ ನಿಲ್ಲುವ ಪ್ರಯತ್ನ). ನಂತರ ಕೈಗಳ ಬೆಳವಣಿಗೆ, ಕೆಳದವಡೆಗಳು ದೃಢವಾಗುತ್ತ ಬಂದದ್ದು. ಇವೆಲ್ಲದರ ನಂತರ ಮಿದುಳಿನ ವಿಕಾಸ. ಆದರೆ ಈ ಮೂಳೆಗಳಲ್ಲಿ ಮಿದುಳು ಸಾಕಷ್ಟು ಬೆಳವಣಿಗೆ ಹೊಂದಿದ್ದರೂ ಕೆಳದವಡೆ ಇನ್ನೂ ಬಹಳ ಹಿಂದಿನವರದಂತಿತ್ತು. ಕೆಳದವಡೆ ಬೆಳವಣಿಗೆ ಹೊಂದದೆ ಮಿದುಳು ಹೇಗೆ ವಿಕಾಸಗೊಂಡಿತು? ಎಂಬ ಪ್ರಶ್ನೆ ಈಗ ವಿಜ್ಞಾನಿಗಳ ಮುಂದೆ ಬಂತು.

ಉತ್ತರ ಸುಲಭವಾಗಿರಲಿಲ್ಲ. ಕೆಲವು ವಿಜ್ಞಾನಿಗಳು ಸಂಬಂಧವಿಲ್ಲದ ಈ ಎರಡು ಮೂಳೆಗಳು ಒಂದೇ ವ್ಯಕ್ತಿಯದಾಗಿರದೆ ಬೇರೆ ಬೇರೆಯ ಜೀವಿಗಳದೇಕಾಗಿರಬಾರದು? ಎಂದು ವಾದಿಸಿದರು. ವಾದ ಸಮಂಜಸವಾಗಿ ಕಂಡರೂ ಅದನ್ನು ಸಿದ್ಧಪಡಿಸುವಹಾಗಿರಲಿಲ್ಲ. ಏಕೆಂದರೆ ಮಾನವಶಾಸ್ತ್ರ ಅಲ್ಲಲ್ಲಿ ಸಿಕ್ಕಿದ ಚೂರುಪಾರುಗಳನ್ನು ಆಧರಿಸಿದ ಊಹೆಗಳ ಆಧಾರದ ಮೇಲೆ ನಿಂತಿರುತ್ತದೆ. ಸಾಕಷ್ಟು ಸಾಕ್ಷಿ–ಆಧಾರಗಳಿಲ್ಲದೆ ಒಮ್ಮೆಲೇ ಇದು ಇಂಥದು ಅದು ಅಂಥದೇ– ಎಂದು ನಿರ್ಧಾರಕ್ಕೆ ಬರುವಂತಿಲ್ಲ. ಇದಕ್ಕೊಂದು ಉತ್ತಮ ಉದಾಹರಣೆಯೆಂದರೆ– ಜರ್ಮನಿ

ಪದ ನಿಯಾಂಡರ್ ಕಣಿವೆಯಲ್ಲಿಯ ಗುಹೆಯೊಂದರಲ್ಲಿ (೧೮೫೬ರಲ್ಲಿ ಇರಬಹುದು) ಮಾನವ ಅವಶೇಷವೊಂದು ಪತ್ತೆಯಾದದ್ದು. ಇದಕ್ಕೂ ಮುಂದುವರಿದ ಆದಿಮಾನವನ ಲಕ್ಷಣಗಳಿದ್ದು ಆದರ ಮಿದುಳು ಸುಮಾರು ೧೪೦೦ ಘನ ಸೆಂಟೀಮೀಟರಿನಷ್ಟು ವಿಕಾಸಗೊಂಡಿತ್ತು. (ಇಂದಿನ ಮಾನವ ಮಿದುಳಿನ ಪ್ರಮಾಣ ೧೩೫೦ ರಿಂದ ೧೫೦೦ ಘ. ಸೆಂ.) ಸೊಂಟ ಬೆನ್ನುಮೂಳೆ ಹಾಗೂ ಕೈಗಳನ್ನು ಪರಿಶೀಲಿಸಿದರೆ ಇದು ಆದಿಮಾನವನಿಗಿಂತ ಮುಂದುವರೆದಂತಿತ್ತು. ಆದರೆ ತಲೆಬುರುಡೆ ಮಾಮೂಲಿನಂತೆ ಹಿಂಭಾಗದಲ್ಲಿ ಜೋಡಿಸಲ್ಪಟ್ಟಿರದೇ, ಇದರ ಕಾಂಡೈಲು (ಕಶೇರು ಮಗೆಯೊಂದಿಗೆ ತಲೆಬುರುಡೆ ಜೋಡಿಸಲ್ಪಡುವ ಭಾಗ) ಮುಂದೆ ಹೋಗಿತ್ತು. ಹೀಗಿದ್ದರೆ ಆ ವ್ಯಕ್ತಿ ನೇರವಾಗಿ ನಡೆಯಲು ಸಾಧ್ಯವಿಲ್ಲ. ನೆಟ್ಟಗೆ ನಿಲ್ಲದೆ ಈ ಜೀವಿ ಹೇಗೆ ಇಷ್ಟೊಂದು ವಿಕಾಸಹೊಂದಿತ್ತು? ಎಂದು ವಿಜ್ಞಾನಿಗಳು ತಲೆ ಕೆಡಿಸಿಕೊಂಡರು. ಮುಂದೆ ಅದೇ ನಿಯಾಂಡರ್ ಕಣಿವೆಗಳಲ್ಲೇ ಸಿಕ್ಕಿದ ಇನ್ನು ಕೆಲವು ಅವಶೇಷಗಳಲ್ಲಿನ ಬುರುಡೆಗಳಲ್ಲಿ ಕಾಂಡೈಲು (ಬುರುಡೆಯ ಹಿಂಭಾಗಕ್ಕೆ ಮಾಮೂಲು ಜಾಗದಲ್ಲಿ) ಕೀಲಿಸಲ್ಪಟ್ಟಿತ್ತು. ಕೊನೆಗೆ ಮೊದಲು ಸಿಕ್ಕಿದ ಬುರುಡೆಯೂ ಇದೇ ಪ್ರಭೇದದ ಬೇರೆ ಬುಡಕಟ್ಟಿನವನದಿರಬಹುದೇನೋ ಎಂದು ವಿಜ್ಞಾನಿಗಳು ಶಂಕೆ ತಾಳಿದರು. ಆದರೆ ಮುಂದಿನ ಪರೀಕ್ಷೆಗಳಿಂದ ಅವೆಲ್ಲ ಒಂದೇ ಕಾಲದ ಒಂದೇ ಬುಡಕಟ್ಟಿನ ಜನರದ್ದೇ; ಈ ವ್ಯಕ್ತಿ ಮಾತ್ರ ಆರ್ಥ್ರೈಟಿಸ್ ರೋಗದಿಂದ ನರಳುತ್ತಿದ್ದು, ವಿಕಾರ ಉಂಟಾಗಿತ್ತು ಎಂದು ತಿಳಿದು ಬಂತು!

ಇವೆಲ್ಲ ಜನರನ್ನು ನಿಯಾಂಡರ್ಥಲ್ ಜನರು ಎಂದು ಕರೆದರು. ಏಕೆಂದರೆ ಒಂದೇ ಪ್ರಭೇದಕ್ಕೆ ಸೇರಿದ ವಿವಿಧ ಬುಡಕಟ್ಟುಗಳನ್ನು

ಜಾವಾ ಮಾನವನೆಂದೇ ಅದನ್ನು ಕರೆಯುವುದು ರೂಢಿಯಲ್ಲಿರುವ ಪದ್ಧತಿ ಪೀಕಿಂಗ್ ಮಾನವ, ಜಾವಾ ಮಾನವ, ಸ್ವಾನ್ ಕೂಂಬ್ ಮಾನವ–ಇವೆಲ್ಲ ಹೆಸರುಗಳು ಹೀಗೆ ಬಂದುವೇ. ಇವೆಲ್ಲವೂ ಹೋಮೋ ಎರಕ್ಟಸ್ ಪ್ರಭೇದಕ್ಕೆ ಸೇರಿದ ವಿವಿಧ ಬುಡಕಟ್ಟುಗಳು. ಹೀಗೆಯೇ ನಿಯಾಂಡರ್ಥಲ್ ಕಣಿವೆಯಲ್ಲಿ ಸಿಕ್ಕಿದ ಮಾನವ ಅವಶೇಷಗಳಿಗೆ 'ನಿಯಾಂಡರ್ಥಲ್ ಮಾನವ'ರ ಅವಶೇಷಗಳೆಂದು ಹೆಸರಾಯಿತು. ೧೯೦೭ ರಲ್ಲಿ ಡಾ. ಒಟ್ಟೋ ಶೊಟೆನ್ಸಾಕ್‌ಗೆ ಹೈಡಲ್‌ಬರ್ಗ್‌ನಲ್ಲಿ ಸಿಕ್ಕಿದ ಕೆಳದವಡೆ, ನಿಯಾಂಡರ್ಥಲ್ ಮನುಷ್ಯರ ಜೀವರಚನೆಯನ್ನೇ ಹೊಂದಿದ್ದು ಕೆಲವು ವ್ಯತ್ಯಾಸಗಳಿದ್ದುದರಿಂದ ಅದನ್ನು "ಹೈಡಲ್‌ಬರ್ಗ್ ಮಾನವ" ಎಂದೇ ಕರೆದರು.

ಹಾಗೆಯೇ ಚಾರ್ಲ್ಸ್ ಡಾಸನ್ ತಂದುಕೊಟ್ಟ ಪ್ರಸ್ತುತ ಅವಶೇಷಗಳಿಗೆ "ಪಿಲ್ಟ್‌ಡೌನ್ ಮಾನವ" ಎಂದು ತಾತ್ಕಾಲಿಕವಾಗಿ ಹೆಸರಿಟ್ಟು ಮುಂದುವರಿದರು. ನಿಯಾಂಡರ್ಥಲ್ ಮಾನವ ರೋಗಗ್ರಸ್ತನಾಗಿದ್ದಂತೆ ಪಿಲ್ಟ್‌ಡೌನ್ ಮಾನವನಲ್ಲಿ ಯಾವುದಾದರೂ ವಿಕೃತಿ ಇರಬೇಕೇ ಎಂಬೊಂದು ಶಂಕೆ ಉಂಟಾಗಿ, ಅದರ ಶೋಧನೆಯು ಹೊಸ ಜಾಡು ಹಿಡಿಯಿತು. ಅದೇ ಪಿಲ್ಟ್‌ಡೌನ್ ಮಾನವನ ಹೂರಣ ಹೊರಗೆ ಹಾಕಲೂ ಸಹಾಯ ವಾಯಿತೆನ್ನಬೇಕು.

ಈ ತಿರುವಿನಲ್ಲಿ ಒಂದು ಅಂಶ ಹೊರಬಿತ್ತು. ಪಿಲ್ಟ್‌ಡೌನ್ ಮಾನವನ ಬುರುಡೆ ಹೋಮೋ ಎರಕ್ಟಸ್‌ಗಳಷ್ಟು ಮುಂದುವರೆದದ್ದು. ಆದರೆ ಕೆಳದವಡೆ ಮಾತ್ರ ಏಪ್‌ಗಳಷ್ಟು ಹಿಂದುಳಿದದ್ದು! ಏನೇ ವಿಕೃತಿ ಇದ್ದರೂ ಇಷ್ಟೊಂದು ವ್ಯತ್ಯಾಸ ಇರಲು ಸಾಧ್ಯವಿಲ್ಲ ಎಂದು ನಿರ್ಧಾರವಾಯಿತು. ಆಗ "ತಲೆಬುರುಡೆ ಹಾಗೂ ಕೆಳದವಡೆ ಒಂದೇ ಪ್ರಾಣಿಯದಲ್ಲ" ಎಂದು ಹಿಂದೆ ವಾದಿಸಿದ್ದವರ ವಾದಕ್ಕೆ ಬೆಲೆ ಬಂತು. ಇದರಿಂದ ಪಿಲ್ಟ್‌ಡೌನ್ ಮಾನವನ ಕಾಲ ಪರೀಕ್ಷೆಮಾಡುವುದು ಅನಿ-

ಹೀಗೆ ಅದನ್ನು ಪರೀಕ್ಷೆಗೆ ಒಳಪಡಿಸಿದಾಗ ಈ ವಾದವೇ ನಿಜವೆನ್ನಿಸಿತು. ಏಕೆಂದರೆ ಕೆಳದವಡೆ ಯಲ್ಲಿ ಕಂಡುಬಂದ ನೈಟ್ರೋಜನ್ ಅಂಶ ಇಂದಿನ ಗೋರಿಲ್ಲಾದಷ್ಟು; ಬುರುಡೆಯು ಆದಿ-ಮಾನವ ಕಾಲದ್ದು. ಜತೆಗೆ ಬುರುಡೆಯಲ್ಲಿ ಶೇಖರವಾಗಿದ್ದ ಫ್ಲೋರಿನ್‌ಗೂ ದವಡೆಯಲ್ಲಿದ್ದ ಫ್ಲೋರಿನ್‌ಗೂ ಅಜಗಜಾಂತರ ವ್ಯತ್ಯಾಸವಿತ್ತು. ಆದ್ದರಿಂದ. ಇವೆರಡರಲ್ಲಿ ಒಂದೊಂದಕ್ಕೂ ಸಂಬಂಧವಿಲ್ಲ. ಎರಡೂ ಬೇರೆ ಬೇರೆ ಕಾಲದ ಬೇರೆ ಬೇರೆ ಜೀವಿಗಳ ಅವಶೇಷಗಳು ಎಂದು ತೀರ್ಮಾನವಾಯಿತು.

ಮುಂದೆ ಪಿಲ್ಟ್‌ಡೌನ್ ಬುಡಕಟ್ಟಿನ ಮಾನವ ನಿದ್ದ ಎಂಬ ನಂಬಿಕೆ ಕುಸಿಯುತ್ತ ನಡೆಯಿತು, ಆದರೆ ಸಂಶೋಧನೆ ಸ್ಥಗಿತವಾಗಲಿಲ್ಲ, ಬದಲು ಚಿಕಿತ್ಸಕ ಬುದ್ಧಿಯಿಂದ ಮುಂದುವರಿಯಿತು; ಗೋರಿಲ್ಲಾದ ಕೋರೆ ಹಲ್ಲು ನೀಳವಾಗಿದ್ದು ಕಿತ್ತು ತಿನ್ನಲು ಅನುಕೂಲವಾಗುವಂತೆ ಬಾಗಿ-ರುತ್ತದೆ. ಆದರೆ ಪಿಲ್ಟ್‌ಡೌನ್ ಮಾನವನ ಕೆಳದವಡೆಯ ಹಲ್ಲುಗಳು ಇಂದಿನ ಮಾನವ-ನಂತಿದ್ದುವೇಕೆ? ಕೋರೆಹಲ್ಲುಗಳನ್ನೂ ಇತರ ಹಲ್ಲುಗಳನ್ನೂ ಮಾನವನ ಹಲ್ಲಿನಂತೆ ಕಾಣುವ ಹಾಗೆ ಸಾಣೆ ಹಿಡಿದು ಉಜ್ಜಲಾಗಿತ್ತು. ೧೯–೨೦ ನೇ ಶತಮಾನದ ಗೋರಿಲ್ಲಾದ ದವಡೆ ಯನ್ನು ಆದಿಮಾನವನ ತಲೆಯೊಳಗೆ ಹೊಂದಿ ಸಲು, ಈ ಜಾಣತನ ಮಾಡಿದ್ದಾರೆಂದು ತಿಳಿದು ಹೋಯಿತು.

ಆದರೆ ಕಡೆಯದಾಗಿ ಇನ್ನೊಂದು ಸಮಸ್ಯೆ ಉಳಿಯಿತು. ಆ ಮೂಳೆಗಳಿಗೆ ಕಂದು ಬಣ್ಣ ಬಂದದ್ದು ಹೇಗೆ? ಹಾಗೂ ಎಂದು, ಏಕೆಂದರೆ ಭೂಮಿಯೊಳಗೆ ಸೇರಿಕೊಂಡಿರುವ ಮೂಳೆ ಗಳಲ್ಲಿ ಕಾಲಕ್ರಮೇಣ ಕಬ್ಬಿಣದ ಅಂಶ ಸೇರುತ್ತ ಬಂದು, ಮೂಳೆಯೂ ಕ್ರಮಶಃ ಕಂದು ಬಣ್ಣಕ್ಕೆ ಹೋಗುತ್ತ ಬರುತ್ತದೆ. ಬುರುಡೆ ಹಳೆಯದು. ಅದಕ್ಕೆ ಕಂದು ಬಣ್ಣ ಬಂದಿ-

ಗೋರಿಲ್ಲಾದ ಮೂಳೆಯಲ್ಲಿ ಅಷ್ಟೊಂದು ಕಬ್ಬಿಣದ ಅಂಶ ಸೇರಲು ಸಾಧ್ಯವೇ? ಹಾಗಾದರೆ ಈ ಕಂದು ಬಣ್ಣ ಎಲ್ಲಿಂದ ಬಂತು? ಇದೇನೂ ಹೆಚ್ಚಿನ ಸಮಸ್ಯೆಯಾಗಿ ಉಳಿಯಲಿಲ್ಲ. ರಾಸಾಯನಿಕ ಪರೀಕ್ಷೆಗೊಳಪಡಿಸಿದಾಗ, ಮೂಳೆಗಳನ್ನು ಪೊಟ್ಯಾಸಿಯಂ ಡೈಕ್ರೋಮೇಟ್‌ನಲ್ಲಿ ಅದ್ದಿ, ಅವಕ್ಕೆ ಕೃತಕವಾಗಿ ಕಂದು ಬಣ್ಣ ಕೊಡಲಾಗಿದೆಯೆಂಬ ಗುಟ್ಟು ಹೊರಬಿತ್ತು. ಇದರಿಂದ ಪಿಲ್ಟ್‌ಡೌನ್ ಮಾನವನ ಅಸ್ತಿತ್ವವೇ ಇರಲಿಲ್ಲ; ಇದು ' ಜೀವವಿಜ್ಞಾನಿಗಳನ್ನು ಗೊಂದಲದಲ್ಲಿ ಕೆಡವಲು ಡಾಸನ್ ಮಾಡಿದ ಕುಟಿಲೋಪಾಯ ಎಂದು ಸಿದ್ಧವಾಯಿತು. ಡಾಸನ್ನನ ಈ ಮೋಸ ಬಯಲಾದ ಮೇಲೆ ಪಿಲ್ಟ್‌ಡೌನ್ ಮಾನವನ ಹೆಸರು ಮಾನವ ವಿಕಾಸದ ಜಾಡಿನಿಂದ ಅಳಿಸಿಹಾಕಲ್ಪಟ್ಟಿತು.

ಅಂತೂ ೧೯೧೧ರಿಂದ ಸುಮಾರು ನಲವತ್ತೆರಡು ವರ್ಷಗಳ ಕಾಲ ಮಾನವಶಾಸ್ತ್ರಜ್ಞರನ್ನು ಕುತೂಹಲ, ಗೊಂದಲ, ಜಿಜ್ಞಾಸೆಗಳಲ್ಲಿ ಮುಳುಗಿಸಿದ ಈ ತಂತ್ರ ೧೯೫೩ರಲ್ಲಿ ಬಯಲಾದ ನಂತರ ಪಿಲ್ಟ್‌ಡೌನ್ ಮಾನವನ ಶೋಧನೆ ಅಂತ್ಯಗೊಂಡಿತು. ಪಾಲಿಯಾಂಥ್ರೋಪಾಲಜಿ (ಪಳೆಯುಳಿಕೆ ಮಾನವಶಾಸ್ತ್ರ)ದಲ್ಲಿ ನಡೆದ ಈ ಭಾರಿ ವೈಜ್ಞಾನಿಕ ಮೋಸದ ಪತ್ತೇದಾರಿಕೆಯ ಗುರುತಾಗಿ "ಪಿಲ್ಟ್‌ಡೌನ್ ಮಾನವ"ನೆಂದು ಹೆಸರು ಗಳಿಸಿದ ಈ ಎರಡು ಅವಶೇಷಗಳು ಈಗಲೂ ಬ್ರಿಟಿಷ್ ಮ್ಯೂಸಿಯಂನಲ್ಲಿ ಸುರಕ್ಷಿತವಾಗಿವೆ. ರಾಮಾಯಣದಲ್ಲಿ ರಾವಣ, ಮಹಾಭಾರತದಲ್ಲಿ ದುರ್ಯೋಧನರಂತಹ ಖಳನಾಯಕರಂತೆ, ಮಾನವ ಇತಿಹಾಸದಲ್ಲಿ ಚಾರ್ಲ್ಸ್ ಡಾಸನ್‌ನ ಹೆಸರು ಅಮರವಾಯಿತು!

ಡಾರ್ವಿನ್ ಊಹಿಸಿದ 'ಕಳೆದುಹೋದ ಕೊಂಡಿ' ಇತ್ತೀಚೆಗೆ ಸಿಕ್ಕಿತು. ಸತತ ಸಂಶೋಧನೆಯ ಫಲವಾಗಿ ದಕ್ಷಿಣ ಆಫ್ರಿಕಾದ ಟ್ಯಾಂಗನೀಕ್ ಪ್ರಾಂತದಲ್ಲಿನ ಜಲಜ ಶಿಲೆಗಳಲ್ಲಿ ಇಂತಹ ಮಾನವ ಉಪಯೋಗಿಸಿರಬಹುದಾದ ಒಂದು ಅಪ್ರಬುದ್ಧ ಶಿಲಾಯುಧ ಸಿಕ್ಕಿ ಶೋಧನೆಗೆ ಮಂತ್ರ ಸಿಕ್ಕಿತು. ಹಾಗೆ ಇತ್ತೀಚೆಗೆ, ಸುಮಾರು ೧೮ ವರ್ಷಗಳಷ್ಟೇ ಹಿಂದೆ–೧೯೫೯ ರಲ್ಲಿ ದಕ್ಷಿಣ ಆಫ್ರಿಕಾದಲ್ಲೇ 'ಕಾಣೆಯಾದ ಕೊಂಡಿ'ಯ ತಲೆಬುರುಡೆ ಸಿಕ್ಕಿಬಿಟ್ಟಿತು. ಆದರೆ ಇದಕ್ಕೆ ಆಯುಧಗಳನ್ನು ಸ್ವತಃ ತಯಾರಿಸುವ ಯೋಗ್ಯತೆ ಇರಲಿಲ್ಲ. ಈ ಯೋಗ್ಯತೆ ಆದಿಮಾನವನಲ್ಲಿ ಬೆಳೆಯಿತು. ಈ ಪ್ರಾಣಿಯಲ್ಲಿ ಹಿಂಗಾಲುಗಳ ಮೇಲೆ ದೇಹದ ಭಾರ ಬಿಟ್ಟು, ಎದೆ ಚಾಚಿಕೊಂಡು (ಇಂದಿನ ಮಾನವರಂತೆ) ನಡೆಯುವಷ್ಟು ಪ್ರಗತಿ ಹೊಂದಿತ್ತು.

ಈ ಜೀವಿಗೆ "ಜಿಂಗ್ ಜಾನ್ ಥ್ರೋಪಸ್" ಎಂಬ ವೈಜ್ಞಾನಿಕ ಹೆಸರಿದೆಯಾದರೂ, ಇದು ಚಿಪ್ಪುಳ್ಳ ಕಾಯಿಗಳನ್ನು ತಿನ್ನುತ್ತಿದ್ದುದರಿಂದ, ಇದಕ್ಕೆ "ನಟ್ ಕ್ರ್ಯಾಕರ್ ಮ್ಯಾನ್" ಎಂದೂ ಹೆಸರು ಬಂತು. ಹೆಚ್ಚಿನ ವಿವರಗಳಿಗಾಗಿ ಇನ್ನೂ ಸಂಶೋಧನೆ ನಡೆಯುತ್ತಿದೆ. ✡



ಚುನಾವಣೆಗೆ ನಿಂತ ವ್ಯಕ್ತಿಯ ಮೌಲ್ಯಮಾಪನ ಆತ ಗಳಿಸುವ ಓಟುಗಳ ಸಂಖ್ಯೆಯ ಮೇಲೆ ನಿರ್ಧಾರಿತವಾಗುತ್ತದೆಯೇ ಹೊರತು ಆ ಓಟುಗಳನ್ನು ಹಾಕಿದವರ ಮೌಲ್ಯಮಾಪನದಿಂದಲ್ಲ ಎನ್ನುವುದೇ ಪ್ರಜಾಪ್ರಭುತ್ವಕ್ಕಿರುವ ಮುಖ್ಯ ತೊಂದರೆ.



ಮ್ಯಾನೇಜರ್ : [illegible] ಎಲ್ಲಿ ?

ಕ್ಲರ್ಕ್ : ರೇಸಿಗೆ ಹೋಗಿದ್ದಾರೆ !

ಮ್ಯಾನೇಜರ್ : [illegible]! [illegible]! ರೇಸಿಗೆ ಹೋಗಿದ್ದಾರೆಯೇ ? ಅದೂ ಆಫೀಸ್ ಸಮಯದಲ್ಲಿ !

ಕ್ಲರ್ಕ್ : ಲೆಕ್ಕಾಚಾರ ಮುಗಿಸಲು ಇಂದು ಕೊನೆಯ ಅವಕಾಶ ಸಾರ್.

*

ಒಂದು ವ್ಯಕ್ತಿ ಸ್ಮಶಾನದಲ್ಲಿ ಓಡಾಡುತ್ತಿದ್ದಾಗ ಒಂದು ಸಮಾಧಿಯ ಮೇಲೆ "ಇಲ್ಲಿ ಹೂಳಲಾಗಿದೆ ಒಬ್ಬ ವಕೀಲ-ಒಬ್ಬ ಪ್ರಾಮಾಣಿಕ ವ್ಯಕ್ತಿ" ಎಂದು ಬರೆದಿದ್ದನ್ನು ಕಂಡ.

"ಎಂಥಾ ಅದ್ಭುತ! ಒಂದೇ ಸಮಾಧಿಯಲ್ಲಿ ಇಬ್ಬರನ್ನು ಹೂಳುವುದೆ?" ಎಂದಾತ ಆಶ್ಚರ್ಯದಿಂದ ಉದ್ಗರಿಸಿದ.

*

ಪತ್ನಿಯ ತುಟಿಯನ್ನು ಕಾರಣಾಂತರದಿಂದ ಹೊಲಿಯಲಾಗಿತ್ತು. ಬಿಲ್ ಎಷ್ಟಾಯಿತೆಂದು ಪತಿ ಡಾಕ್ಟರರನ್ನು ಕೇಳಿದಾಗ ಅವರು, "ನೂರು ರೂಪಾಯಿ. ನಿಮ್ಮ ಪಾಲಿಗೆ ಅದು ಬಹಳವಾಯಿತೇನೋ," ಎಂದು ಅನುಮಾನಿಸುತ್ತಾ ನುಡಿದರು. ಅದಕ್ಕೆ ಪ್ರತಿಯಾಗಿ ಆತ, "ಇಲ್ಲ ಸಾರ್, ಬಿಲ್‌ಕುಲ್ ಇಲ್ಲ. ಎರಡು ತುಟಿಗಳನ್ನು ಹೊಲಿದರೆ ಸ್ವಲ್ಪ ಕನ್‌ಶೆಸನ್ ತೋರಿಸುತ್ತೀರಾ?" ಎಂದು ಕೇಳಿದ.

*

ಮಾಲೀಕ ನೌಕರನನ್ನು ಗದರಿಸಿ ನುಡಿದ– "ಯಾವ ವ್ಯಕ್ತಿ ತನ್ನ ಮಾತನ್ನು ಇತರರಿಗೆ ಸರಿಯಾಗಿ ತಿಳಿಸುವುದಿಲ್ಲವೊ, ಆತನನ್ನು ಕತ್ತೆ ಎಂಬುದಾಗಿ ತಿಳಿದುಕೊಳ್ಳಬೇಕು. ತಿಳಿಯಿತೇ ?"

"ಇಲ್ಲ ಸಾರ್" ನೌಕರ ಉತ್ತರಿಸಿದ.

ನ್ಯಾಯಾಧೀಶ : ನಿನ್ನಲ್ಲಿ ವಿಶ್ವಾಸವನ್ನಿಟ್ಟು ಕೊಂಡಿದ್ದ ವ್ಯಕ್ತಿಗೆ, ಮೋಸ ಮಾಡಲು ನಿನಗೆ [illegible] ?

ಅಪರಾಧಿ : ವಿಶ್ವಾಸ ತೋರಿಸದ ವ್ಯಕ್ತಿಯನ್ನು ಮೋಸ ಮಾಡಲು ಎಂದಾದರೂ ಸಾಧ್ಯವೆ ಮಹಾಸ್ವಾಮಿ ?

*

ಏಜೆಂಟ್ : ನಿಮ್ಮ ವಿವಾಹವಾಗಿದೆ. ನೀವು ಈಗ ಜೀವವಿಮೆಯನ್ನು ಖಂಡಿತವಾಗಿಯೂ ಮಾಡಿಸಬೇಕು.

ವಿವಾಹಿತ : ನನ್ನ ಪತ್ನಿಯನ್ನು ತಪ್ಪು ಇಷ್ಟು ಭಯಂಕರವಾಗಿ ಭಾವಿಸಬೇಡಿ ಸ್ವಾಮಿ.

*

ಒಬ್ಬ ವ್ಯಕ್ತಿ ಮತ್ತೊಬ್ಬ ವ್ಯಕ್ತಿಯನ್ನು ಕೇಳಿದ: "ಇಲ್ಲಿಂದ ಮದ್ಯದಂಗಡಿಗೆ ಹೋಗಿ ಬರಲು ಎಷ್ಟು ಸಮಯ ಬೇಕಾಗಬಹುದು ?"

"ಹೋಗಲು ಕೇವಲ ಐದು ನಿಮಿಷ ಸಾಕು. ಆದರೆ ಹಿಂತಿರುಗಿ ಬರಲು ಬಹಳಷ್ಟು ಸಮಯ ಬೇಕಾಗುತ್ತದೆ." ಮತ್ತೊಬ್ಬ ಉತ್ತರಿಸಿದ.

*

ಗ್ರಾಹಕ : ಔಷಧಿ ಅಂಗಡಿಯವನಿಗೆ) :– "ತಮ್ಮ ಬಳಿ ಬಿಳಿ ಕೂದಲುಗಳಿಗೋಸ್ಕರ ಏನಿದೆ ?"

ಔಷಧಿ ಅಂಗಡಿಯವನು, "ಅಪಾರ ಸನ್ಮಾನವಿದೆ," ಎಂದುತ್ತರಿಸಿದ.

*

ಒಬ್ಬ ಯುವತಿ ಸ್ನಾನಮಾಡಬೇಕೆನ್ನುವಷ್ಟರಲ್ಲಿ, ಕಾವಲುಗಾರ ತಡೆದ. ಅದಕ್ಕೆ ಯುವತಿ ಕ್ರುದ್ಧಳಾಗಿ ನುಡಿದಳು. "ಈ ನದಿಯಲ್ಲಿ ಸ್ನಾನ ಮಾಡಬಾರದು ಎನ್ನುವ ವಿಚಾರವನ್ನು ನಾನು ಬಟ್ಟೆಗಳನ್ನು ಕಳಚುವಾಗ ಏಕೆ ಹೇಳಲಿಲ್ಲ?"

"ಇಲ್ಲಿ ಕೇವಲ ಸ್ನಾನಮಾಡುವುದು ಮಾತ್ರ ನಿಷಿದ್ಧ" ಕಾವಲುಗಾರ ಕೂಡಲೆ ಉತ್ತರಿಸಿದ.

*

"ನೀನು ಮತ್ತೊಂದು ವಿವಾಹ ಏಕೆ ಮಾಡಿಕೊಳ್ಳಬಾರದು?"

"ಇದಕ್ಕೆ ನಾಲ್ಕು ಕಾರಣಗಳು."

"ಯಾವುವು?"

"ಒಬ್ಬ ಹುಡುಗ ಮತ್ತು ಮೂರು ಹುಡುಗಿಯರು."

—ಎಸ್. ಕೆ. ನರಸಿಂಹಮೂರ್ತಿ

*

ಫ್ಯಾಮಿಲಿ ಪ್ಲ್ಯಾನಿಂಗ್ ಪ್ರಚಾರಕರೊಬ್ಬರು ಹಳ್ಳಿಗೆ ಹೋಗಿ ಕುಟುಂಬ ಯೋಜನೆಯ ಬಗ್ಗೆ ತಿಳಿಸಿ ಹೇಳುತ್ತಿದ್ದರು. ದಾರಿಯಲ್ಲಿ ೧೬ ವರ್ಷದ ಶಾಮು ಸಿಕ್ಕಲು ಆತನೊಡನೆ, "ನಿನ್ನ ಮನೆ ಎಲ್ಲೋ ?" ಎಂದು ಕೇಳಿದರು.

ಶ್ಯಾಮು : ೨ ಮೈಲು ದೂರದಲ್ಲಿ ಸಾರ್.

ಪ್ರಚಾರಕ : ನಿಮ್ಮ ಮನೆಯಲ್ಲಿ ನೀವು ಎಷ್ಟು ಜನ ಮಕ್ಕಳಿದ್ದೀರಾ ?

ಶ್ಯಾಮು : ೭ನ್ನೆ ಅಂತ ಕಾಣತ್ತೆ ಸಾರ್.

ಪ್ರಚಾರಕ : ಅಂದ್ರೆ ಏನೊ ?

ಶ್ಯಾಮು : ಅಪ್ಪ ಈ ತಿಂಗಳಲ್ಲಿ ಅಡ್ಗೆ ಮಾಡಲೇ ಇಲ್ಲ ಸಾರ್.

—ಎಚ್. ಜಯಂತಿ ಹೆಬ್ಬಾರ

*

ಹೆಂಡತಿ: "ಯಾರ್ರೀ ಅವಳು ನಮ್ಮನ್ನೇ ಅಷ್ಟು ದುರುಗುಟ್ಟಿಕೊಂಡು ನೋಡುತ್ತಿದಾಳೆ." ಗಂಡ: "ಶ್‌ಶ್ ... ಜೋರಾಗಿ ಕಿರುಚಬೇಡ! ನೀನು ಯಾರು ಅಂತ ನಾನು ಅವಳಿಗೆ ಹೇಳಿ ಅವಳಿಂದ ಬಚಾಯಿಸಿಕೊಳ್ಳುವುದೇ ನನಗೆ ಕಷ್ಟವಾಗಿದೆ.

*

"ಅಪ್ಪಾ ನೀವು ದಿನೇದಿನೇ ತುಂಬಾ ಬೆಳೆಯುತ್ತಿದ್ದೀರಾ?" "ಇಲ್ಲ; ಯಾಕ್ ಮರೀ?" "ಮತ್ತೆ ...ಕೂದಲೊಳಗಿಂದ ನಿಮ್ಮ ತಲೆ ಮಧ್ಯೆ ಮೇಲಕ್ಕೆ ನುಗ್ಗಿ ಬಂದಿದೆ."

*

"ಬಿಸಿನೆಸ್ ಹೇಗಿದೆ ಶೆಟ್ರೇ" "ತುಂಬಾ ಡಲ್ಲು: ಹಣ ಕೊಡದೆ ಸಾಲ ತೆಗೆದುಕೊಳ್ಳುತ್ತಿದ್ದವರು ಕೂಡ ಈಗ ನನ್ನ ಅಂಗಡಿಗೆ ಬಂದ ಸಾಮಾನು ಕೊಳ್ಳುತ್ತಿಲ್ಲ."

■

"ಮಹಿಳಾ ದಂತ ವೈದ್ಯರಲ್ಲಿಗೆ ದಂತ ಚಿಕಿತ್ಸೆಗೆ ಹೊಗಲು ನನಗೆ ಇಷ್ಟ." "ಏಕೆ ಅಲ್ಲಿಗೆ ಹೊಗಬೇಕು ಅಂತಿದಿರಿ?" "ಹೆಣ್ಣು ಅಲ್ವೆ 'ಬಾಯ್ಮುಚ್ಚಿ' ಅನ್ನೋದಕ್ಕೆ ಬದಲಾಗಿ 'ಬಾಯಿ ತೆರೆಯಿರಿ' ಅಂತ ಅಂತಾಳಲ್ಲ; ಅದನ್ನು ಕೇಳೋದಕ್ಕೆ ತುಂಬಾ ಇಷ್ಟ ನನಗೆ, ಅದಕ್ಕೆ."

—ಎಸ್. ವಿಶ್ವನಾಥ

*

ರೂಪಾಯಿಗೆ ವೀಸೆ ಬೆಣ್ಣೆಯ ಕಾಲದ ವೃದ್ಧರೊಬ್ಬರು ಬಸ್ ಸ್ಟ್ಯಾಂಡಿನಲ್ಲಿ ನಿಂತು ಪೇಚಾಡಿಕೊಳ್ಳುತ್ತಿದ್ದರು: "ಅದೂ ಒಂದು ಕಾಲ; ಈಗ ನೋಡಿ ಹೇಗಿದೆ.ಆಗ ಒಂದು ರೂಪಾಯಿಗೆ ಒಂದು ಮೂಟೆ ಅಕ್ಕಿ ಬರ್ತಿತ್ತು; ಈಗಂತೂ ರೂಪಾಯಿಗೆ ಬೆಲೆಯೇ ಇಲ್ಲ. ರೂಪಾಯಿಗೆ ಈಗ ಏನೇನೂ ಸಿಕ್ಕೋಲ್ಲ. ಬಸ್ಸಲ್ಲಿ ಅದಕ್ಕೆ ಚಿಲ್ಲರೆ ಕೂಡ ಸಿಕ್ಕೋಲ್ಲ-"

—ಆನಂದ ದೇಡಾಪುರ

■

ಸರ್ಕಸ್ ಪ್ರಾರಂಭವಾಗಿತ್ತು. ಒಬ್ಬ ಧಡೂತಿ ಆಸಾಮಿ ಮುಂದಿನ ಸಾಲುಗಳಲ್ಲಿ ಕುಳಿತಿದ್ದವರನ್ನು ಸರಿಸುತ್ತಾ ಖಾಲಿಯಿದ್ದ ಸಿಟೀನ ಕಡೆಗೆ ಹೋಗುತ್ತಿದ್ದ. ಮಧ್ಯದಲ್ಲಿ ಯುವತಿಯೊಬ್ಬಳ ಕಾಲು ತುಳಿದಾಗ ಆಕೆ ನೋವು ತಾಳಲಾರದೆ "ಅಯ್ಯೋ" ಎಂದಳು. ಆ ಧಡೂತಿ ಆಸಾಮಿ "ಕ್ಷಮಿಸಿ. ನಿಮ್ಮ ಕಾಲುಗಳನ್ನು ನಾನೇ ತುಳಿದೆನೆಂದು ಕಾಣುತ್ತೆ" ಎಂದಾಗ ನೋವು ತಾಳಲಾರದೆ ಯುವತಿ, "ಹೌದು ಹೌದು ಅದು ನಿಮ್ಮದೇ ಕಾಲು ಇರಬೇಕು. ಏಕೆಂದರೆ ಆನೆಗಳೆಲ್ಲ ಇನ್ನೂ ಸರ್ಕಸ್ಸಿನ ಒಳಗೇ ಇವೆ," ಎಂದಳು.

—ವಿನಾಯಕ ಕುಲಕರ್ಣಿ



# ಅಪರಾಧಿ ಸ್ಥಾನದಲ್ಲಿ ಆಧುನಿಕ ಔಷಧಿ

ಜಿ. ಟಿ. ನಾರಾಯಣರಾವ್

"ಆಧುನಿಕ ಔಷಧಿ ಅಪರಾಧಿ ಸ್ಥಾನದಲ್ಲಿದೆ. ಇಂದು ಮಾರುಕಟ್ಟೆಯನ್ನು ಎಲ್ಲ ಬಗೆಯ ಮದ್ದುಗಳೂ ಅತಿಕ್ರಮಿಸಿ ಸಾಮಾನ್ಯ ಮನುಷ್ಯನಿಗೆ ನುಂಗಲು ಬಲು ಸಲೀಸಾಗಿ ದೊರೆಯುತ್ತಿವೆ. ಅವುಗಳ ಹಾನಿಕರ ಗೌಣ ಪರಿಣಾಮಗಳನ್ನು ಅರಿಯದ ಆತ ಸುಲಭವಾಗಿ ಅವುಗಳಿಗೆ ಬಲಿಯಾಗುತ್ತಾನೆ. ಇಂಥ ದುಷ್ಪರಿಣಾಮಗಳನ್ನು ವಿಪುಲವಾಗಿ ಒಳಗೊಂಡಿರುವ ಆಧುನಿಕ ಔಷಧಿಗಳನ್ನು ವ್ಯಾಪಕವಾಗಿ ವಿಧಿಸುವ ಮತ್ತು ಬಳಸುವ ಕಾರಣದಿಂದಾಗಿ ಆಧುನಿಕ ವೈದ್ಯವೃತ್ತಿ ಮನುಷ್ಯಾರೋಗ್ಯದ ಪ್ರಥಮ ವೈರಿ ಆಗಿದೆ."* ಭಾರತೀಯ ವಿಜ್ಞಾನ ಕಾಂಗ್ರೆಸ್ಸಿನ ವಾರ್ಷಿಕಾಧಿವೇಶನ ಭುವನೇಶ್ವರದಲ್ಲಿ ಇದೇ ವರ್ಷದ ಜನವರಿ ತಿಂಗಳಿನಲ್ಲಿ ನಡೆದಾಗ ಅದರ ಮಾನವ ಹಾಗೂ ಪಶುವೈದ್ಯ ವಿಭಾಗದ ಗೋಷ್ಠಿಯ ಅಧ್ಯಕ್ಷ ಪೀಠದಿಂದ ಡಾ. ಎಸ್. ಆರ್. ದಾಸಗುಪ್ತ ಮಾಡಿದ ಭಾಷಣದ ಪಲ್ಲವಿ ಇದು. ಶ್ರೀಯುತರು ಕಲ್ಕತ್ತದ ನ್ಯಾಶನಲ್ ಮೆಡಿಕಲ್ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದಾರೆ ಅವರ ವಾದದ ಸಾರವನ್ನು ಇಲ್ಲಿ ಉದ್ಧರಿಸಿದೆ.

ರೋಗಿಗಳು ಹೆಚ್ಚಿನ ಮದ್ದುಗಳನ್ನು ಬಾಯಿಯಿಂದ ನುಂಗುವುದು ವಾಡಿಕೆ. ಇದಕ್ಕೆ ವೈದ್ಯಕೀಯ ಸೇವನೆ ಎಂದು ಹೆಸರು. ಹೀಗೆ ಸೇವಿಸಿದ ಔಷಧಿಗಳಿಂದ ಅವನಿಗೆ ತಾತ್ಕಾಲಿಕ ಉಪಶಮನ ದೊರೆಯುತ್ತದೆ, ನಿಜ. ಆದರೆ ಅವುಗಳ ದುಷ್ಪರಿಣಾಮಗಳ ದೆಸೆಯಿಂದ ವಾಕರಿಕೆ, ವಮನ, ಆಮಾತಿಸಾರ ಉಂಟಾಗಬಹುದಲ್ಲದೆ ಜಠರ ಮತ್ತು ಕರುಳಿನಲ್ಲಿ ವ್ರಣ, ರಕ್ತಸ್ರಾವ, ರಂಧ್ರೀಕರಣ ಮುಂತಾದ ತೀವ್ರ ಬೇನೆಗಳೂ ತಲೆದೋರಬಹುದು. ಇನ್ನು ತಲೆಸುತ್ತು, ತಲೆನೋವು, ಕಣ್ಣುರಿ, ನಾಲಗೆ ಆರುವುದು, ಬಾಯಿಹುಣ್ಣು ಮೊದಲಾದ ತೊಂದರೆ ತಾಪತ್ರಯಗಳೂ ಕಾಣಿಸಿಕೊಳ್ಳುವುದುಂಟು. ವಾಸ್ತವವಾಗಿ ಈ ವಸ್ತುಗಳು ಮೂಲ ಬೇನೆಗಳಲ್ಲ; ಬದಲು, ಔಷಧಿಸಂಜನಿತ ದುಷ್ಪರಿಣಾಮಗಳು. ಕೆಲವು ದೃಷ್ಟಾಂತಗಳನ್ನು ಪರಿಶೀಲಿಸೋಣ. ಆಸ್ಪಿರಿನ್ನಿನ (ಅಸೆಟೈಲ್ ಸ್ಯಾಲಿಸೈಲಿಕ್ ಆಮ್ಲ) ಮುಕ್ತ ಮತ್ತು

* 'ಕಸ್ತೂರಿ'ಯ ನವೆಂಬರ್ ೧೯೬೩ರ ಸಂಚಿಕೆಯಲ್ಲಿ ಬಂದ ಶ್ರೀ ಶ್ರೀಧರ ಬಿ ನಾಗನೂರ ಅವರ 'ನಿಮ್ಮ ಡಾಕ್ಟರ್ ನೀವೇ ಆಗಬೇಕು' ಲೇಖನ ನೋಡಿರಿ

ಅನಿರ್ಬಂಧಿತ ಉಪಯೋಗದಿಂದಾಗಿ (ತಲೆನೋವನ್ನು ನಿಮಿಷಗಳಲ್ಲೇ ತೊಡೆದು ಹಾಕಿ ಹಾಯಾದ ಭಾವನೆಯನ್ನು ಒದಗಿಸುವ ಕೇಳು-ನಿನಗಿಲ್ಲಿದೆ-ಸುಖ ಮಾತ್ರೆಯ ಸೇವನೆಯನ್ನು ಪಡೆಯುದ ಅಣ್ಣಗಳು ಯಾರಿದ್ದಾರೆ?) ಜನರಲ್ಲಿ ಜಠರ ರಕ್ತಸ್ರಾವ ವ್ಯಾಪಕವಾಗಿ ಕಂಡುಬಂದಿದೆ. ಟೆಟ್ರಸೈಕ್ಲೀನುಗಳ ಬಳಕೆ ಹಲ್ಲುಗಳ ಬಣ್ಣವನ್ನು ಕೆಡಿಸುವುದು ಮಾತ್ರವಲ್ಲ, ಎಳೆಯರಲ್ಲಿ ಹಲ್ಲುಗಳು ಎಷ್ಟ ತಿಷ್ಟವಾಗಿ ಮೊಳೆದು ಬೆಳೆಯುವಂತೆ ಕೂಡ ಮಾಡುತ್ತದೆ. ಇಂಥ ವಕ್ರ ವಿವರ್ಣ ದಂತಸಮುಚ್ಚಯ ಮುಖ-ಸೌಂದರ್ಯವನ್ನು ಕೆಡಿಸುವುದರ ಜೊತೆಗೆ ನಿರುಪಯುಕ್ತವೂ ಆಗುವುದು. ಕೆಲವು ಆಮ್ಲ ತಟಸ್ಥಕಾರಿಗಳು (ಆ್ಯಂಟಾಸಿಡ್ಡುಗಳು) ಮಲ-ಬದ್ಧತೆಗೆ ಕಾರಣವಾದರೆ ಇನ್ನು ಕೆಲವು ಅತಿ-ಭೇದಿಗೆ ಕಾರಣವಾಗುತ್ತವೆ — ಒಂದೊಂದು ಪ್ರಕೃತಿಯ ಮೇಲೆ ಒಂದೊಂದರದು ಒಂದೊಂದು ಬಗೆಯ ಪರಿಣಾಮ.

ಮೌಖಿಕ ಸೇವನೆಯ ಎಲ್ಲ ಮದ್ದುಗಳೂ ಯಕೃತ್ತಿನ ಮೂಲಕ ಸಾಗುವುದರಿಂದ ಅಲ್ಲಿ ಹಲವಾರು ಬಗೆಯ ವಿಷ ಪರಿಣಾಮಗಳು ತಲೆದೋರುವುವು. ಸುಲಭ ಪ್ರೇರಿತರಾಗ-ಬಲ್ಲಂಥ ವ್ಯಕ್ತಿಗಳಲ್ಲಿ ಪ್ರತಿಯೊಂದು ಮದ್ದೂ ದ್ರೋಹಿಯಾಗಿ ವರ್ತಿಸಿ ಯತ್ಕಿಂಚಿತ್ ಯಕೃತ್ ಗಾಸಿಯನ್ನು ಮಾಡಿಯೇ ಮಾಡು-ತ್ತದೆ. ಇಂಥ ದ್ರೋಹಿಗಳ ಪೈಕಿ ಅತಿ ಸಾಮಾ-ನ್ಯವಾದವೆಂದರೆ ಫೆನಾಸಿಟಿನ್, ಪ್ಯಾರಸೆಟಮಾಲ್, ಸ್ಯಾಲಿಸಿಲೇಟುಗಳು, ಸಲ್ಫೊನಮೈಡುಗಳು, ಕ್ವಿನೀನ್, ಕೃತಕ ವೈಟಮಿನ್-ಕೆ, ಟೆಟ್ರ-ಸೈಕ್ಲೀನುಗಳು ಮತ್ತು ಮೌಖಿಕ ಗರ್ಭ-ನಿರೋಧಕಗಳು (ಅಂದರೆ ಬಾಯ ಮೂಲಕ ನುಂಗುವ ಬಸಿರ ತಡೆಗಳು).

ಔಷಧಿಗಳ ದುಷ್ಪರಿಣಾಮಗಳಾಗಿ ಹೃದಯದ ಮೇಲೆ ಉಂಟಾಗುವಂಥ ಗಾಸಿಯ ಪರಿ-ಣಾಮಗಳು ಈಗೀಗ ಬಹುವಾಗಿ ಹೆಚ್ಚುತ್ತಿವೆ. ನಮ್ಮ ತಿಳಿವಳಿಕೆ ಬೆಳೆದಂತೆ ಈ ದುಷ್ಪರಿ-ಣಾಮಕಾರಿಗಳ ಸಾಲಿಗೆ ಅಧಿಕ ಸಂಖ್ಯೆಯ ಆಧುನಿಕ ಔಷಧಿಗಳನ್ನು ತಳ್ಳಬೇಕಾಗುತ್ತದೆ. ಹೃದಯದ ಮೇಲಾಗುವ ದುಷ್ಪರಿಣಾಮಗ-ಳಾವರೂ ಸಾಮಾನ್ಯವಾದವೇನು ? ಗುಂಡಿಗೆ ಮಿಡಿತದ ತಾಳಗತಿಯಲ್ಲಿ ಅಕ್ರಮ, ಸುಲಭ ಚಿಕಿತ್ಸೆಗೆ ಸಗ್ಗದ ಹೃದಯದ ರಕ್ತಕಟ್ಟು ವೈಫಲ್ಯ ಮತ್ತು ಹೃದಯದಲ್ಲಿ ಪ್ರಚೋದ-ನೆಯ ಮುನ್ನಡೆಯ ತಡೆ. ಇವು ಖಿದ್ದು ಗುಂಡಿಗೆ ಬೇನೆಗಳ ಪರಿಣಾಮಗಳಲ್ಲ—ಯದ್ವಾ ತದ್ವಾ ಔಷಧಿಗಳನ್ನು ಸ್ವಾಹಾಕರಿಸಿದ್ದರಿಂದ ಜನಿಸಿದ ರಕ್ತಬೀಜಾಸುರರು; ಕ್ವಿನೀನ್, ಡಿಜಿಟ್ಯಾಲಿಸ್ (ಹೃದಯೋತ್ತೇಜಕ ಔಷಧಿ), ಪ್ರೊಕೇನಮೈಡ್ ಮುಂತಾದ ಹೃದಯ ಸಂಬಂಧೀ "ಸಂಜೀವಿನಿ"ಗಳ ಮಾನಸಪುತ್ರರು.

ಮೌಖಿಕ ಗರ್ಭನಿರೋಧಕಗಳ ಸೇವನೆಯ ದುಷ್ಪರಿಣಾಮವಾಗಿ ರಕ್ತ ಒತ್ತಡದಲ್ಲಿ ಹೆಚ್ಚಳ-ವನ್ನೂ ಎಮಿಟೀನಿನ ಬಳಕೆಯ ದುಷ್ಪರಿಣಾಮ-ವಾಗಿ ಹೃದಯ ಸ್ನಾಯು ಊತಕದ ಮಾಂದ್ಯ-ವನ್ನೂ (ಮಯೊಕಾರ್ಡಿಯಲ್ ಡಿಪ್ರೆಶನ್) ಗುರುತಿಸಲಾಗಿದೆ. ಕ್ವಿನೀನ್, ಸ್ಯಾಲಿಸಿಲೇಟು-ಗಳು, ಪ್ರತಿಜೈವಿಕಗಳು (ಆ್ಯಂಟಿಬಯೊಟಿಕ್ಸ್) ಅವುಗಳಲ್ಲಿಯೂ ವಿಶೇಷತಃ ಕ್ಲೋರಮ್ ಫೆನಿಕಾಲ್, ವೇದನಾಶಾಮಕಗಳು (ಅನಾಲ್‌ಜೆಸಿಕ್ಸ್) ಇತ್ಯಾದಿಗಳನ್ನು ಸಾಕಷ್ಟು ಕಾಲ ಮುಕ್ಕುತ್ತಿದ್ದರೆ ಅದರಿಂದ ರಕ್ತದ ಮೇಲಾ-ಗುವ ದುಷ್ಪರಿಣಾಮಗಳು ಕನಿಷ್ಠ ಪಕ್ಷ ಒಂದು ಡಝನ್ನಿಗಿಂತಲೂ ಜಾಸ್ತಿ ಇವೆ.

ಆಧುನಿಕ ಔಷಧಿ ಸೇವನೆಯಿಂದ ರಟ್ಟುವ (ಸ್ಪಿನ್-ಆಫ್) ಗೌಣ ಬೇನೆಗಳ ಯಾದಿ ಕೊನೆ ಇರದ ಹಾದಿ. ಚಿರಪರಿಚಿತ ಉದಾಹರಣೆ-ಗಳನ್ನು ಇನ್ನೂ ಕೊಡಬಹುದು. ಚಿಕಿತ್ಸೆಗಾಗಿ ಬಳಸಿದ ರಿಸರ್ಪೀನಿನ (ಸರ್ಪಗಂಧಿ) ಗೌಣ ಪರಿಣಾಮವಾಗಿ ಮೂಗು ಕಟ್ಟಿದಂತಾದೀತು. ಹೆಚ್ಚಿನ ಒತ್ತಡ ಅಥವಾ ಕರ್ಷಣದಿಂದ (ಟೆನ್ಶನ್) ನರಳುವವರಿಗೆ ನೀಡುವ ತೀವ್ರ ಕರ್ಷಣ-ರೋಧಕ ಔಷಧಿಗಳು ಮೂಗಿನ ಹೊಳ್ಳೆಗಳ ಕಟ್ಟುವಿಕೆಗೆ ಕಾರಣವಾಗುವವು. ಇದರಿಂದ ಉಸಿರಾಟ ಅತಿ ತ್ರಾಸ ಎನ್ನಿಸುವುದು. ಪೆನಿ-ಸಿಲಿನ್ ಚುಚ್ಚುಮದ್ದನ್ನು ದೇಹಕ್ಕೆ ಹೊಗಿಸಿದ ಬಳಿಕ ಊತ ಅಥವಾ ಶೋಫೆ (ಎಡೀಮ)

ಮತ್ತು ಒಗ್ಗದಿಕೆ (ಅಲರ್ಜಿ) ಕಾಣಿಸಿಕೊಂಡಿರುವುವು. "ಜೀವರಕ್ಷಕ" ಪೆನಿಸಿಲಿನ್ ಜೀವಮಾರಕವಾದುದಕ್ಕೆ ನಿದರ್ಶನಗಳು ಇಂದಿಗೂ ಒಸರುತ್ತಿವೆ. ಮೌಖಿಕ ಗರ್ಭನಿರೋಧಕಗಳ ಹಾಗೂ ವೈಟಮಿನ್–ಕೆ ಸೇವನೆಯ ಪರಿಣಾಮವಾಗಿ ಅಸ್ತಮಾ ಹೊಡೆತಗಳು ಜಾಸ್ತಿ ಆಗುತ್ತಿವೆ. ಕಾರ್ಟಿಕೊಸ್ಟೀರಾಯಿಡುಗಳು ಮತ್ತು ರೇಡಿಯಮ್ ಹಾಗೂ ಎಕ್ಸ್‌ಕಿರಣ ಚಿಕಿತ್ಸೆ ಕೆಲವೇಳೆ ಸುಪ್ತ ಕ್ಷಯರೋಗವನ್ನು ಬಡಿದೆಬ್ಬಿಸಿದುದು ಕಂಡುಬಂದಿದೆ. ಲಿಕ್ವಿಡ್ ಪ್ಯಾರಾಫಿನ್‌ಯುಕ್ತ ವಿವಿಧ ಔಷಧಿಗಳ ಸೇವನೆ ನ್ಯೂಮೋನಿಯಕ್ಕೆ ಎಡೆ ಮಾಡಿಕೊಡುವ ಸಂಭವವುಂಟು.

ಸ್ನಾಯು-ಕಂಕಾಲ ವ್ಯವಸ್ಥೆಯನ್ನು ಬಾಧಿಸುವ ಬೇನೆಗಳು ಮದ್ದುಗಳ ಗೌಣ ಪರಿಣಾಮಗಳಾಗಿ ಕಂಡುಬಂದಿರುವ ಸಂದರ್ಭಗಳು ಬಹಳ ಇವೆ. ಫ್ಲೋರೈಡುಗಳ ಬಳಕೆಯಿಂದ ಹಲ್ಲುಗಳಲ್ಲಿಯೂ ಕಂಕಾಲದಲ್ಲಿಯೂ ತೀವ್ರ ವ್ಯತ್ಯಾಸ ತಲೆದೋರಿದೆ. ಪೆನಿಸಿಲಿನ್, ಥೈರಾಯಿಡ್ ಶಾಮಕ ಮದ್ದುಗಳು ಮತ್ತು ಸೆಳವುಗಳನ್ನು (ಛಳುಕು) ತಡೆಗಟ್ಟುವ ದಿಢೀರ್ ಮದ್ದುಗಳು ಸಂಧಿವಾತಕ್ಕೆ (ಆರ್ಥ್ರೈಟಿಸ್) ಕಾರಣ ಆಗಬಹುದು. ಸ್ಟ್ರೆಪ್ಟೊಮೈಸಿನ್ ಬಳಕೆಯ ಬಳಿಕ ಸ್ನಾಯುದೌರ್ಬಲ್ಯ ಮತ್ತು ಸ್ನಾಯುಕ್ಷೋಭೆಯನ್ನು ಗಮನಿಸಲಾಗಿದೆ. ಇಂದು ಅತಿಪ್ರಚಾರದಲ್ಲಿರುವ ಕ್ಲೋರಿಕ್ವಿನ್ ಮತ್ತು ಸ್ಟೀರಾಯಿಡುಗಳು ಖಂಡಿತವಾಗಿಯೂ ಸ್ನಾಯುಘಾತಕಗಳು.

ಇನ್ನು ಲಸಿಕೆಗಳೂ ಸೀರಮುಗಳೂ ಯಥಾಶಕ್ತಿ "ಕರ್ತವ್ಯ ನಿರ್ವಹಣೆ" ಮಾಡದೇ ಇದ್ದಾವೆ? ಇವು ನರಮಂಡಲದಲ್ಲಿ ಪ್ರತಿಕೂಲ ಅನುಕ್ರಿಯೆಗಳನ್ನು ಪ್ರಚೋದಿಸುವುದನ್ನು ಗುರುತಿಸಲಾಗಿದೆ. ಸ್ಥಳೀಯ ಅರಿವಳಿಕಗಳು (ಲೋಕಲ್ ಅನಾಸ್ಥೆಟಿಕ್ಸ್) ಸೆಡತದ ಪ್ರತಿಕ್ರಿಯೆಗಳನ್ನು ಉಂಟುಮಾಡುವುದು ವರದಿ ಆಗಿದೆ. ಕೆಲವೊಂದು ಬಗೆಯ ಕ್ಷಯವಿರೋಧೀ [illegible] ಅಸ್ವಸ್ಥತೆಯನ್ನು [illegible]

ಮದ್ದುಗಳು ಅಪಸ್ಮಾರ ಸ್ಥಿತಿಯನ್ನು ಉಲ್ಬಣಗೊಳಿಸಿದ್ದುಂಟು.

ಭ್ರಾಂತಿಜನಕ (ಹ್ಯಲ್ಯೂಸಿನೋಜೆನಿಕ್) ಔಷಧಿಗಳ ಉಪಯೋಗಾನಂತರ ಉದ್ರೇಕ, ಗಾಬರಿ, ಅವನತಿ ಇವೇ ಮುಂತಾದ ಪ್ರತಿಕೂಲ ಮಾನಸಿಕ ಪ್ರತಿಕ್ರಿಯೆಗಳು ಕಂಡುಬಂದಿವೆ. ಮೌಖಿಕ ಗರ್ಭನಿರೋಧಕ ಮತ್ತು ಕಾರ್ಟಿಕೊಸ್ಟೀರಾಯಿಡುಗಳು ಚಿತ್ತಗೆಡಿಕೆ ಮುಂತಾದ ದುಷ್ಪರಿಣಾಮಗಳಿಗೆ ಕಾರಣವಾಗಿವೆ. ಕಾರ್ಟಿಕೊಸ್ಟೀರಾಯಿಡಿನಿಂದ ಪರಿಣಮಿಸುವ ಗ್ಲಾಕೋಮ (ಕಣ್ಣು ಗುಡ್ಡೆಯಲ್ಲಿ ಬಿಗಿತ ಹುಟ್ಟಿ ಕ್ರಮೇಣ ದೃಷ್ಟಿನಾಶ ಸಂಭವಿಸುವ ಒಂದು ತೆರನಾದ ಕಣ್ಣುರೋಗ) ವಿರಳವೇನೂ ಅಲ್ಲ. ಕಣ್ಣುಗಳಿಗೆ ನೇರವಾಗಿ ಸವರುವ ಕಾರ್ಟಿಕೊಸ್ಟೀರಾಯಿಡುಗಳು ಚಿಕ್ಕಮಕ್ಕಳಲ್ಲಿ ಕಣ್ಣಪೊರೆಯನ್ನು ಬೆಳೆಸಬಹುದು. ಮಲೇರಿಯ ನಿವಾರಕ ಸಂಶ್ಲೇಷಿತ ಔಷಧಗಳು ಅಕ್ಷಿಪಟದ (ರೆಟಿನ) ಮೇಲೆ ದುಷ್ಪ್ರಭಾವಿ ಆಗುವುದುಂಟು.

ಏಡಿಗಂತಿ (ಕ್ಯಾನ್ಸರ್) ಎಂಬ ಮಾರಕರೋಗ ಔಷಧಿಜನ್ಯ ಉಪೋತ್ಪನ್ನವಾಗಿ ಬರುವುದು ವರದಿ ಆಗಿದೆ. ಮೌಖಿಕ ಗರ್ಭನಿರೋಧಕಗಳು ಗರ್ಭಕೋಶಕಂಠದಲ್ಲಿ ಏಡಿಗಂತಿಯನ್ನು ಪ್ರೇರಿಸಿವೆ. ಕಬ್ಬಿಣದ ಡೆಕ್ಸ್‌ಟ್ರೇನ್ ಕಾಂಪ್ಲೆಕ್ಸನ್ನು ಅಂತಃಸ್ನಾಯು (ಇಂಟ್ರಮಸ್ಕ್ಯುಲರ್) ಚುಚ್ಚುಮದ್ದಾಗಿ ಪದೇ ಪದೇ ಅದೇ ಎಡೆಯಲ್ಲಿ ಕುತ್ತಿದಾಗ ಆ ಜಾಗದಲ್ಲಿ ಏಡಿಗಂತಿ ಕಾಣಿಸಿಕೊಂಡಿದೆ. ಇನ್ನು ನೇರವಾಗಿ ಕ್ರೊಮೊಸೋಮುಗಳ (ಒಂದೊಂದು ಜೀವಿಯ ಆನುವಂಶಿಕ ಗುಣಗಳನ್ನು ಪೀಳಿಗೆಯಿಂದ ಪೀಳಿಗೆಗೆ ಸಾಗಿಸುವ ಕೋಶರಚನೆಗಳು) ಮೇಲೆ ವರ್ತಿಸಿ ಮನುಷ್ಯಸಂತತಿಗೇ ಶಾಶ್ವತ ಊನ ತರಬಲ್ಲಂಥ "ಇಂದ್ರಾಸ್ತ್ರ"ಗಳೂ ಇವೆ; ಬಸುರಿಗೆ ನೀಡಿದ ಮದ್ದು ಭ್ರೂಣದ ಮೇಲೆ ಪರಿಣಾಮ ಬೀರುವುದು ತಿಳಿದದ್ದೇ. ಭ್ರೂಣದ ಕ್ರೊಮೊಸೋಮುಗಳ ಸಂಖ್ಯೆಯಲ್ಲಿ ಇಲ್ಲವೇ ಸಂತುಲನದಲ್ಲಿ ಏರುಪೇರು ಉಂಟಾದರೆ ಮುಂದೆ ಹುಟ್ಟುವ ಕೂಸು ಬುದ್ಧಿವಿಕಲವಾಗಿರುವುದು [illegible]

ಬಂದಿದೆ. ಗರ್ಭಿಣಿಯರಿಗೆ ಟೆಟ್ರಸೈಕ್ಲೀನ್ ಚಿಕಿತ್ಸೆ ನೀಡಿದ ಬಳಿಕ ಜನಿಸಿದ ಶಿಶುಗಳಲ್ಲಿ ಕಣ್ಣು-ಪೊರೆ ಅಥವಾ ದೃಷ್ಟಿದೋಷ ಇತ್ತು. ಸ್ಟ್ರೆಪ್ಟೊಮೈಸಿನ್ ಉಪಯೋಗದ ಫಲವಾಗಿ ನವಜಾತ-ಶಿಶುಗಳಲ್ಲಿ ಶ್ರವಣಸಾಮರ್ಥ್ಯ ಅಂಶಿಕವಾಗಿ ನಷ್ಟವಾಗಿತ್ತು.

ಡಾ. ದಾಸಗುಪ್ತ ಮುನ್ನೆಚ್ಚರಿಕೆಯ ಮಾತನ್ನು ತುಂಬ ಕಾಳಜಿಯಿಂದ ನುಡಿದಿದ್ದಾರೆ: "ಚಿರಮೌಢ್ಯದಲ್ಲಿ ಮುಳುಗಿರುವ ಅತಿಶಯ ಸಂಖ್ಯೆಯ ಜನರಿಂದ ಮಿಲಿಮಿಲಿಗುಟ್ಟುತ್ತಿರುವ ಭಾರತದಲ್ಲಿ ಇದೊಂದು ಅತಿ ಗಂಭೀರವೂ ಗಹನವೂ ಆದ ಸಮಸ್ಯೆ. ಯಾವುದೇ ಔಷಧಿಯನ್ನು ವೈದ್ಯ ತನ್ನ ರೋಗಿಗೆ ವಿಧಿಸುವ ಮುನ್ನ ಅದರಿಂದ ಒದಗುವ ಲಾಭ ಅದು ಉಂಟುಮಾಡಬಹುದಾದ ನಷ್ಟಕ್ಕಿಂತ ಎಷ್ಟು ಪಾಲು ಜಾಸ್ತಿ ಇದೆ ಎಂಬುದನ್ನು ಖಾತ್ರಿ ಮಾಡಿಕೊಳ್ಳಬೇಕಾದದ್ದು ಅತ್ಯವಶ್ಯ."

೨

ಡಾ. ದಾಸಗುಪ್ತರು ಸಾಕ್ಷ್ಯಾಧಾರಗಳ ಸಮೇತವಾಗಿ ಅಧಿಕಾರಸ್ಥಾನದಿಂದ ಹೊಣೆ ಅರಿತು ಹಿತನುಡಿದ ಮಾತುಗಳ ಮಥಿತಾರ್ಥವನ್ನು ಗಮನಿಸೋಣ. ಆಧುನಿಕ ಔಷಧಿಗಳ ಗೌಣಪರಿಣಾಮಗಳನ್ನು ಲೆಕ್ಕಿಸದೆ ಅವನ್ನು ಯದ್ವಾ ತದ್ವಾ ವಿಧಿಸುವ ಮತ್ತು ಸೇವಿಸುವ ಪ್ರವೃತ್ತಿ ಪಿಡುಗಾಗಿ ಬೆಳೆದಿರುವ ಇಂದಿನ ಅಪಾಯಕರ ಸನ್ನಿವೇಶದ ವಿರುದ್ಧ ಅವರು ಎಚ್ಚರಿಕೆಯ ಗಂಟೆಯನ್ನು ಸಕಾಲದಲ್ಲಿ ಬಾರಿಸಿದ್ದಾರೆ.

ಶಕ್ತಿದಾಯಕ ಚುಚ್ಚುಮದ್ದುಗಳು, ರೋಗನಾಶಕ ಪ್ರತಿಜೈವಿಕಗಳು, ಸತ್ವಪೂರಕ ವೈಟಮಿನ್ ಗುಳಿಗೆಗಳು, ಉತ್ಸಾಹದಾಯಕ ಮಾತ್ರೆಗಳು, ಸರ್ವಕಾಲ ಸರ್ವವ್ಯಾಧಿ ಶಾಶ್ವತನಿವಾರಕ ಸಂಜೀವಿನಿಗಳು ಮೊದಲಾದ ಟಿಫೀರ್ ಸುಗಮ ಜೀವನ ಪ್ರೇರಕಗಳು ಇಂದು ದೇಶಾದ್ಯಂತ ವಿಪುಲವಾಗಿ ದೊರೆಯುವವು. ಆಹಾರ ಸಾಮಗ್ರಿ, ನೀರು, ಬಟ್ಟೆ ಮುಂತಾದವುಗಳಿಗೆ ಬರ ಬರುವುದುಂಟು. ಆದರೆ ಔಷಧಿ ಅಂಗಡಿಗಳ ಆಕರ್ಷಕ ಕಪಾಟುಗಳ ಒಳಗಿನ ಬೇಗಡೆ ವರ್ಣರಂಜಿತ ಪದರಗಳ ನಡುವೆ ಬಂಧಿತವಾಗಿರುವ "ಜೀವಪೋಷಕ"ಗಳಿಗೆ ಕೊರತೆ ಇಲ್ಲ. ಒಂದು ಛಾಪಿನದು ಇಲ್ಲದಿದ್ದರೆ ಬೇರೊಂದು ಛಾಪಿನದು, ಯಾವುದೋ ಹೆಸರಿನದು ದೊರೆಯದಿದ್ದರೆ ಇನ್ನೊಂದು ಹೆಸರಿನದು—ಅಂತೂ ಮದ್ದಿಗೆ ಕೊರತೆ ಏನೂ ಇಲ್ಲ. ಕ್ಷೇಮಕ್ಕೆ ಕ್ಷಾಮ ಬರಬಾರದು ಅಲ್ಲವೇ? ಹೀಗೆ ಆ ಪುಟಾಣಿ ಸೀಸೆ ಸಾಲುಗಳು, ಮುಚ್ಚಳ ಬಿಚ್ಚಿದೊಡನೆ ಹೊರನೆಗೆದು ನಮ್ಮನ್ನು ಕಾಪಾಡಲು ನಾಳಗಳ ಒಳಗೆ ಕುಳಿತಿರುವ ಸರಿಗಳು (ಪೇಸ್ಟ್ಸ್), ಘನೀಭವಿತ ಆಯುರಾರೋಗ್ಯಗಳಂತೆ ರಂಜಿಸುವ ಗುಳಿಗೆಗಳು ಎಲ್ಲವೂ ನಮ್ಮನ್ನು "ಬಾನೊಳವೆ ಬಾನೊಳವೆ ಬಾ ನನ್ನ ಮನೆಗೆ, ಬಾನೊಳಗೆ ಹಾರಿ ಬಲು ದಣುವಾಯ್ತು ನಿನಗೆ" ಎಂಬ ಜೇಡನ ಹಾಡಿನಂತೆ ಕರೆಯುತ್ತವೆ. ಸಾವಿಲ್ಲದಾ ಮನೆ ಉಂಟೆ, ಜಡ್ಡಿಲ್ಲದಾ ಕುಳ ಉಂಟೆ? ತಲೆನೋವು, ಕಣ್ಣುರಿ, ಹೊಟ್ಟೆ ಬೇನೆ, ಕೀಲು ಸೆಳೆತ, ತೊಗಲು ಕಡಿತ, ಅಂಗೈ ನಡುಕ—ಹೇಳಲು ಹಿರಿದಲ್ಲ; ಆದರೆ ಅನುಭವಿಸಲು ಖಂಡಿತ ಕಿರಿದಲ್ಲ; ಒಂದೊಂದೂ ಮಹಾ ಮಾರಿಯೇ. ಇಂಥ ಕಿರುಕುಳಗಳು—ಕಾರ್ಯೋತ್ಸಾಹಕ್ಕೆ ಸದಾ ಬಿರಿ ಅಮುಕುವ ಜಗ್ಗು ಜಡ್ಡುಗಳು—ಒಂದು ಮಾತ್ರೆಯ ನುಂಗಣೆಯಿಂದ ಇಲ್ಲವೇ ಒಂದು ಮುಲಾಮಿನ ಸವರಿಕೆಯಿಂದ ಇಲ್ಲವೇ ಒಂದು ಕುತ್ತಿನ (ಪ್ರಿಕ್) ನೇರ ಪ್ರವೇಶದಿಂದ ಆಗಿಂದಾಗಲೇ ತೊಲಗಿ ಹೋಗಿ ಬದುಕು ಹಗುರಾಗುವುದಾದರೆ ಸ್ವರ್ಗ ಖಂಡಿತ ಆಚೆ ತಿರುಗಾಸಿನಲ್ಲಿರುವುದು ಖಂಡಿತ ಅಲ್ಲವೆ? ಈ ತೆರನಾಗಿ ಮನಸ್ಸು ಪಾದಮಾಡಿ ಸ್ವಯಮೌಷಧೀಕರಣವನ್ನು (ಸೆಲ್ಫ್‌ಡ್ರಗ್ಗಿಂಗ್) ಪ್ರಾರಂಭಿಸಲು ಪ್ರೇರಿಸುತ್ತದೆ. ಸ್ನೇಹಿತರೊಡನೆ ಅಭಿಪ್ರಾಯ ವಿನಿಮಯ ನಡೆವಾಗ ಕೂಡ ಇಂಥ ಭಾವನೆಗಳು ಮೂಡುವುದುಂಟು. ಅಂತೂ ವ್ಯಕ್ತಿ ಮದ್ದಿನ ಅಂಗಡಿಗೆ ಹೋಗುತ್ತಾನೆ. ಅಲ್ಲಿನ ಮಾರಾಟಗಾರ ತನ್ನ ಕಸಬಿನಲ್ಲಿ ಬಲು ಸುಟಿ ಆದವ. "ಒಂದು ಜಡ್ಡು = ಒಂದು ಮದ್ದು"—ಇದು ಅವನ ವ್ಯಾಪಾರಾನುಭವೀ ನಿಘಂಟಿನಲ್ಲಿ ಸುಲಭವಾಗಿ

ದೊರೆಯುವ ಸೂತ್ರ. ಇನ್ನು ಆ ಮದ್ದು ಅಷ್ಟೇನೋ ಸುಲಭಲಭ್ಯವಿದೆ ಎನ್ನುವುದಂತೂ ತಿಳಿದದ್ದೇ. ಯಾವ ರುಗ್ಣಾಲಯಕ್ಕೂ ಹೋಗದೆ ಯಾವ ವೈದ್ಯನನ್ನೂ ವಿಚಾರಿಸದೆ ಸುಲಭವಾಗಿಯೂ ನೇರವಾಗಿಯೂ ಔಷಧಿಯನ್ನು ಪಡೆಯುವ ಆ ಸೌಕರ್ಯವಾದರೂ ಸಾಮಾನ್ಯವೇ? ಇನ್ನೂ ಹೆಚ್ಚಿನ ಸಲಹೆ ಮತ್ತು ಮಾಹಿತಿ ಬೇಕೇ? ತಕ್ಕೊಳ್ಳಿ, ಮಾರಾಟಗಾರ ಅದನ್ನು ಪುಕ್ಕಟೆ ನೀಡುತ್ತಾನೆ. ಮದ್ದು ತಯಾರಕರು ಒದಗಿಸಿರುವ ಮುದ್ರಿತ ವಿವರಣೆಗಳೂ ವರದಿಗಳೂ ಮಾಯಾಲೋಕವೊಂದನ್ನು ಗಿರಾಕಿಯ ಎದುರು ಅನಾವರಣ ಮಾಡುತ್ತವೆ. ಸರಿ, ವ್ಯಕ್ತಿ ಸ್ವಯಮೌಷಧೀಕರಣದ ಅನಿವಾರ್ಯ ಹೆಜ್ಜೆಯನ್ನು ಇಡುತ್ತಾನೆ. ಇತ್ತ ವಾರ್ತಾಮಾಧ್ಯಮಗಳಲ್ಲಿ ಪ್ರಸಾರವಾಗುವ ಜಾಹೀರಾತುಗಳು ಮನಂಬುಗುವಂತಿರುವುವು, ಅತ್ಯಾಕರ್ಷಕವಾಗಿರುವುವು. ಶ್ರೋತೃಗಳನ್ನು ತಮ್ಮತ್ತ ಕ್ರಮಶಃ ಒಲಿಸಿಕೊಳ್ಳುವ ತಂತ್ರವನ್ನು ಅವು ಅತಿ ಅಪ್ಯಾಯಮಾನವಾಗಿ ಅನುಸರಿಸುತ್ತವೆ. ಅವನ್ನು ಓದುತ್ತ ಮತ್ತು ಕೇಳುತ್ತ ಹೋದಂತೆ ಪ್ರತಿಯೊಬ್ಬನೂ ತನ್ನಲ್ಲಿ ಇಲ್ಲದ ಒಂದು ಹೊಸ ಬಾಯಿಲೆಯನ್ನು ಕಾಣುವ ಅಥವಾ ಸೃಷ್ಟಿಸುವ ನವಬ್ರಹ್ಮನಾಗುತ್ತಾನೆ. ಮುಂದಿನ ಹಾದಿ ಸಲೀಸು: ಜಾಹೀರಾತು ಸೂಚಿಸುವ ಮದ್ದನ್ನು ನೇರವಾಗಿ ಅಂಗಡಿಯಿಂದ ಕೊಂಡು ಗುಳುಂಕರಿಸುವುದು.

ಯಾವುದೇ ಮದ್ದಿನ ಅಂಗಡಿಯಲ್ಲಿ ನಡೆವ ವ್ಯಾಪಾರ ಬಲು ಬಿರುಸಿನದು. ಅದನ್ನು ವಿಶಾಲವಾಗಿ ಎರಡು ವರ್ಗಗಳಾಗಿ ವಿಭಾಗಿಸಬಹುದು: ಒಂದು, ವೈದ್ಯರ ಮದ್ದು ಚೀಟಿಗಳ ಅನುಸಾರ ಮಾರಾಟವಾಗುವಂಥದು; ಎರಡು, ಗಿರಾಕಿಗಳೇ ಖುದ್ದು ಮದ್ದಿನ ಹೆಸರು ಹೇಳಿ ಕೊಂಡುಕೊಳ್ಳುವಂಥದು. ಈ ಎರಡನೆಯ ವರ್ಗದವರೇ ಸ್ವಯಮೌಷಧೀಕರಣದ "ತಜ್ಞರು". ಮೊದಲು ಇವರು ಮದ್ದನ್ನು ನಿಯಂತ್ರಿಸುತ್ತಾರೆ; ಮತ್ತೆ ಮದ್ದು ಇವರನ್ನು ಆಳಲು ಆರಂಭಿಸುತ್ತದೆ. ಮುಂಜಾನೆ ಎದ್ದೊ- [illegible]

ಬದುಕು ರಾತ್ರಿ ಕೊನೆಯ ಗುಟುಕಾಗಿ ನಿದ್ರಾಮಾತ್ರೆಯೊಂದಿಗೆ ಮುಗಿಯುವುದು ಸಾಧಾರಣ ಕ್ರಮ.

ಇಂದು ಆಸ್ಪತ್ರೆಗಳಿಗೆ ದಾಖಲಾಗುವ ರೋಗಿಗಳ ಪೈಕಿ ಸ್ವಯಮೌಷಧೀಕರಣದಿಂದ ಪೀಡಿತರಾದವರ ಸಂಖ್ಯೆ ಗಮನಾರ್ಹವಾಗಿ ಏರುತ್ತಿದೆ ಎಂಬ ವರದಿಗಳು ಪತ್ರಿಕೆಗಳಲ್ಲಿ ಬರುತ್ತಿರುವುದನ್ನು ಜನ ಗಂಭೀರವಾಗಿ ಅರಿತುಕೊಳ್ಳುವುದು ಅತ್ಯಗತ್ಯ. ನಿದ್ರಾಮಾತ್ರೆಗಳ ಇಲ್ಲವೇ ಪೆಥಿಡೀನ್ ಸೇವನೆಯ ಗುಲಾಮರ ಪಾಡು ಈಗ ಅನುದಿನದ ಸುದ್ದಿಯಾಗಿದೆ. ಮನುಷ್ಯದೇಹ ಅತಿ ಸಂಕೀರ್ಣವಾದ ಸ್ವನಿಯಂತ್ರಕ ವ್ಯವಸ್ಥೆ. ಸಾಧಾರಣ ಸನ್ನಿವೇಶಗಳಲ್ಲಿ ಅದನ್ನು ಬಾಧಿಸುವ ಬಾಹ್ಯ ಪೀಡೆಗಳನ್ನು ಅದು ನಿವಾರಿಸಿಕೊಂಡು ಆರೋಗ್ಯವನ್ನು ಕಾದಿಡುವ ಸಾಮರ್ಥ್ಯ ಅದಕ್ಕೆ ಉಂಟು. ಅದರ ಈ ಸಹಜ ತ್ರಾಣವನ್ನು ಪೋಷಿಸುವ ತೆರನಾಗಿ ಬದುಕನ್ನು ರೂಪಿಸಿಕೊಳ್ಳಬೇಕಾದದ್ದು ಬುದ್ಧಿವಂತನೂ ವಿವೇಕಿಯೂ ಆದ ಮನುಷ್ಯನ ಕರ್ತವ್ಯ. ಹಾಗಲ್ಲದೇ ಅಶಿಸ್ತಿನ ರಭಸ ಜೀವನವನ್ನು ಬಾಳಿ ಅದರ ಪ್ರತಿಕ್ರಿಯೆಯಾಗಿ ದೇಹ ಪ್ರದರ್ಶಿಸುವ ಲಕ್ಷಣಗಳನ್ನು ತೀಕ್ಷ್ಣವಾದ ಆಧುನಿಕ ಔಷಧಿಗಳಿಂದ ಹತ್ತಿಕ್ಕುವೆನೆಂದು ಈತ ಹೊರಟನೋ ಒಂದಲ್ಲ ಒಂದು ದಿವಸ ಇವನು ಔಷಧಿಜನ್ಯ ಮಹಾವ್ಯಾಧಿಗಳಿಗೆ ತುತ್ತಾಗುವುದು ನಿತ್ಯ ಸತ್ಯ.

ಇದನ್ನೇ ಡಾ. ದಾಸಗುಪ್ತರು ಸೋದಾಹರಣವಾಗಿ ವರ್ಣಿಸಿದ್ದು. ಅವರ ಅಭಿಪ್ರಾಯ ಸುಸ್ಪಷ್ಟವಾಗಿದೆ. ಯಾವುದೇ ಅಸ್ವಾಸ್ಥ್ಯದ ಪ್ರಕಟಿತ ಲಕ್ಷಣವನ್ನು ಸಮಗ್ರವಾಗಿ ಪರಿಶೀಲಿಸಿ (ಅಂದರೆ ಮನುಷ್ಯದೇಹ ಅಖಂಡವಾದ ಒಂದು ವ್ಯವಸ್ಥೆ ಎಂಬುದನ್ನು ಮರೆಯದೆ) ಅದರ ಮೂಲ ಕಾರಣವನ್ನು ನಿವಾರಿಸುವುದರತ್ತ ಸಮರ್ಥ ಮತ್ತು ತಜ್ಞ ವೈದ್ಯರು ಲಕ್ಷ್ಯ ಹರಿಸಬೇಕು. ಮದ್ದು ತಯಾರಕರು ಬಜಾರುಗಳಲ್ಲಿ ಹೊನಲಿನೋಪಾದಿ ಹರಿಯಬಿಟ್ಟಿರುವ ಕ್ಷಿಪ್ರ ಗುಣಕಾರಿಗಳನ್ನು ವಿಧಿಸುವ ಗುಮಾಸ್ತರು [illegible]

ಪ್ರಯೋಗಾವಳಿಗಳು: ವೈದ್ಯಕೀಯ ನಾನಾ ವಿವಿಧ ಸಂಕ್ಲಿಷ್ಟ ಹಾಗೂ ದೀರ್ಘಕಾಲೀನ ಪರೀಕ್ಷೆಗಳಲ್ಲಿ ಉತ್ತೀರ್ಣವಾಗಿ ತಮ್ಮ ಉಪಯುಕ್ತತೆಯನ್ನು (ಅದರೊಂದಿಗೆ ಗೌಣ ಪರಿಣಾಮಗಳನ್ನು ಕೂಡ) ಸಂಶಯಾತೀತವಾಗಿ ಸ್ಥಾಪಿಸಿರುವ ಶಿಷ್ಟ ಔಷಧಿಗಳನ್ನು ಮಾತ್ರ, ಸಮರ್ಪಕ ಮುನ್ನೆಚ್ಚರಿಕೆಗಳ ಸಮೇತ, ಅವರು ಪ್ರಯುಕ್ತಿಸಬೇಕು. "ಒಂದು ಲಕ್ಷಣ = ಒಂದು ಗುಟ್ಟಿ (ಡೋಸ್)" ಎಂಬ ಅತಿಸರಳೀಕರಣ ಸಲ್ಲದು.

ಇಂಥ ಔಷಧಿಯನ್ನೇ ರೋಗಿಯಾದವ ಸೇವಿಸಬೇಕೆಂದು ವಿಧಿಸಲಿಕ್ಕಾದವರು ಯಾರು? ಪರಿಣತ ಮತ್ತು ಅನುಭವೀ ವೈದ್ಯ ಮಾತ್ರ, ರೋಗಿ ಸುತರಾಂ ಅಲ್ಲ; ಮದ್ದಿನ ಅಂಗಡಿಯ ಮಾರಾಟಗಾರನೂ ಅಲ್ಲ. ಇನ್ನು ಆಧುನಿಕ ವೈದ್ಯವಿಜ್ಞಾನವನ್ನು ಶಾಸ್ತ್ರೀಯವಾಗಿ ಕಲಿಯದೆ ಅದರ ಬಾಹ್ಯ ಲಾಂಛನಗಳಾದ ಡಾಕ್ಟರ್ ಬಿರುದನ್ನು ತಾನೇ ತಳೆದು ಕೊರಳಲ್ಲಿ ಹೃನ್ನಾದ ಶ್ರವಣಕಾರಿಯನ್ನೂ (ಸ್ಟೆತೊಸ್ಕೋಪ್) ಎಡಗೈಯಲ್ಲಿ ದಿಢೀರ್ ಚುಚ್ಚುಮದ್ದು ಕುತ್ತಬಲ್ಲ ಪಿಚಕಾರಿಯನ್ನೂ ಬಲಗೈಯಲ್ಲಿ ಅಭಯಪ್ರದಾಯಕ ಔಷಧಿ ಚೀಟಿ ಬರೆದು ಕೊಡಲು ಲೇಖನಿಯನ್ನೂ ಧರಿಸಿರುವ ನಕಲಿ ವೈದ್ಯನಂತೂ ಖಂಡಿತ ಅಲ್ಲ. ವಾಲ್ಮೀಕಿ ರಾಮಾಯಣದಲ್ಲಿ ಬರುವ ಶ್ಲೋಕ ನೋಡಿ: "ಉಪಾಯ ಕುಶಲಂ ವೈದ್ಯಂ ಭೃತ್ಯಂ ಸಂದೂಷಣೇ ರತಮ್। ಶೂರಮೈಶ್ವರ್ಯಕಾಮಂ ಚ ಯೋ ನ ಹಂತಿ ಸ ವಧ್ಯತೇ॥" (ಉಪಾಯದಿಂದ ಹಣವನ್ನು ಕೀಳುವ ವೈದ್ಯನನ್ನೂ ಒಡೆಯನನ್ನೇ ದೂಷಿಸುವ ಸೇವಕನನ್ನೂ ತನ್ನ ಐಶ್ವರ್ಯದ ಮೇಲೆ ಕಣ್ಣಿಟ್ಟಿರುವ ಶೂರನನ್ನೂ ರಾಜನು ವರ್ಜಿಸಬೇಕು ಇಲ್ಲವೇ ಕೊಂದುಬಿಡಬೇಕು. ಇಲ್ಲದಿದ್ದರೆ ತಾನೇ ವಿಪತ್ತಿನಲ್ಲಿ ಸಿಕ್ಕಿಕೊಳ್ಳುತ್ತಾನೆ— ರಂಗನಾಥ ಶರ್ಮಾ).

೩

ಸ್ವಾರೋಗ್ಯ ಪಡೆಯಲು ಒಳದಾರಿ ಒಂದುಂಟು— ಅದು ನೇರ ದಾರಿ ಕೂಡ; ಅದೇ ನಿಸರ್ಗ ತೋರಿಸುವ ದಾರಿ; ಶಿಸ್ತಿನ ಬದುಕು. "ಊಟ ಬಲ್ಲವನಿಗೆ ರೋಗವಿಲ್ಲ" ಎಂಬ ನಾಣ್ಣುಡಿ ತಲೆಮಾರುಗಳ ಅನುಭವದ ಸಾರ. ಇಂಥ ಬಾಳ್ವೆಯಲ್ಲಿಯೂ ಬೇನೆ ಕಾಡಿದಾಗ ಒಡನೆ ಮದ್ದು ಮಾಡಲು ಚಡಪಡಿಸಿ ಗಡಿಬಡಿಸಬೇಕಾದ್ದಿಲ್ಲ. ಆಧುನಿಕ ವೈದ್ಯವಿಜ್ಞಾನ ಪುಸ್ತಕದಲ್ಲಿ ಒಂದು ಹೇಳಿಕೆ ಉಂಟು: "ಉರಿಶೀತಕ್ಕೆ ಚಿಕಿತ್ಸೆ ಮಾಡಿದಾಗ ಗುಣವಾಗಲು ಅದು ಒಂದು ವಾರ ತೆಗೆದುಕೊಂಡರೆ ಚಿಕಿತ್ಸೆ ಮಾಡದಾಗ ಏಳು ದಿವಸಗಳನ್ನು ತೆಗೆದುಕೊಳ್ಳುತ್ತದೆ." ಅವಿಶ್ರಾಂತ ಅತಿಭೋಜನದ ಪರಿಣಾಮವಾಗಿ ಅತಿಸಾರ ಬಂದಾಗ ಎಂಜೈಮ್ ಗುಳಿಗೆಗಳನ್ನು ನುಂಗಿ ಮತ್ತೆ ಹೊಟ್ಟೆಗೆ ಆಹಾರ ಗಿಡಿಯುವುದಲ್ಲ ಮದ್ದು. ಬದಲು, ಉಪವಾಸ ಅಥವಾ ಗಂಜಿ ನೀರು ಮತ್ತು ನೆಲ್ಲಿ ಹಿಂಡಿ ತಂಬಳಿ ಸರಿಯಾದ ಪರಿಹಾರ. ನಮಗೆ ದಿನ ದಿನ ಎದುರಾಗುವ ಸಾಧಾರಣ ಅಸ್ವಾಸ್ಥ್ಯಗಳಿಗೆ ಸುಲಭ ಖರ್ಚಿನ, ನಾವೇ ಆಹಾರದ ಅಂಗವಾಗಿ ಸೇವಿಸಿ, ಆರೊಗ್ಯ ಗಳಿಸಬಹುದಾದ ಉಪಾಯಗಳು ಬೇಕಾದಷ್ಟು ಇವೆ— ಕಂಚಿ ಸಟ್ಟು, ಕಟುಕ ರೋಹಿಣಿ, ಕಾಡುಜೀರಿಗೆ, ಒಳ್ಳೆ ಮೆಣಸು, ಶುಂಠಿ, ಹಿಪ್ಪಲಿ, ಜ್ಯೇಷ್ಠಮಧು, ಹಲವಾರು ಹಸಿರುವಾಗಿಗಳು ಮುಂತಾದವು ಈ ಸಾಲಿಗೆ ಸೇರುವುವು. ಬೇನೆ ತೀವ್ರವಾದದ್ದಾದರೆ ಖಂಡಿತ ವೈದ್ಯನ ಆಶ್ರಯ ಪಡೆಯಲೇಬೇಕು. ಸ್ವಯಂ ಔಷಧೀಕರಣವನ್ನು ಎಂದೂ ತೊಡಗಬಾರದು.

ಹೆಲನ್ ಬಿ. ಟಾಸಿಗ್ ಎಂಬಾಕೆ ೧೯೪೪ರ ವೇಳೆಗೆ ಪ್ರಪ್ರಥಮವಾಗಿ ನಿರ್ವಹಿಸಲಾದ ನೀಲಶಿಶು ಶಸ್ತ್ರಕ್ರಿಯೆಯ ಪ್ರವರ್ತಕಿ. ಅಮೇರಿಕದ ಬಾಲ್ಟಿಮೋರಿನ ಜಾನ್ ಹಾಪ್‌ಕಿನ್ಸ್ ವೈದ್ಯಶಾಲೆಯಲ್ಲಿ ಶಿಶುಸಂಗೋಪನಶಾಸ್ತ್ರದ ಪ್ರಾಧ್ಯಾಪಿಕೆ. ಈಕೆ ೧೯೬೭ರಷ್ಟು ಹಿಂದೆಯೇ ಅಮೇರಿಕ ದೇಶವನ್ನು ಮುಖ್ಯವಾಗಿ ಲಕ್ಷ್ಯದಲ್ಲಿ ಇರಿಸಿಕೊಂಡು ಬರೆದಿರುವ ಮಾತು ನಮ್ಮ ಸುತ್ತಮುತ್ತಲಿನ ಇಂದಿನ ಪರಿಸ್ಥಿತಿಗೆ ಚೆನ್ನಾಗಿ ಹೊಂದುತ್ತದೆ: "ಸಾಪೇಕ್ಷವಾಗಿ ಸಾಧಾರಣ

ವರ್ಜಿಯ ಬೇನೆಯಾಗಿರುವ ನಿರ್ನಿದ್ರೆಯಂಥ (ಇನ್‌ಸೋಮ್ನಿಯ) ತೊಂದರೆಗೆ ಶಮನಕಾರಿಗಳಾಗಬಲ್ಲ ಮದ್ದುಗಳು ಒಂದು ತಲೆಮಾರಿನ ಹಿಂದೆ ವಿಶಾಲ ಜನಪ್ರಿಯತೆ ಗಳಿಸುತ್ತಿದ್ದದ್ದು ಬಲು ಮಂದಗತಿಯಿಂದ ಮಾತ್ರ. ಮೊದಲ ಕೆಲವು ವರ್ಷಗಳಲ್ಲಿ ಅವನ್ನು ಉಪಯೋಗಿಸುತ್ತಿದ್ದವರ ಸಂಖ್ಯೆ ತೀರ ಕಡಿಮೆ ಆಗಿರುತ್ತಿತ್ತು. ಅವರೂ ಈ ಜನ ಮದ್ದಿನ ಗುಣಕಾರಿತ್ವಕ್ಕೂ ದೀರ್ಘಕಾಲೀನ ಅಪಾಯರಾಹಿತ್ಯಕ್ಕೂ ತಮಗೆ ತಿಳಿಯುವಂತೆಯೇ ಪ್ರತ್ಯಕ್ಷ ಪರೀಕ್ಷಾ ಪ್ರಯೋಗಿಗಳಾಗುತ್ತಿದ್ದರು. ಇಂದಾದರೋ ಔಷಧಿ ಕಾರ್ಖಾನೆಗಳ 'ಶೈಕ್ಷಣಿಕ' ಪ್ರತಿನಿಧಿಗಳು ಪ್ರತಿಯೊಬ್ಬ ವೈದ್ಯನನ್ನೂ ಪದೇ ಪದೇ ಸಂಧಿಸುವುದು ರೂಢಿಯಾಗಿದೆ. ಧಾರಾಳವಾಗಿ ಖರ್ಚುಮಾಡಿ ಆಕರ್ಷಕವಾಗಿ ಸಿದ್ಧಪಡಿಸಿದ ಕರಪತ್ರಗಳು, ಪುಸ್ತಿಕೆಗಳು ಅಂಚೆಮೂಲಕ ರಾಶಿ ರಾಶಿ ಸಂಖ್ಯೆಯಲ್ಲಿ ಆ ವೈದ್ಯನಿಗೆ ಮುತ್ತಿಗೆ ಹಾಕುತ್ತವೆ. ಪೆಟ್ಟಿನ ವೈದ್ಯಕೀಯ ಪತ್ರಿಕೆಗಳಲ್ಲಿ ರಟ್ಟುಗಳ ಮೇಲೋ ಲೋಹಪತ್ರಗಳ ಮೇಲೋ ಪುಷ್ಕಳವಾಗಿ ಮುದ್ರಣಗೊಂಡಿರುವ ವರ್ಣರಂಜಿತ ಜಾಹಿರಾತುಗಳನ್ನು ಕಾಣಬಹುದು. ಇವು ಪ್ರಕಟಿಸುವುದೇನನ್ನು? ಅತ್ಯಾಧುನಿಕ ಶಮನಕಾರಿಯೊಂದರ ಮಹಾಗುಣಗಳನ್ನು, ಇದೀಗ ತಾನೇ ಸಂಪೂರ್ಣ ಪರಿಷ್ಕರಣಕ್ಕೆ ಒಳಪಟ್ಟು ನವರೂಪದಿಂದ ಆವಿರ್ಭವಿಸಿರುವ ವೇದನಾನಾಶಕದ ಕ್ಷಿಪ್ರ ಫಲಕಾರೀ ವರಪ್ರಸಾದಗಳನ್ನು! ಹೀಗೆ ಹೊಸ ಮದ್ದುಗಳು ಕೇವಲ ಕೆಲವೇ ತಿಂಗಳುಗಳಲ್ಲಿ ಭೂರಿ ಮಾರುಕಟ್ಟೆಗಳನ್ನು ಪಡೆಯುತ್ತವೆ."

ಬಹುಮಂದಿ ಜನರಲ್ಲಿ ಸ್ವಯಮೌಷಧೀಕರಣವನ್ನು ಪ್ರೇರಿಸಿ ಅವರ ಜೀವನಕ್ಕೇ ಮಾರಕವಾಗಿರುವ ಆಧುನಿಕ ಔಷಧಿ ಖಂಡಿತ ಅಪರಾಧಿ ಸ್ಥಾನದಲ್ಲಿದೆ. "ಆಧುನಿಕ ಔಷಧಿಯೊಂದು ಭೂರಿ ವ್ಯಾಪಾರ. ನಿವಾರಕ (ಪ್ರಿವೆಂಟಿವ್), ನಿದಾನಕ (ಡಯಗ್ನೊಸ್ಟಿಕ್), ತಪಾಸಕ (ಇನ್ವೆಸ್ಟಿಗೇಟಿವ್) ಮತ್ತು ಚಿಕಿತ್ಸಕ (ತೆರಪ್ಯೂಟಿಕ್) ಪದಾರ್ಥಗಳ ತಯಾರಿಕೆಯನ್ನು ಹೆಚ್ಚು ಹೆಚ್ಚು ಮಾಡಲು ಊಹಿಸಬಲ್ಲ ಪ್ರತಿಯೊಂದು ಮಾರ್ಗದಲ್ಲೂ ಅದು ಪ್ರವರ್ತನಶೀಲವಾಗುತ್ತದೆ. ಮುಂದೆ ರಾಶಿಗಟ್ಟಲೆ ಹರಿದು ಬರುವ ಉತ್ಪಾದನೆಗಳು ಬೇಡುವ ಮಾರುಕಟ್ಟೆಗಳನ್ನು ಅದು ಜನಪ್ರಿಯ ಹಾಗೂ ವೈದ್ಯಕೀಯ ಜಾಹೀರಾತುಗಳ ಮತ್ತು ಉದ್ರೇಕ ಪ್ರವರ್ತನೆಗಳ ಮೂಲಕ ಸೃಷ್ಟಿಸಿ ಅವುಗಳ ಒತ್ತಾಯ ಮಾರಾಟವನ್ನು ಸ್ಥಾಪಿಸುವುದು. ಒಟ್ಟು ಪರಿಣಾಮ ಎಂದರೆ ವೆಚ್ಚದ ಊಹಾತೀತ ಏರಿಕೆ. ಇವೆಲ್ಲವುಗಳ ಪ್ರಭಾವದಿಂದ ವೈದ್ಯನೊಬ್ಬ ಪಾಪಪೂರಿತ ಅಮಾನುಷ ವ್ಯಕ್ತಿ ಆಗಿದ್ದಾನೆ. ಇಂದಿನ ವೈದ್ಯಪದವೀಧರ ಅಣುಜೀವವಿಜ್ಞಾನದಲ್ಲಿ ನಡೆದಿರುವ ಅದ್ಭುತ ನೂತನ ಪ್ರಗತಿಯ ವಿಚಾರ ಪರಿಪೂರ್ಣ ಮಾಹಿತಿಯಿಂದ ತುಂಬಿ ತುಳುಕುತ್ತಿದ್ದಾನೆ; ಆದರೆ ನರಳುತ್ತಿರುವ ಅಥವಾ ಸಾಯುತ್ತಿರುವ ಒಬ್ಬ ರೋಗಿಗೆ ಆಗಲೀ ಅವನ ಚಿಂತಾಕ್ರಾಂತ ಬಂಧುಗಳಿಗೆ ಸಾಂತ್ವನ ವಚನ ಹೇಗೆ ಹೇಳಬೇಕೆಂಬುದನ್ನು ತಿಳಿಯಲಾರದವನಾಗಿದ್ದಾನೆ ಮನುಷ್ಯ ಸಂತತಿಗೆ ಆಧುನಿಕ ಔಷಧಿ ಅಗಾಧ ಒಳ್ಳೆಯದನ್ನು ಮಾಡಿದೆ, ಮಾಡಬಲ್ಲುದು. ನಂಬಲು ಸಾಧ್ಯವಾಗದಂಥ ಅದರ ನಾಜೂಕ ನವುರುಗಳ ನಡುವೆ ಅದಕ್ಕೆ ಬೇಕಾದದ್ದು ಶಿಸ್ತು– ಅದರ ವ್ಯಾಪ್ತಿಯನ್ನು, ಇದಕ್ಕಿಂತ ಹೆಚ್ಚಾಗಿ ಅದರ ಪರಿಮಿತಿಗಳನ್ನು ಅರಿಯುವಲ್ಲಿನ ಶಿಸ್ತು. ಇಂಥ ಮಾರ್ಗದರ್ಶಕ ಸೂತ್ರಗಳ ಗೈರುಹಾಜರಿಯಲ್ಲಿ ಆಧುನಿಕ ಔಷಧಿ ತನ್ನ ದುಸ್ಸಾಹಸಗಳ ಮೂಲಕ ಒಳ್ಳೆಯದಕ್ಕಿಂತ ಹೆಚ್ಚು ಕೆಟ್ಟದ್ದನ್ನೇ ಮಾಡೀತು"– ಪ್ರಸಿದ್ಧ ವೈದ್ಯರೂ ಲೇಖಕರೂ ಆದ ಮನು ಕೊಠಾರಿ ಮತ್ತು ಲೋಪಾ ಮೇಥ ಬರೆದಿರುವ ಈ ಮಾತು ಮನನೀಯವಾಗಿದೆ. ✡



ಅವರು ಸಂಗೀತ
ಮಹಾವಿದ್ಯಾಲಯದ
ಪ್ರಥಮ ಪ್ರಾಚಾರ್ಯೆ

# ಶಾರದಾ ಹಾನಗಲ್

ಎನ್ಕೆ

ನಾಲ್ವತ್ತು ವರ್ಷಗಳ ಹಿಂದಿನ ಮಾತು. ದೇವುಡು ಅವರ 'ಚಿರಂಜೀವಿ' ಚಿತ್ರವನ್ನು ಧಾರವಾಡದ ಜನರೇ ತಯಾರಿಸಿದ ಆ–ಚಿರಂಜೀವಿ ಕೀರ್ತಿ. ಮರಾಠಿ ಮನುಷ್ಯರೊಬ್ಬರ ನಿರ್ದೇಶನ. ಕೊಲ್ಲಾಪುರದಲ್ಲಿ ಶೂಟಿಂಗ್. ನಮ್ಮ ನಮ್ಮವರ ಮುಖಗಳನ್ನು ಬೆಳ್ಳಿಯ ತೆರೆಯ ಮೇಲೆ ಕಾಣಲೆಂದು ಧಾರವಾಡ ವಿಜಯ ಟಾಕೀಜಿಗೆ ಧಾವಿಸಿದ ಅನೇಕರಲ್ಲಿ ನಾನೂ ಒಬ್ಬ.

ನಾರದನು ಸ್ತ್ರೀವೇಷ ಧರಿಸಿ ತನ್ನ ಕೈಯೊಳಗಿನ ವೀಣೆಯನ್ನು ಒಂದು ಹೆಣ್ಣು ಮಗುವನ್ನಾಗಿ ಮಾಡಿ ಮೃಕಂಡು ಮುನಿಯೆಡೆಗೆ ನಡೆತರುತ್ತಾನೆ. "ನಾರಾಯಣ ನಾರಾಯಣ ಭಜಿಸೊ ಮನುಜ..." ಎಳೆಯ ಮಗು ಎಳೆಯ ದನಿಯಲ್ಲಿ ಹಾಡುತ್ತಿದೆ. ಈ ಮಗುವಿನ ಹಾಡು ಕೇಳಲೆಂದೇ ಬಂದವರು ಬಹಳ. ಆ ಮಗು ಇಂದಿನ ಕರ್ನಾಟಕ ಸಂಗೀತ ಮಹಾವಿದ್ಯಾಲಯದ ಪ್ರಾಚಾರ್ಯೆ ಶಾರದಾ ಹಾನಗಲ್. ವೀಣೆಯೊಂದು ಮೈದಾಳಿ ನಿಂತಂತೆಯೇ ಬೆಳೆದುಕೊಂಡು ಬಂದಿದ್ದಾರೆ ಶಾರದಾ. ಅವರ ಕಂಠದಿಂದ ಹೊರಸೂಸುವ ಸ್ವರಗಳು ತಂತಿಯಂತೆ.

ಶಾರದಾ ಚಿಕ್ಕಂದಿನಲ್ಲಿದ್ದಾಗ ಅಂತಹ ಸ್ಥಿತಿವಂತಳೇನೂ ಆಗಿರಲಿಲ್ಲ. ಅಷ್ಟು ಚಿಕ್ಕ ವಯಸ್ಸಿನಲ್ಲಿಯೇ ಸಂಗೀತ ಕಲಿಯುವ

ಯಲ್ಲಿಯೆ ತಮ್ಮ ಕಲೆಯ ಬೆಳವಣಿಗೆಯನ್ನು ಮಾಡಿಕೊಂಡವರಿದ್ದಾರೆ. ಸಂಗೀತವು ಬದುಕನ್ನು ಬಾಳನ್ನಾಗಿ ಮಾಡುವ ಸಾಧನ. "ಸಂಗೀತವು ಸಾಕ್ಷಾತ್ಕಾರದ ಸಾಧನ" ಎಂದು ಖಾನ್‌ಸಾಹೇಬ ಅಬ್ದುಲ್ ಕರೀಮಖಾನ್ ಹೇಳಿದ್ದಾರೆ.

"ನನ್ನ ಕಣ್ಣಾಗ ನೀರು ತರಿಸೋ ಹಾಂಗ ಪಾಡ್ತೀರಾ?" ಶಾರದಾ ಅವರನ್ನು ಕೇಳಿದೆ.

"ನಿಮ್ಮ ಕಣ್ಣಾಗ ನೀರು ತರಿಸ್ತೀನೊ ಇಲ್ಲೊ, ನನ್ನ ಕಣ್ಣಾಗ ಮಾತ್ರ ಬರ್ತಾವ"– ಶಾರದಾ ಅವರ ಉತ್ತರ. ಸಾಕಲ್ಲ!

'ಆಗುವೆನು ನಿನ್ನವನು ನಾನೆಂದು ಹರಿಯೇ
ಹೋಗುತಿವೆ ಜೀವನದ ದಿನಗಳಿವು ದೇವಾ'

ಎಂಬ ಸಾಲಿ ರಾಮಚಂದ್ರರಾಯರ ಭಕ್ತಿಗೀತವನ್ನು ಅದು ತಮ್ಮ ವಿದ್ಯಾರ್ಥಿದೆಸೆಯ ಮೆಚ್ಚುಗೆಯ ಗೀತವೆಂದೂ ಅಸಾವರಿ ರಾಗದಲ್ಲಿ ತನ್ಮಯಳಾಗಿ ಆಲಾಪಿಸಿ ಹಾಡತೊಡಗಿದಾಗ ಅವರ್ಣನೀಯ ಆನಂದ. ಶಾರದಾ ಹಾನಗಲ್ ಅವರು ಭಾವಗೀತಗಳನ್ನೇ ಹಾಡಲಿ, ಭಕ್ತಿಗೀತಗಳನ್ನೇ ಹಾಡಲಿ, ವಚನಗಳನ್ನೇ ಹಾಡಲಿ ಇಲ್ಲವೆ ಠುಮರಿಗಳನ್ನೇ ಹಾಡಲಿ ಆಯಾ ರಚನೆಯ ರಸಭಾವಗಳ ತಿರುಳನ್ನು ತಿಳಿದುಕೊಂಡು ಅನುಭವಿಸಿ ಹಾಡುತ್ತಾರೆ. ಅಂತೆಯೇ ಅವರ ಅಂತರಂಗದಲ್ಲಿ ಮೂಡಿಬರುವ ಸಂಗೀತದ

ಮಾಡಿದರು. ಇತ್ತ ಎಂ. ಎ. ಸಿದ್ಧತೆ, ಅತ್ತ ಸಂಗೀತವಿದುಷಿಯಾಗುವ ಉತ್ಕಟತೆ. ಈ ಜೋಡು ಸವಾರಿಯಲ್ಲಿ ಶಾರದಾ ಜಗ್ಗಲಿಲ್ಲ. ಪುಸ್ತಕ ವಿದ್ಯೆ, ಸಂಗೀತ- ವಿದ್ಯೆ ಎರಡೂ ಸರಸ್ವತಿಯ ಎರಡು ಮುಖಗಳೇ ಅಲ್ಲವೆ? ವಿದ್ಯಾಧಿದೇವತೆ ಪುಸ್ತಕಧಾರಿಣಿಯೂ ಹೌದು, ವೀಣಾಪಾಣಿಯೂ ಹೌದು. ಸರಸ್ವತಿಯೆ ಶಾರದೆ, ಶಾರದೆಯೇ ಸರಸ್ವತಿ. ತಮ್ಮ ಮಗಳಿಗೆ ಹಾನಗಲ್ ಅವರ ತಾಯಿ ಎಷ್ಟು ಅನ್ವರ್ಥಕ ವಾಗಿ ನಾಮಕರಣ ಮಾಡಿದ್ದಾರಲ್ಲ ಎನಿಸಿತು ನನಗೆ. ವಿದ್ಯೆಯಲ್ಲಿ ಪದವೀಧರರಾಗಿ ಸಂಗೀತದಲ್ಲಿ ಪಾರಂಗತರಾದವರು ನಮ್ಮಲ್ಲಿ ಎಷ್ಟು ಜನ? ವಿಶ್ವವಿದ್ಯಾಲಯದಲ್ಲಿಯ ಸಂಗೀತದ ಭವಿಷ್ಯವೂ ಶಾರದಾ ಹಾನಗಲ್ ಅವರ ಜೀವನ ಭವಿಷ್ಯವೂ ಏಕರೂಪವಾಗಿ ಪ್ರಗತಿಸಿದವು.

ತಮ್ಮ ಸಂಗೀತವನ್ನು ಇನ್ನೂ ಸತ್ವಯುತವಾಗಿ ಬೆಳೆಸಿಕೊಳ್ಳಬೇಕು ಎಂಬ ಉತ್ಕಟ ಇಚ್ಛೆ ಪ್ರಬಲವಾಗಿಯೇ ಇತ್ತು. 'A man is as young as his ambitions' ಎಂದು ಹೇಳುತ್ತಾರೆ. ಶಾರದಾ ಹಾನಗಲ್ ಅವರಿಗೂ ಎತ್ತರದ ಆಕಾಂಕ್ಷೆಗಳತ್ತ ಗುರಿಯಿಟ್ಟು ನಡೆಯಲು ಸಾಕಷ್ಟು ವಯಸ್ಸಿತ್ತು. ಕೊಲ್ಲಾಪುರಕ್ಕೆ ಹೋಗಬೇಕು. ಲಕ್ಷ್ಮೀಬಾಯಿ ಜಾಧವ ಅವರ ಬಳಿ ಅಧ್ಯಯನ ಮಾಡಬೇಕು ಎಂಬ ಹಂಬಲ ಬಲವಾಯಿತು. ಲಕ್ಷ್ಮೀ ಬಾಯಿ, ಸಂಗೀತಸಾಮ್ರಾಟ ಅಲ್ಲಾದಿಯಾಖಾನರ ಶಿಷ್ಯೆ. ಖಾನ್‌ಸಾಹೇಬರು ಜಯಪುರ ಗಾಯನ ಪದ್ಧತಿಯ ಪ್ರವರ್ತಕರು. ಅಲ್ಲಾದಿಯಾಖಾನ್‌ಸಾಹೇಬರ ತಪಃಸಿದ್ಧಿಯಲ್ಲಿ ಲಯಕಾರಿ, ತಾನ್‌ಬಾಜಿ, ಸ್ವರಪ್ರಧಾನತೆ ಎಲ್ಲವೂ ಸಮ್ಮಿಲಿತವಾಗಿ ಪಾಕಗೊಂಡಿದ್ದವು. ಅಂಥವರ ಶಿಷ್ಯೆ ಲಕ್ಷ್ಮೀಬಾಯಿ ಜಾಧವ. ಬಡೋದಾ ಸಂಸ್ಥಾನದ ಆಸ್ಥಾನ ವಿದುಷಿಯಾಗಿ ವೈಭವದಿಂದ ಮೆರೆದ ಇವರಿಗೆ ಲಕ್ಷ್ಮಿಯೂ ಒಲಿದು ಬಂದಿದ್ದಳು.

ಸರಿ, ಕೊಲ್ಲಾಪುರಕ್ಕೆ ಹೋಗಿ ಶಿಷ್ಯತ್ವವನ್ನು ಬೇಡುವುದು ಎಂದು ನಿರ್ಧಾರವಾಯಿತು. ಪ್ರಿನ್ಸಿಪಾಲ್ ಢೇಕಣೆಯವರು, ಡಾ. ನಾಯಕ ಮತ್ತು ಶ್ರೀ ಶಾಪೇಟಿ ಅವರು ಜೊತೆಗಿದ್ದರು. ನಮಸ್ಕಾರ ಚಮತ್ಕಾರವಾದ ಮೇಲೆ ಪ್ರಿ. ಢೇಕಣೆಯವರು ಈ ವಾಮನ ಮೂರ್ತಿಯ ಪರಿಚಯ ಮಾಡಿಕೊಟ್ಟರು. ಲಕ್ಷ್ಮೀಬಾಯಿ ಜಾಧವ ಅವರಿಗೆ ಸಂಗೀತ ಪಾಠ ಕಲಿಸಿ ಹಣ ಸಂಪಾದಿಸುವ ಅವಶ್ಯಕತೆ ಇರಲಿಲ್ಲ. ಖ್ಯಾತಿಗಾಗಿ, ಕೀರ್ತಿಗಾಗಿ ಶಿಷ್ಯಪರಂಪರೆಯನ್ನು ಕಟ್ಟುವ ಅವಶ್ಯಕತೆಯೂ ಇರಲಿಲ್ಲ. ೧೯೨೧ ರ ದಶಕದಲ್ಲಿ ಬಡೋದಾ ಸಂಸ್ಥಾನದಿಂದ ಇವರಿಗೆ ತಿಂಗಳಿಗೆ ೪೦೦ ರೂ. ಗೌರವ ಧನ. ೬೦ ವರ್ಷದ ಮಹಿಳೆ ಬಾಯಿ ತೆರೆದರೆ ೧೬ ವರ್ಷದ ತರುಣಿಯಂತೆ ಹಾಡುಗಾರಿಕೆ. ಧಾರವಾಡದ ಬಚ್ಚ ಬಡ ಹುಡುಗಿಯನ್ನು ಇಂತಹ ಖ್ಯಾತಿವೆತ್ತ ಕಲಾವಿದೆ ಶಿಷ್ಯೆಯೆಂದು ಯಾಕೆ ಸ್ವೀಕರಿಸಬೇಕು? ಅವರು ನಿರಾಕರಿಸಿದಾಗ ಶಾರದಾ ನಿರಾಶಗೊಳ್ಳುವದಿರಲಿ ಜೊತೆಗೆ ಬಂದ ಪ್ರಾಧ್ಯಾಪಕರಿಗೂ ದೊಡ್ಡ ನಿರಾಶೆ. ಪ್ರೊ. ಢೇಕಣೆಯವರು ಮತ್ತೊಮ್ಮೆ ಆಗ್ರಹಪಡಿಸಿ ಹೇಳಿದಾಗ ಲಕ್ಷ್ಮೀಬಾಯಿ ಇಲ್ಲೆನ್ನಲಾರದೆ ಸ್ವಲ್ಪ ಹಾಡಿಸಿರಿ ಕೇಳೋಣ ಎಂದರು. ಶಾರದಾ ತಂಬೂರಿ ಶ್ರುತಿ ಮಾಡಿದರು. ರಾಗ ರಾಮಕಲಿ ಹಾಡಿದರು. ಲಕ್ಷ್ಮೀಬಾಯಿ ತದೇಕಚಿತ್ತರಾಗಿ ಕೇಳಿದರು. ಆಮೇಲೆ ಆ ಬಗ್ಗೆ ಏನೂ ಮಾತಾಡಲಿಲ್ಲ. ಶಾರದಾರ ಮನಸ್ಸಿನಲ್ಲಿ ಕಳವಳ, ಕುತೂಹಲ. "ಇಲ್ಲೇ ಇರೋದಾದರೆ ಇವರು ಎಲ್ಲಿ ಇರಬೇಕಂತಾರ?" ಭಾವೀ ಶಿಷ್ಯೆಯ ಬಗ್ಗೆ ಯಾವ ಅಭಿಪ್ರಾಯವನ್ನೂ ಹೇಳದಿದ್ದರೂ ಈ ಮೇಲಿನ ಪ್ರಶ್ನೆಯಿಂದ ಎಲ್ಲರಲ್ಲೂ ಆಶಾಭಾವನೆ ಮೂಡಿತ್ತು.

ಸರಿ. ಅಂತೂ ಶಾರದಾರ ಸಂಗೀತ ಭವಿಷ್ಯದ ಬಾಗಿಲು ತೆರೆಯಿತು. ಶಾರದಾ ಕೊಲ್ಲಾಪುರದಲ್ಲಿ ಇನ್ನೆಲ್ಲಿಯೂ ಉಳಿದುಕೊಳ್ಳಲಿಲ್ಲ– ಸ್ವತಃ ಲಕ್ಷ್ಮೀಬಾಯಿ ಜಾಧವ ಅವರ ಮನೆಯಲ್ಲೇ ಇರತೊಡಗಿದರು. ಇತ್ತ ವಿಶ್ವವಿದ್ಯಾನಿಲಯದ ಸಂಗೀತ ಪ್ರಾಧ್ಯಾಪಿಕೆಯ ವೃತ್ತಿಗೂ [illegible] ಬರಲಿಲ್ಲ. ದೀಪಾವಳಿ ರಜೆಯಲ್ಲಿ, [illegible] ರಜೆಯಲ್ಲಿ ಕೊಲ್ಲಾಪುರ ವಾಸ. ಕೊಲ್ಲಾಪುರದ ಅಂಬಾಬಾಯಿಯಾದ ಲಕ್ಷ್ಮೀದೇವಿ, [illegible]

ಸ್ಥಾನದ ಶ್ರೀಮತಿ ಲಕ್ಷ್ಮೀಬಾಯಿ–ಉಭಯತರ ಅನುಗ್ರಹದಿಂದಾಗಿ ಈ ಅಂಶತಃ ಏಕಲವ್ಯೆಯ ವಿದ್ಯಾತಪಸ್ಸು ಅನುಸ್ಯೂತವಾಗಿ ಮುಂದರಿಯಿತು. ಕೊಲ್ಲಾಪುರದಲ್ಲಿಲ್ಲದಾಗ ಈ ಶಿಷ್ಯೆ ಏಕಲವ್ಯನಂತೆ ತಮ್ಮ ಧಾರವಾಡದ ಮನೆಯಲ್ಲೇ ಗುರುಲಕ್ಷ್ಮಿಯನ್ನು ಸ್ಮರಿಸಿಕೊಂಡು ನಾದೋಪಾಸನೆಯನ್ನು ನಡೆಸಿದರು.

ಲಕ್ಷ್ಮೀಬಾಯಿಯವರಿಗೆ ಹೊಟ್ಟೆಯ ಮಕ್ಕಳಿರಲಿಲ್ಲ. ಆದರೆ ಮಾತೃಹೃದಯ ಎಲ್ಲಿ ಹೋಗುತ್ತದೆ? ಶಾರದಾರನ್ನು ಸ್ವಂತ ಮಗಳಂತೆ ಕಾಣತೊಡಗಿದರು. ಹಾಗೆ ಕಾಣಬೇಕಾದರೆ ಈ ಸಾಕುಮಗಳಲ್ಲೂ ಅಂತಹ ಒಳ್ಳೆಯ ಗುಣಗಳು ಬೇಕಷ್ಟೇ? ಒಮ್ಮೆ ಶಾರದಾ ಧಾರವಾಡದಿಂದ ಕೊಲ್ಲಾಪುರಕ್ಕೆ ಹೋದಾಗ ಬಾಯೀ ಅವರು ಮನೆಯಲ್ಲಿರಲಿಲ್ಲ. ಶಾರದಾ ದಾರಿ ಕಾದರು. ಸ್ವಲ್ಪ ಹೊತ್ತಿನಲ್ಲಿ ಬಾಯೀ ಬಂದರು. ಶಿಷ್ಯವತ್ಸಲೆಯ ಆಗಮನದಿಂದ ಆನಂದಿತರಾದರು. "ಎಲ್ಲಿ ಹೋಗಿದ್ದಿರಿ ಬಾಯಿ?" ಶಾರದಾ ಸಲುಗೆಯಿಂದ ಪ್ರಶ್ನೆ ಮಾಡಿದರು. "ಈ ವಜ್ರದ ಸರ ಮಾರಿಬಿಡಬೇಕು ಎಂದು ಹೋಗಿದ್ದೆ!" ಆದರೆ ಅದನ್ನು ಮಾರದೆ ಯಾಕೆ ತಿರುಗಿ ತಂದರು ಎಂಬುದು ಶಿಷ್ಯೆಗೆ ಅಪ್ರಸ್ತುತ. "ಇದನ್ನ ಯಾಕ ಮಾರತೀರಿ ಬಾಯಿ?" ಎಂದು ಭಾವನಾಮಯತೆಯಿಂದ ಕೇಳಿದರು.

"ಇಟಗೊಂಡು ಏನು ಮಾಡ್ಲಿ ಶಾರದಾ? ಎಷ್ಟೊಂದು ಸಾಮಾನು ತುಂಬ್ಯಾವ ನೋಡು" ಎಂದು ಸಾಕು ಮಗಳಿಗೆ ತಮ್ಮ 'ಜ್ಯೂವೆಲ್ರಿ' ಎಲ್ಲಾ ತೋರಿಸಿದರು. ಬಡೋದಾ ಆಸ್ಥಾನದಲ್ಲಿದ್ದಾಗ ಬಂದಿದ್ದ ಬಹುಮಾನಗಳು, ಕೊಡುಗೆಗಳು, ಕಾಣಿಕೆಗಳು. ಶಾರದಾ ಸುಮ್ಮನಾದರು.

"ಹೇಳು, ನಿನಗ ಬೇಕೇನು ಈ ವಜ್ರದ ನೆಕ್‌ಲೇಸ್?" ಬಾಯಿಯವರ ಈ ಔದಾರ್ಯದ ಮಾತಿನಿಂದ ಶಾರದಾ ಸ್ವಲ್ಪ ತಬ್ಬಿಬ್ಬಾದರು. ಏನೆಂದು ಉತ್ತರಿಸಬೇಕು? ಹೂಂ ಎಂದಿದ್ದರೆ ತಕ್ಷಣವೇ ಆ ಸಾವಿರಗಟ್ಟಲೆ ಬೆಲೆಯ ನೆಕ್‌ಲೇಸ್ ಇವರ ಕೊರಳನ್ನು ಅಲಂಕರಿಸಬಹುದಿತ್ತು. ವಜ್ರದ ಕೊರಳ ಸರಕ್ಕಾಗಿ ಅಲ್ಲ, ವಜ್ರಕ್ಕಿಂತಲೂ ಮಿಗಿಲಾದ ಈ ಸಂಗೀತಲಕ್ಷ್ಮಿಯ ಕೊರಳ ಸ್ವರಕ್ಕಾಗಿ! ಶಾರದಾ ಹೇಳಿದರು– "ಬಾಯಿ, ನನಗ ಈ ನೆಕ್‌ಲೇಸ್ ಬ್ಯಾಡಾ. ನನ್ನ ಗಂಟಲಿಗೆ ಅಲಂಕಾರವಾಗುವಂತಹ ನಿಮ್ಮ ಸಂಗೀತದ ಸರ ಬೇಕು!" ಲಕ್ಷ್ಮೀಬಾಯಿ ಏನೆಂದು ಉತ್ತರಿಸಬೇಕು? ಇಲ್ಲಿ ಗುರುಭಕ್ತಿಗೆ ಏಕಲವ್ಯನ ದೃಷ್ಟಾಂತಕ್ಕಿಂತ ಉತ್ತಂಕನ ದೃಷ್ಟಾಂತ ಕೊಡುವುದು ಲೇಸು. ಏಕೆಂದರೆ, ಧನುರ್ಧಾರಿಯ ಹೆಬ್ಬೆರಳನ್ನು ಗುರುದಕ್ಷಿಣೆಯಾಗಿ ಕೇಳುವ ದ್ರೋಣಾಚಾರ್ಯರಾಗಿರಲಿಲ್ಲ ಈ ಗುರುಲಕ್ಷ್ಮಿ. ತದ್ವ್ಯತಿರಿಕ್ತವಾಗಿ ಶಿಷ್ಯೆಗೇ ಏನು ಬೇಕೊ ಅದನ್ನು ದಾನ ಮಾಡಿ ಜೊತೆಗೆ ಸಂಗೀತ ವಿದ್ಯೆಯನ್ನೂ ದಾನ ಮಾಡುವ ಉದಾರಚರಿತರಾಗಿದ್ದರು.

ಶಿಷ್ಯೆಯ ಈ ಕಲಾನಿಷ್ಠ ಗುರುಗಳನ್ನು ಸಂತುಷ್ಟಗೊಳಿಸಿರಬೇಕೆಂದು ಬೇರೆ ಹೇಳಬೇಕೆ? ಈ ಶಿಷ್ಯವತ್ಸಲೆಯ ಯೋಗಕ್ಷೇಮ ಎಲ್ಲಿಯ ಮಟ್ಟಿಗೆ ನೋಡಿಕೊಂಡರೆಂದು ಹೇಳಬೇಕೆ? ಶಾರದಾ ತಂಬೂರಿ ಹಿಡಿದುಕೊಂಡು ಮಹಡಿಯ ಮೇಲಿದ್ದರೆ ಬಾಯೀ ಅವರೇ ಹಾಲು ಬಿಸಿ ಮಾಡಿಕೊಂಡು ಹೋಗಿ ಅವರಿಗೆ ಕುಡಿಯಲು ಕೊಡಬೇಕು. "ಯಾಕ್ರೀ ಬಾಯೀ ನಾನೇ ಬರತಿದ್ದೆ ನಲ್ಲ?" ಎಂದರೆ "ನೀನು ನನ್ನ ಮಗಳಲ್ಲವೇನು?" ಎನ್ನುವರು. ಮಗಳಷ್ಟೇ ಮಮತೆ. ಸಂಗೀತ ವಿದ್ಯೆಯನ್ನು ನೀಡುವಾಗಲೂ ಮಜ್ಜಿಗೆ ಸ್ವಲ್ಪ ಹುಳಿ ಎನಿಸಿದರೆ ಅದನ್ನು ಶಿಷ್ಯೆಗೆ ನೀಡುತ್ತಿದ್ದಿಲ್ಲ. "ಹುಳಿ ತಿಂದರೆ ಗಂಟಲಿನೊಳಗೆ ಗೆರೆ ಬೀಳುತ್ತವೆ," ಎಂದು ಹೇಳಬೇಕು. ಹುಳಿ ಉಪ್ಪಿನಕಾಯಿಯೂ ಶಿಷ್ಯೆಗೆ ನಿಷಿದ್ಧವಾಗಿತ್ತು.

"ಧಾರವಾಡದ ತಾಯಿಯಿಂದ ಕೊಲ್ಲಾಪುರದ ತಾಯಿ ಕಡೆಗೆ ಹೋಗೋ ಹಾಂಗ ನನಗ ದೇವರು ಇಬ್ಬರು ತಾಯಂದಿರನ್ನು ಕೊಟ್ಟಾಂಗ ಆಗಿತ್ತು" ಎಂದು ಶಾರದಾ ನುಡಿಯುವಾಗ ಕಂಠ ತುಂಬಿ ಬಂದಿತ್ತು. ಒಮ್ಮೆ ಧಾರವಾಡದಿಂದ ಕೊಲ್ಲಾಪುರಕ್ಕೆ ಹೋಗುವಾಗ ಈ ತಾಯಿಯಿಂದ ಆ ತಾಯಿಗೆ ಏನು ಒಯ್ಯುವುದು? ಎಂದು ಆಲೋಚಿಸಿ ಒಳ್ಳೆ

ಚಟ್ನಿ ಒಪ್ಪುರೆ ಆ ತಾಯಿ ಅತ್ಯಂತ ಮಮತೆಯಿಂದ ಅಪರೂಪದ ಪಕ್ವಾನ್ನ ದೊರೆತಂತೆ ರುಚಿ ಮಾಡಿಕೊಂಡು ತಿಂದರಂತೆ.

"ನಿಮ್ಮಿಬ್ಬರ ನಡುವೆ ಯಾವ ಭಾಷೆಯೊಳಗ ಸಂಭಾಷಣೆ ನಡೀತಿತ್ತು?" "ನನಗ ಮರಾಠಿ ನೆಟ್ಟಗ ಬರತಿದ್ದಿಲ್ಲ. ಅವರಿಗೆ ಕನ್ನಡ ಅಪೂಟ ತಿಳೀತಿದ್ದಿಲ್ಲ. ಆದರೆ ನಮ್ಮಲ್ಲಿ ಪ್ರೇಮ ಇತ್ತು." ಸಂಗೀತಕ್ಕ ಭಾಷಾದ ಗೋಡೆ ಎಂದೂ ಅಡ ಬರೋದಿಲ್ಲ ಅಂಬೋದು ನನಗ ಖಾತ್ರಿ ಆತು."

ಅವರೂ ಶ್ರದ್ಧೆಯಿಂದ ಕಲಿಸಿದರು, ಇವರೂ ಶ್ರದ್ಧೆಯಿಂದ ಕಲಿತರು. ಬೆಳಗ್ಗೆ ಐದು ಗಂಟೆಗೆ ತಂಬೂರಿಯ ಸ್ವರ ತರಂಗದ ಅಲೆಗಳು ವಾತಾವರಣದಲ್ಲಿ ತೇಲಿದಾಗ ಕೊಲ್ಹಾಪುರದಲ್ಲಿ ಅರುಣೋದಯವಾಗಬೇಕು. ಲಕ್ಷ್ಮೀ ಗುಡಿಯ ಚೌಘಡಾ ಬಾರಿಸಬೇಕು. ಮುಂದೆ ಎರಡು ತಾಸಿನ ಮೇಲೆ ಸ್ವಲ್ಪ ಹೊತ್ತು ವಿರಾಮ. ಆಮೇಲೆ ಮತ್ತೆ ಹತ್ತು ಗಂಟೆಯ ವರೆಗೆ. ಮಧ್ಯಾಹ್ನ ಊಟ, ವಿರಾಮ ಆದ ಮೇಲೆ ಪುನಃ ತಂಬೂರಿಯನ್ನು ತೀಡುವುದೆ. ಇದು ಸಂಗೀತ ಗರಡೀ ಸಾಧನೆ. ಹೀಗೆ ಸುಮಾರು ಐದು ವರ್ಷ ಕಾಲ ಸತತವಾಗಿ ಅಭ್ಯಾಸ ನಡೆಯಿತು. ಪ್ರಾರಂಭದಲ್ಲಿ ಗೌರೀ ರಾಗವೇ ಆರು ತಿಂಗಳು ನಡೆಯಿತು. ಆಮೇಲೆ ನಂದ ರಾಗ. ಹೀಗೆ ಕೆಲವೇ ರಾಗಗಳು. ಒಂದು ಪಾಯಾ ಬಿಟ್ಟಮೇಲೆ ಅಪಾಯವಿಲ್ಲದೆ ತಮ್ಮಷ್ಟಕ್ಕೆ ಹಾಡುವ ವಿಶ್ವಾಸ ಬೆಳೆಯಿತು.

ಆಗ ತೆಳ್ಳಗಿದ್ದ ಶಾರದಾ ತುಂಬಿಕೊಂಡು ಕೋಗಿಲೆ ಮರಿಯಂತೆ ಪರಪುಷ್ಟರಾಗಿ ಬೆಳೆದು ಸಂಗೀತಕಲಾವಿದೆಯರಲ್ಲಿ ಇವರೂ ಒಬ್ಬರು ಎನ್ನುವ ಹಾಗೆ ಆದರು.

ಧಾರವಾಡಕ್ಕೆ ಮರಳಿ ಬಂದ ಮೇಲೆ ಸಂಗೀತ ಪ್ರಾಧ್ಯಾಪಿಕೆಯಾಗಿ ಶಸ್ತ್ರಸಜ್ಜಿತಳಾಗಿ ಬಂದಂತಾಯಿತ್ತು, ಯಾವುದೇ ಸಂಗೀತ ಚರ್ಚೆಯಲ್ಲಿ ಒಂದು ಪ್ರಮಾಣದಿಂದ ಮಾತನಾಡುವ ಅಧಿಕಾರದೊಂದಿಗೆ ಇನ್ನೂರು ಜನ ತಲೆದೂಗುವಂತೆ [illegible] ಪ್ರತಿಪಾದಿಸುವ ನೈಪುಣ್ಯವೂ ದೊರೆಕೊಂಡಿತ್ತು.

ಇತ್ತ ಧಾರವಾಡದಲ್ಲಿ ಇನ್ನೊಂದು ಸದವ-ಕಾಶ! ಆಗ್ರಾ ಘರಾಣೆಯ ಪುರಸ್ಕರ್ತ ವಿಲಾಯತ ಹುಸೇನಖಾನ್ ಅವರ ನಿಕಟ ಶಿಷ್ಯ ಹಣಮಂತರಾವ್ ವಾಳವೇಕರ ಅವರ ಗರಡಿಯಲ್ಲಿ ಸಾಧನೆಮಾಡುವ ಸುಯೋಗ ಒದಗಿತು. ಹಣಮಂತರಾವ್ ವಾಳವೇಕರ ಅಂದರೆ ಕಲೆಯ ಭಕ್ತರು ಎನ್ನುವುದಕ್ಕಿಂತ ಸಂಗೀತನಾದದ ಹುಚ್ಚರು ಎಂದರೆ ಅವರಿಗೆ ಅಪಮಾನಸೂಚಕವಾಗದೆ ಸಲ್ಲುವ ವಿಶೇಷಣವೇ ಆದೀತು. ಸಂಗೀತದ ಅನ್ವೇಷಣೆಯಲ್ಲಿ ಹಣವನ್ನು ನೀರಿನಂತೆ ಚೆಲ್ಲಿದವರು ಇವರು. ಗುರುಗಳೆ ಇರಲಿ, ಗೆಳೆಯರೆ ಇರಲಿ, ಶಿಷ್ಯರೆ ಇರಲಿ ಅವರಿಗೆ ಮೊದಲು ಕೊಟ್ಟು ನಂತರ ತಾನು ತಿನ್ನುವ ಔದಾರ್ಯ ಇವರದು. 'ಲಾಭಹಾನಿಯ ಲೆಕ್ಕ ಹೊತ್ತಗೆ' ಯೊಳಿರಲಿ! ಬೆರಗಲಿ ಮೆಚ್ಚಿ ಕುಣಿದಾಡಿದುದೆ ಬಂತು' ಎಂಬ ಫಿಲಾಸಫಿ ಇವರದು. ಅವರ ಈ ಧಾರಾಳ ಲೆಕ್ಕ ಔದಾರ್ಯವನ್ನ - ಬೇಕಾದರೆ ದುಂದುಗಾರಿಕೆಯನ್ನ - ಅವರೆ ಇಷ್ಟು ನಿಜ– ಕಲೆಯನ್ನು ಬೆಲೆಗಾಗಿ ಮಾರಿಕೊಳ್ಳುವ ವ್ಯಾಪಾರಿ ಇವರಾಗಿರಲಿಲ್ಲ. ಹಣಮಂತರಾಯರ ಹಾರ್ಮೋನಿಯಂ ಎಂದರೆ ಸ್ವರ್ಗೀಯ ಅನುಭವ! ಅವರ ಬೆರಳ ಸ್ಪರ್ಶಕ್ಕೆ ಜಡವಾದ ಪೇಟಿ ಜೀವಂತ ಪೇಟಿ ಆಗಿ ಹಾಡಬೇಕು. ಆ ಬೆರಳುಗಳ ಓಡಾಟದಲ್ಲಿ ಅದೇನು ಮಿಂಚು, ಅದೇನು ಸೂಕ್ಷ್ಮ! "ಗೋವಿಂದರಾವ್ ಟೇಂಬೆ, ವಿಠ್ಠಲರಾವ್ ಕೋರೆಗಾಂವಕರ ಇವರಕಿಂತಾ ಹೆಚ್ಚಿನವರು ಅಂತ ನಿಮಗ ಅನಲಿಕ್ಕ ಆಗದಿದ್ದರ, ಕಡಿಮೆಯವರೇನೂ ಅಲ್ಲ" ಎಂಬ ಖಚಿತ ಅಭಿಪ್ರಾಯ ಶಾರದಾ ಅವರದು, ಹಣಮಂತರಾಯರ ಬಗ್ಗೆ.

ಹಾರ್ಮೋನಿಯಂನಂತೆ ಹಾಡುಗಾರಿಕೆಯಲ್ಲೂ ಹಣಮಂತರಾಯರದು ಅಷ್ಟೇ ಪ್ರಭುತ್ವ. ಇವರ ಕೈಯಲ್ಲಿ ಅನೇಕ ಶಿಷ್ಯ– ಶಿಷ್ಯೆಯರು ತಯಾರಾದರು. ಶಾರದಾ ಹಾನಗಲ್ ಅವರೂ ಇವರಲ್ಲಿ ಒಬ್ಬರು. ಸಂಗೀತ ಪ್ರಾಧ್ಯಾಪಿಕೆಯಾಗಿ ತಮ್ಮ ವೃತ್ತಿಯನ್ನು ಸಾಗಿಸುತ್ತಲೆ ಗುರು ವಾಳವೇಕರರ ಬಳಿ ಸಂಗೀತ ವ್ಯಾಸಂಗವನ್ನೂ ಮುಂದರಿಸಿದರು. ಒಂದೊಂದು ದಿನ ಬರುವುದು ತಪ್ಪಿದರೆ ಗುರುಗಳೇ ಕಾರು ತೆಗೆದು-

ಕೊಂಡು ಶಿಷ್ಯೆಯು ಮನೆಗೆ ಬಂದು, "ಇವತ್ತು ಯಾಕೆ ಬರಲಿಲ್ಲ?" ಎಂದು ವಿಚಾರಿಸಬೇಕು. ತಮ್ಮ ಶಿಷ್ಯವರ್ಗದ ಬಗೆಗೆ-ವಾಳ್ವೇಕರರಲ್ಲಿ ಅಷ್ಟೊಂದು ಕಳಕಳಿ, ಗುರುದಕ್ಷಿಣೆಯನ್ನೇನೊ ಶಾರದಾ ಮಾಮೂಲಾಗಿ ಕೊಡುತ್ತಿದ್ದರು; ಅದಕ್ಕೆ ಪ್ರತಿಯಾಗಿ ಇಮ್ಮಡಿ ಮುಮ್ಮಡಿ ರೀತಿಯಲ್ಲಿ ಗುರುಗಳು ಕೈಯಿಂದ ವೆಚ್ಚ ಮಾಡಿ ಈ ಶಿಷ್ಯೆಯ ಯೋಗಕ್ಷೇಮ ನೋಡಿಕೊಳ್ಳುತ್ತಿದ್ದರು. ನಿತ್ಯವೂ ಅವರ ಉಣಿಸು ತಿನಿಸಿಗಾಗಿ ಗುರುಗಳು ವೆಚ್ಚಮಾಡುತ್ತಿದ್ದ ಹಣದಲ್ಲಿ ಗುರುದಕ್ಷಿಣೆಯ ಹಣವು ಬಡ್ಡಿ ಸಹಿತವಾಗಿ ಮುಟ್ಟಿ ಹೋಗಿರುತ್ತಿತ್ತು. ಇನ್ನು ಅವರು ನೀಡುತ್ತಿದ್ದ ಆ ಅಮೂಲ್ಯ ವಿದ್ಯೆಗೆ ಮೂಲ್ಯ ಕಟ್ಟಬಹುದೇ ?

ಕಾಲಚಕ್ರ ಉರುಳಿತ್ತು. ಶಾರದಾ ಅವರ ಕೊಲ್ಹಾಪುರದ ಗುರು ಶ್ರೀಮತಿ ಲಕ್ಷ್ಮೀಬಾಯಿ ಜಾಧವ ಅವರು ಕರುಳಿನ ಬೇನೆಯಿಂದ ಕಣ್ಮರೆಯಾದರು. ಇತ್ತ ಗುರು ವಾಳ್ವೇಕರರು ಅಕಾಲಿಕ ಮರಣಕ್ಕೆ ತುತ್ತಾದರು. 'ಅನುಗೋಲೆಯಿಲ್ಲದ ಹೆಳವ ಸಾಗಿದಂತೆ' ಶಾರದಾ ಹಾನಗಲ್ ತಮ್ಮ ಪ್ರಗತಿಯನ್ನು ತಾವೇ ಶೋಧಿಸಿ ಸಾಧಿಸಿಕೊಳ್ಳಬೇಕಾಯಿತು. ದೈವಾನುಕೂಲದಿಂದ ಶಾರದಾ 'ಶರಧಿಯಲ್ಲಿ ಬಿಸುಟ' ಬಳ್ಳಿಯಾದರೂ ತೇಲುತ್ತ ತೇಲುತ್ತ ದಡವನ್ನು ತಲುಪಿದರು. ಆದರೆ ದೈವದ ದುರ್ವಿಪಾಕ ಇಷ್ಟಕ್ಕೇ ತೀರಲಿಲ್ಲ. ೧೯೭೧ ಡಿಸೆಂಬರ್‌ನಲ್ಲಿ ಇವರ ಹೆತ್ತ ತಾಯಿಯೂ ಇವರ ಕೈ ಬಿಟ್ಟು ಕೈಲಾಸ ಸೇರಿದರು. ಆ ಬರಸಿಡಿಲನ್ನೂ ತಡೆದುಕೊಂಡು ಸ್ವಂತ ಪರಿಶ್ರಮ, ದೈವಾವಲಂಬನ ಇಷ್ಟರಿಂದಲೆ ಕರ್ನಾಟಕ ಸಂಗೀತ ಮಹಾವಿದ್ಯಾಲಯವನ್ನು ಕಟ್ಟುವ ಪುಟ್ಟ ಶಿಲ್ಪಿಯಾಗಿ ಪರಿಶ್ರಮ ವಹಿಸಿದರು.

ವಿಶ್ವವಿದ್ಯಾಲಯದಲ್ಲಿ ಸಂಗೀತದ ಸ್ಥಾನಮಾನವೂ ಹೆಚ್ಚುತ್ತ ೧೯೭೩ರ ಹೊತ್ತಿಗೆ ಕರ್ನಾಟಕ ಮ್ಯೂಜಿಕ್ ಕಾಲೇಜು, ಕರ್ನಾಟಕ ಕಾಲೇಜಿನ ಒಂದು ಅಂಗವಾಗಿ ಅಸ್ತಿತ್ವಕ್ಕೆ ಬಂತು. ಸಂಗೀತವನ್ನು ಪ್ರಧಾನ ವಿಷಯವನ್ನಾಗಿ ತೆಗೆದುಕೊಂಡು ಪದವೀಪರೀಕ್ಷೆಗೆ ಅಭ್ಯಾಸ ಮಾಡುವ ವಿದ್ಯಾರ್ಥಿನಿಯರ ಸಂಖ್ಯೆ ಹೆಚ್ಚತೊಡಗಿತು. ಬಿ. ಎ. ಪರೀಕ್ಷೆಗಾಗಿ ಸಂಗೀತ ವಿಷಯದ syllabus ತಯಾರಿಸಲಾಯಿತು. ಶ್ರೀ ಮಲ್ಲಿಕಾರ್ಜುನ ಮನ್ಸೂರ ಅವರ ನಿರ್ದೇಶನವು ಈ ದಿಶೆಯಲ್ಲಿ ಅತ್ಯಮೋಘವಾದುದು.

೧೯೭೬. ಸಂಗೀತ ತಪಸ್ಯೆಯ ಫಲವಾಗಿ, ಹಿರಿಯರ ಪುಣ್ಯದಿಂದಾಗಿ ದೈವ ಕಣ್ದೆರದಿತ್ತು. ತಪಸ್ಯೆಗೆ ಫಲ ದೊರೆತಿತ್ತು. ಶಾರದಾ ಹಾನಗಲ್ ಕರ್ನಾಟಕ ಸಂಗೀತ ಮಹಾವಿದ್ಯಾಲಯದ ಪ್ರಥಮ ಪ್ರಾಚಾರ್ಯೆ. ಪ್ರಥಮ ಮಹಿಳಾ ಪ್ರಾಚಾರ್ಯೆ. ಮಗಳ ಈ ಮಹಾತ್ಸಾಧನೆಯನ್ನು ಕಣ್ಣಾರೆ ಕಂಡು ಸಂತೋಷಪಡಲು ತಾಯಿ ಇರಲಿಲ್ಲ. ಅಂದು ಶಾರದಾ ಅವರ ಮನೆಯಲ್ಲಿ ಅವರ ತಾಯಿಯ ಭಾವಚಿತ್ರ ನೋಡಿ ನೆನಪು ತೆಗೆದಾಗ ಶಾರದಾರ ಕಣ್ಣಲ್ಲಿ ನೀರು ಧಾರೆಗಟ್ಟಿ ಸೂಸಿದ್ದವು. ಪ್ರಾಚಾರ್ಯೆ, ಮನೆಗೆ ಪುತ್ರಿ ಅಲ್ಲವೆ? ೧೯೭೬ರಲ್ಲಿ ಕರ್ನಾಟಕ ಕಾಲೇಜಿನ ಅಂಗವಾಗಿದ್ದ ಕರ್ನಾಟಕ ಮ್ಯೂಜಿಕ್ ಕಾಲೇಜು ಸ್ವತಂತ್ರ ಸಂಸ್ಥೆಯಾಗಿ ಅಸ್ತಿತ್ವದಲ್ಲಿ ಬಂತು.

ಈಗ ಈ ಸಂಗೀತ ಮಹಾವಿದ್ಯಾಲಯವು ಸ್ವಯಂಪೂರ್ಣ ಸಂಸ್ಥೆಯಾಗಿ ಬಿ.ಎ. ಪದವೀ ಪರೀಕ್ಷೆಗೆ ಸಂಗೀತವನ್ನೇ ಪ್ರಧಾನ ವಿಷಯವನ್ನಾಗಿ ತೆಗೆದುಕೊಂಡು ತರಬೇತಿ ಪಡೆಯುವ ಅಭ್ಯಾಸಿಗಳಿಗೆ ಮಾರ್ಗದರ್ಶನ ನೀಡುತ್ತಲಿದೆ. ಶಾರದಾ ಹಾನಗಲ್ ಅವರಿಗೆ ಸಹಾಯಕರಾಗಿ ಇತರ ಪ್ರಾಧ್ಯಾಪಕ ವರ್ಗವೂ ಕಲಾವಿದ ವರ್ಗವೂ ಇದೆ. ಸಂಗೀತವೆಂದರೆ ಒಂದು ಸಂಯೋಜಕ ಶಕ್ತಿ. ಆ ಶಕ್ತಿ ಕಾರ್ಯಮಾಡುವುದನ್ನು ಈ ಸಂಸ್ಥೆಯಲ್ಲಿ ನಾವು ಕಾಣಬಹುದು.

"ಹಿಂದುಸ್ತಾನೀ ಸಂಗೀತ ಶಿಕ್ಷಣದ ಬೇರೆ ಬೇರೆ ಘರಾಣೆಗಳ ಗುರುಶಿಷ್ಯ ಪರಂಪರಾ ಪದ್ಧತಿಗೂ ನಿಮ್ಮ ಸಂಗೀತ ಮಹಾವಿದ್ಯಾಲಯದ ಪಾಠ ಪದ್ಧತಿಗೂ ಬಹಳ ಅಂತರ ಅನಿಸುತ್ತದಲ್ಲವೇ ?"

"ಹೌದು, ಇಲ್ಲಿ ನಾವು ಗಡಿಯಾರ ನೋಡಿ ಕಲಿಸಬೇಕಾಗ್ತದ ಮತ್ತು ನಮ್ಮ portions ಮುಗಿಸಬೇಕಾಗ್ತದ. ವರ್ಷದ ಕೊನೆಯ ಪರೀಕ್ಷೆಕ, ತಯಾರ ಮಾಡಬೇಕಾಗ್ತದ. ...

ಶಿಷ್ಯರು ನಸುಕಿನಲ್ಲಿ ತಂಬೂರಿ ಹಿಡಿದುಕೊಂಡು ನಡಿಸುವ ಸಾಧನಾ ಮಾಡುವ ಪರಂಪರಾಗತ ಸಾಧನಾ ಇಲ್ಲಿ ಹ್ಯಾಂಗ ಸಾಧ್ಯ ಆದೀತು?"

"ಆದರೂ ವಿದ್ಯಾರ್ಥಿಗಳಿಗೆ demonstration ಬೇಕೇ ಬೇಕಲ್ಲ ?'

"ಅದು ಖರೆ. ಪ್ರತಿದಿನಾನೂ theory ಮತ್ತು demonstration ಇದ್ದದ್ದೇ."

"ಈ theory ಅಂದ್ರೆಲ್ಲಾ, ಇದನ್ನ ಹ್ಯಾಂಗ ರೂಪಿಸಿಕೊಂಡೀರಿ?"

"ನಮಗ ಮುಖ್ಯ ಆಧಾರ ಅಂದ್ರ ಭಾತಖಂಡೆಯವರ ಸಂಗೀತಶಾಸ್ತ್ರ ಗ್ರಂಥಗಳು. ಹಿಂದುಸ್ತಾನಿ ಶಾಸ್ತ್ರೀಯ ಸಂಗೀತದ ರಾಗರಾಗಿಣಿಗಳ ಸಂಪೂರ್ಣ ಪರಿಚಯ ಆ ಗ್ರಂಥಗಳಲ್ಲಿ ಅದೆ. ಮತ್ತು ನಮ್ಮ ಹಾಡುಗಾರಿಕೆಗೆ ಪಲುಸ್ಕರ ಅವರ ಗಾಯನ ಪದ್ಧತಿಯೆ ಆಧಾರ."

"ಹಾಂಗಾರ ನಿಮ್ಮ ಕಾಲೇಜಿನೊಳಗ ಇಂಥಾದ್ದೇ ಘರಾಣೆ ಅಂತೇನೂ ಇಲ್ಲ."

"ಹಾಂಗೇನೂ ಇಲ್ಲ, ಭಾರತೀಯ ಸಂಗೀತಗಾರರ ಬೆಸ್ಟ್ (best) ಅನ್ನೋದೇನದ ಅದನ್ನೆಲ್ಲಾನೂ ನಾವು ಅಳವಡಿಸಿಕೊಂಡು ಒಂದು ಸಮನ್ವಯ ಪದ್ಧತಿ ಅನುಸರಿಸಿ ಹೋಗ್ತೀವಿ. ಈಗ ಇಂಡಿಯಾದೊಳಗ ಗಂಧರ್ವ ಮಹಾವಿದ್ಯಾಲಯ ಅದ. ಬನಾರಸ್, ಲಖನೌಗಳಲ್ಲೆಲ್ಲ ಮ್ಯೂಜಿಕ್ ಕಾಲೇಜ್ ಅದ. ರತಂಜನಕರ, ಗೌತಮ, ದೇವಧರ ಮೊದಲಾದವರು ಅಭ್ಯಾಸಿಗಳಿಗಾಗಿ ನಾಕಷ್ಟು ಬರೆದಿಟ್ಟಾರೆ ಮತ್ತು ಹಿಂದುಸ್ತಾನಿ ಶಾಸ್ತ್ರೀಯ ಗಾಯಕರೊಳಗೆ ಹೆಸರುವಾಸಿಯಾದ ಕೃಷ್ಣರಾವ ಪಂಡಿತ, ಓಂಕಾರನಾಥ ಠಾಕೂರ, ಡಾಗರ್ ಬ್ರದರ್ಸ್, ಅಬ್ದುಲ್ ಕರೀಮ್‌ಖಾನ, ಬಡೇ ಗುಲಾಮ ಅಲ್ಲೀಖಾನ್, ಬೇಗಂ ಅಕ್ತರ, ಸವಾಯಿ ಗಂಧರ್ವ ಮೊದಲಾದ ಹಿರಿಯ ಕಲಾವಿದರ ಧ್ವನಿಮುದ್ರಣ ಸಂಗ್ರಹಾನೂ ನಮ್ಮಲ್ಲಿ ಇದೆ."

"ನಿಮ್ಮಲ್ಲಿ ವಿದ್ಯಾರ್ಥಿ ವಿದ್ಯಾರ್ಥಿನಿಯರು ಕೂಡಿ ಅಭ್ಯಾಸ ಮಾಡ್ತಾರೇನು?"

"ದುರ್ದೈವದಿಂದ ಸಂಗೀತದೊಳಗೆ co-education ಇನ್ನೂ ಆಗಿಲ್ಲ. ಆದರೆ ನಮ್ಮ ಸಂಗೀತದ ವಿದ್ಯಾರ್ಥಿಗಳು ಮತ್ತು ವಿದ್ಯಾರ್ಥಿಗಳೂ ನಮ್ಮಲ್ಲಿ ಇದ್ದಾರೆ."

"ಸಂಗೀತ ಪದವೀಧರರ ಭವಿಷ್ಯ ಹ್ಯಾಂಗ ಅನಿಸ್ತದ ನಿಮಗೆ ?"

"ಇದಂತೂ ನಿರುದ್ಯೋಗದ ಯುಗ. ಆದರೂ ಪ್ರತಿಭಾವಂತರಿಗೆ ಎಲ್ಲಿಯಾದರೂ ಕ್ಷೇತ್ರ ಅದ. ಹೆಣ್ಣುಮಕ್ಕಳು ನೌಕರಿಗಾಗಿ ಸಂಗೀತ ಪದವಿ ಗಳಿಸದಿದ್ದರೂ ಗೃಹಿಣಿಯರಾಗಿಯೂ ಸಂಗೀತ ಸಾಧನೆ ಮಾಡಬಹುದು. ಹೆಣ್ಣುಮಕ್ಕಳಿಗೆ ಕಲಿಪೊಂದು ವಯಸ್ಸು ಆದ ಮ್ಯಾಲೆ ಪ್ರ್ಯಾಕ್ಟೀಸ್ ಮಾಡೋದು ಕಷ್ಟ. ಆದರ ಸಂಗೀತಕ್ಕೆ ವಯೋನಿರ್ಬಂಧ ಏನೂ ಇಲ್ಲ."

ಕರ್ನಾಟಕದ ಮೂರೂ ವಿಶ್ವವಿದ್ಯಾಲಯಗಳಲ್ಲಿ ಈಗ ಎಂ. ಎ. ಪದವಿ ವರೆಗೂ ಸಂಗೀತವನ್ನು ಪ್ರಧಾನ ವಿಷಯವಾಗಿ ತೆಗೆದುಕೊಂಡು ಅಭ್ಯಾಸ ಮಾಡಲು ವ್ಯವಸ್ಥೆ ಏರ್ಪಟ್ಟಿದೆ. ಪೋಸ್ಟ್ ಗ್ರ್ಯಾಜುಯೇಟ್ ಸಂಗೀತ ಕೇಂದ್ರವು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ತೆರೆಯಲ್ಪಟ್ಟಿದೆ. ಡಾ. ಮಲ್ಲಿಕಾರ್ಜುನ ಮನ್ಸೂರ ಇದಕ್ಕೆ ಗೌರವ ನಿರ್ದೇಶಕರು.

ಕಾಲೇಜ್ ಕೋರ್ಸ್‌ನಲ್ಲಿ ಸಂಗೀತವನ್ನು ವ್ಯವಸ್ಥೆಗೊಳಿಸಿದ ಶ್ರೇಯಸ್ಸು ಡಾ. ಪಾವಟೆ ಅವರದು ಎಂದು ಪ್ರಾ. ಶಾರದಾ ಹಾನಗಲ್ ಅಭಿಮಾನದಿಂದ ಹೇಳುತ್ತಾರೆ. ೧೯೫೯ರಲ್ಲಿ ಸಂಗೀತದ ವಿಂಗು ಜೋಡಿಸಲ್ಪಟ್ಟಾಗಿನಿಂದ ಈ ಸಂಗೀತ ಮಹಾವಿದ್ಯಾಲಯಕ್ಕೆ ಹದಿನೆಂಟು ವರುಷಗಳ ಇತಿಹಾಸವಿದೆ ಎನ್ನಬೇಕು. ಮೂಲಭೂತ ವ್ಯವಸ್ಥೆಯನ್ನು ಏರ್ಪಡಿಸುವಲ್ಲಿ ದುಡಿದ ಹಿರಿಯ ಗಣ್ಯ ಸಂಗೀತಗಾರರ ಶ್ರಮವು ಈ ಸ್ವರ್ಗೀಯ ಪಾರಿಜಾತ ವೃಕ್ಷವು ಅರಳಿ ನಿಲ್ಲುವುದಕ್ಕೆ ನೀರೆರೆದಿದೆ. ಸಂಗೀತ ವಿಷಯದ ಪತ್ರಗಳನ್ನು ಗೊತ್ತುಪಡಿಸುವುದು, ಅಭ್ಯಾಸ ಕ್ರಮವನ್ನು ರೂಪಿಸುವುದು, ಸಿಲಿಬಸ್ ತಯಾರಿಸುವುದು, ಸಕಲ ಸಾಹಿತ್ಯ ಸಲಕರಣೆಗಳನ್ನು ಒದಗಿಸುವುದು ಹೀಗೆ ಸ್ಪೇಡ್‌ವರ್ಕ್ ಮಾಡಿದ ಸಂಗೀತ ಮೇಧಾವಿಗಳ ನೆರವನ್ನು ಪಡೆದು ಪ್ರಾ. ಶಾರದಾ ಹಾನಗಲ್ ಈ ಸಂಗೀತ ಮಹಾವಿದ್ಯಾಲಯದ ಶಿಲ್ಪಿ, ಎನಿಸಿದ್ದಾರೆ. "ನಮ್ಮ ವಿದ್ಯಾರ್ಥಿನಿಯರ ಸಹವಾಸದೊಳಗ

ಮುಪ್ಪು ದೂರ ಹೋಗ್ತದ ಅನಿಸತದ ನನಗ. ವಿದ್ಯಾರ್ಥಿನಿಯರು ಫಿಲೋ ಮಾಡಿದರ ಅದೇ ಒಂದು ರಿಕಾರ್ಡ್ ನನಗ."

"ಇಲ್ಲಿ ಶಾಸ್ತ್ರೀಯ ಸಂಗೀತದ ಜೊತೆ ಲಘು ಸಂಗೀತವೂ ಕಲಿಸಲ್ಪಡತದೇನು?"

"ಹೌದು. ವಚನ, ಕೀರ್ತನ, ಭಜನೆ ಇವುಗಳ ತರುವಾಯ ಗಜಲ್, ಠುಮರಿ ಮೊದಲಾದವನ್ನು ಹೇಳತೀವಿ. ಅಭ್ಯಾಸ ಕ್ರಮದೊಳಗ ಧ್ರುಪದ-ಧಮಾರ್, ಟಪ್ಪಾ, ದಾದರಾ ಮೊದಲಾದ ಲಘು ಗಾಯಕಿಯ ಪರಿಚಯನೂ ಮಾಡಿ ಕೊಡುತೀವಿ. ಆದರ ಎಲ್ಲಾಕ್ಕೂ ಶಾಸ್ತ್ರೀಯ ಗಾಯಕಿಯ ಹಿನ್ನಲಿ ಬೇಕು. ಯಾಕಂದರ ಶಾಸ್ತ್ರೀಯ ಲಘುಸಂಗೀತ ಅಂದ ಮ್ಯಾಲೆ ಕ್ಲಾಸಿಕಲ್ ಜ್ಞಾನ ಬೇಕೇ ಬೇಕಲ್ಲ."

"ಇಂದಿನ ಅಭಿರುಚಿಗಳನ್ನು ಗಮನಿಸಿದಾಗ ಶಾಸ್ತ್ರೀಯ ಸಂಗೀತದ ಭವಿಷ್ಯದ ಬಗ್ಗೆ ನಿಮಗ ಏನು ಅನಿಸತದ?"

"ಮುಖ್ಯವಾಗಿ ಸಿನಿಮಾ ಸಂಗೀತದ ಅಭಿರುಚಿಯ ಕಾಲ ಇದು. ಸಿನಿಮಾ ಸಂಗೀತಗಾರರು ಜಾನಪದ ಧಾಟಿಯ ಪ್ರಕಾರಗಳನ್ನ ಹ್ಯಾಂಗ ಬಳಸಿಕೋತಾರೋ ಶಾಸ್ತ್ರೀಯ ಧಾಟಿಗಳನ್ನೂ ಹಾಂಗ ಬಳಸಿಕೋತಾರ. ಸಿನಿಮಾ ಸಂಗೀತದಿಂದ ಶಾಸ್ತ್ರೀಯ ಸಂಗೀತಕ್ಕ ಯಾವುದೂ ಅಡ್ಡಿ ಆಗಿಲ್ಲ ಅಂತ ನನಗ ಅನಿಸತದ. ಮುಖ್ಯವಾಗಿ ಶಾಸ್ತ್ರೀಯ ಸಂಗೀತಗಾರರಲ್ಲೇ ಏಕತೆ ಬೆಳದು ಬರಬೇಕಾಗೇದ. ಸಂಗೀತ ಕ್ಷೇತ್ರ ವಿಶಾಲವಾದದ್ದು. ಇಲ್ಲಿ ಯಾವ ತರದ ಸಂಕೋಚ ಮನೋವೃತ್ತಿ ಇರಬಾರದು. ಎಲ್ಲಾ ದಿಕ್ಕಿನಿಂದನೂ ಒಳ್ಳೇ ಗಾಳಿ ಬೀಸಬೇಕು. ಅದು ಆರೋಗ್ಯಕರ. ಭಾರತೀಯ ಸಂಗೀತಕ್ಕ ಒಳ್ಳೇ ಪರಂಪರಾ ಅದ. ಮುಸಲ್ಮಾನರಿಂದ ಧ್ರುಪದ ಧಮಾರ ಗಾಯಕಿಗೆ ಪೆಟ್ಟು ಬಿತ್ತು. ಬರಬರುತ್ತ ಸುಶಿಕ್ಷಿತರೂ ಮನೆತನಸ್ಥರೂ ಸಂಗೀತವನ್ನು ಉಪೇಕ್ಷೆ ಮಾಡಲಿಕ್ಕೆ ಹತ್ತಿದರು. ಹೀಂಗಾಗಿ ಸಂಗೀತ ಅಶಿಕ್ಷಿತರ ಸೊತ್ತಾಯಿತು. ಕರ್ನಾಟಕ ಸಂಗೀತವನ್ನು ಮೈಸೂರು ಕಡೆಯ ಮನೆತನಸ್ಥರು ಮುಂದುವರಿಸಿಕೊಂಡು ಬಂದರು. ಕರ್ನಾಟಕದೊಳಗ ಕಾಲೇಜುಗಳು ಆರಂಭವಾದಮ್ಯಾಲೆ ನಮ್ಮ ಸಂಗೀತಕ ಒಳ್ಳೇ ಭವಿಷ್ಯದ ಚಿನ್ಹೆಗಳು ಮೂಡಿದವು ಅಂತ ಹೇಳಬಹುದು." ವಿದ್ಯಾರ್ಥಿನಿಯರ ಜೀವನದೊಂದಿಗೆ ಸಮರಸವಾಗಿ ಬೆರೆತ ಶಾರದಾ ಅವರಿಗೆ ಈಗೊಂದು ಸಂತೃಪ್ತಿ ಭಾವ.

"ಈಗ ನಿಮ್ಮಲ್ಲೇ ಬಿ. ಎ. ಮೂರು ವರ್ಷದ ಸಂಗೀತ ಅಭ್ಯಾಸಕ್ರಮ ಹ್ಯಾಂಗ ಅದ?"

"ಬಿ. ಎ. ಪ್ರಥಮ ವರ್ಷಕ್ಕ ಆರು ರಾಗಗಳ ಪರಿಚಯ ಅಂತ ಗೊತ್ತು ಮಾಡೇದ. ನಮ್ಮಲ್ಲೇ ನುರಿತ ಸಂಗೀತ ಪ್ರಾಧ್ಯಾಪಕರು ಇದ್ದಾರ. ಇದರ ಜೊತೆಗೆ ಲಘು ಸಂಗೀತದ ಪರಿಚಯನೂ ಅದ. ಮುಂದ ಬರಬರತ ಜೋಡು ರಾಗಗಳನ್ನೂ ಹೇಳಿಕೊಡತೀವಿ. ಜೈಪುರ ಘರಾಣೆಯ ಮುಖ್ಯ ಲಕ್ಷಣ ಈ ಜೋಡುರಾಗ. ನಮ್ಮಲ್ಲಿ ಗ್ವಾಲೀಯರ ಸಂಗೀತ ಅಂದರ ಎಲ್ಲಾ ಘರಾಣೆಗಳಿಗೆ ಮೂಲ."

ಈ ಮಹಾವಿದ್ಯಾಲಯವನ್ನು ಹ್ಯಾಗೆ ಬೆಳೆಸಬೇಕು ಎಂಬ ಸಮಗ್ರಚಿತ್ರ ಈ ಪ್ರಾಚಾರ್ಯೆಯ ಕಣ್ಣ ಮುಂದಿದೆ. ನಾಲ್ವತ್ತು ವರ್ಷಗಳ ಹಿಂದೆ ನಾರದರ ಕೈಯೊಳಗಿನ ವೀಣೆಯ ಮಗುವಾಗಿ ಬೆಳ್ಳಿಯ ತೆರೆ ಕಂಡ ಶಾರದಾ ಅಲ್ಲವೇ ಇವರು? ✡



ವಿಪತ್ತು ಸದವಕಾಶವೂ ಹೌದು; ಶ್ರೇಷ್ಠ ಮನಸ್ಸುಗಳಿಗದು ಚಾಲನೆ ನೀಡುವಂಥದೂ ಹೌದು. ಮೊಟ್ಟಮೊದಲು ರಕ್ತ ಬಿದ್ದವನನ್ನು ಗಾಯದ ಕಲ್ಪನೆಯೇ ಕಂಗೆಡಿಸಬಹುದು, ಆದರೆ ಅನುಭವಿ ಯೋಧ ಧೈರ್ಯದಿಂದ ರಕ್ತ ಸುರಿಸುತ್ತಾನೆ. ಮನುಷ್ಯ ರಕ್ತ ಕಳೆದುಕೊಂಡಾಗಲೂ ವಿಜಯಶ್ರೀ ಅವನ ಕೊರಳಿಗೆ ಹಾರ ಹಾಕಬಹುದೆಂದು ಅವನಿಗೆ ಗೊತ್ತು.

—ಸೆನೆಕಾ

ಪ್ರಿಯದರ್ಶಿ




ಬೆಳಗು. ಇನ್ನೂ ಒಂದು ಬೆಳಗು. ನಗರ ಕವಿದ ಹೊಗೆಯ ಕವಚವನ್ನು ದಾಟಿ ಸೂರ್ಯನ ಕಿರಣಗಳ ಬೆಡಗೂ ಬರಲಾರದು. ಮುಗಿಲೆತ್ತರದ ಮನೆಗಳ ನಡುವಿನಿಂದ ಕಾಣಬಹುದಾದ ಆಗಸದ ಅಗಲವೂ ಅಂಗೈನಷ್ಟೇ ಎಂದಮೇಲೆ ವೈವಿಧ್ಯಕ್ಕೆ ಸಂಪೂರ್ಣ ಅಭಾವವೇ. ಬಟ್ಟೆ ಧರಿಸಿ ಸಿದ್ಧನಾಗತೊಡಗುತ್ತೇನೆ. ದಿಲೀಪ ಉಪಹಾರ ತಂದಿರಿಸುತ್ತಾನೆ.

ಟೋಸ್ಟ್, ಜಾಮ್ ಮತ್ತು ಆಮ್ಲೆಟ್‌ನನ್ನ ನಿತ್ಯದ ಉಪಹಾರ. ಈ ದಿನಗಳಲ್ಲಿ ಬ್ರೆಡ್ ಸಿಕ್ಕುವುದೂ ಕಷ್ಟ. ಯಾವುದಾದರೂ ಶಾಲೆಗೆ ನ್ಯೂಟ್ರಿಷನ್ ಪ್ರೋಗ್ರಾಂನಲ್ಲಿ ನೀಡಲ್ಪಟ್ಟ ಬ್ರೆಡ್ ಮಾರುಕಟ್ಟೆಗೆ ಬರುತ್ತದೆ. ಆದರ ಟೋಸ್ಟ್ ತಿನ್ನುತ್ತ ಹೊರನೋಡಿದಾಗ ಯಾರಾದರೂ ಮಕ್ಕಳು ಕಂಡರೆ ಟೋಸ್ಟ್ ಮೇಲೆ, ನನ್ನ ಮೇಲೆ, ಒಟ್ಟು ವಿಶ್ವದ ಮೇಲೆಯೇ ಸಿಟ್ಟು ಬರುತ್ತದೆ. ಅದಕ್ಕೆಂದೇ ಕಿಟಕಿಗೆ ಬೆನ್ನು ಹಾಕಿ ಕುಳಿತು ಉಪಹಾರ ಮಾಡತೊಡಗುತ್ತೇನೆ.

ಎಷ್ಟು ಯತ್ನಿಸಿದರೂ ಪ್ರಪಂಚದ ಕೂಗಿನಿಂದ ತಪ್ಪಿಸಿಕೊಳ್ಳಲಾಗುವುದಿಲ್ಲವೆಂದು ಕಾಣುತ್ತದೆ. ಕಿಟಕಿಯಿಂದ ಕೇಳುತ್ತದೆ. ಒಂದೇ ಒಂದು ಎಳೆಯ ಸ್ವರ: "ಬಾಬೂ..." ಕಲ್ಕತ್ತೆಯಲ್ಲಿ ಅಧಿಕವಾಗಿ ಸಿಕ್ಕುವ ಎರಡೇ ವಸ್ತುಗಳೆಂದರೆ ಗಲೀಜು ಮತ್ತು ರಸ್ತೆ ಬದಿಯ ಅನಾಥ ಮಕ್ಕಳು. ನಿಮಗೆ ಯಾರಾದರೂ ಶತ್ರುಗಳಿದ್ದರೆ ಅವರ ಮನೆಯ ಮುಂದೆ ನಿಂತು ನಾಲ್ಕು ಇಂಥ ಮಕ್ಕಳಿಗೆ ಏನಾದರೂ ಹಂಚಿ ಬಿಡಿ. ಮುಂದಿನ ಹದಿನೈದು ದಿನ ಆ ಮನೆಯಾತನನ್ನು ಅನಾಥ ಮಕ್ಕಳು ತಿಂದುಹಾಕಿಬಿಡುತ್ತಾರೆ. ಎಳೆಯನ ಸ್ವರ ಮತ್ತೆ ಕೇಳುತ್ತದೆ: "ಬಾಬೂ..." ಛೀ ಈ ಗ್ರೌಂಡ್ ಫ್ಲೋರ್ ಫ್ಲ್ಯಾಟ್‌ನಲ್ಲಿ ಇದೇ ಗೋಳು. ಆಗಸದೆತ್ತರದಲ್ಲಿ ಯಾವುದಾದರೂ ಬೆಂಕಿ ಪೊಟ್ಟಣದಂಥ ಮನೆಯೇ ವಾಸಿ ಎನಿಸುತ್ತದೆ.

ನಾನೆಷ್ಟು ಬೇಸರ ಪಟ್ಟುಕೊಂಡರೇನು ? ಆ ಎಳೆಯನಿಗಂತೂ ಬೇಸರವಿಲ್ಲ. "ಬಾಬೂ..." ಅವನ ಪಲ್ಲವಿ ಕೇಳಿಯೇ ಕೇಳುತ್ತದೆ. ಎದ್ದು ಐದು ಪೈಸೆ ನಾಣ್ಯವನ್ನು ಕಿಟಕಿಯಿಂದಲೇ ನೀಡುತ್ತೇನೆ. ತನ್ನದೇ ರೀತಿಯಲ್ಲಿ ಸಲಾಮು ಮಾಡಿ ಆತ ಹೊರಟುಹೋಗುತ್ತಾನೆ. ಬೆಳಗಿನ ಬಿಸಿಲು ನೆಲಕ್ಕೆ ಅಷ್ಟಿಷ್ಟಾದರೂ ರಂಗು ನೀಡಿದೆ ಎಂದುಕೊಳ್ಳುತ್ತೇನೆ. ಟೋಸ್ಟ್ ಕೈಯಲ್ಲಿ ಹಿಡಿದು ಕಿಟಕಿಯಿಂದ ಹೊರನೋಡುತ್ತ ನಿಲ್ಲುತ್ತೇನೆ.

ಎದುರು ಮನೆಯ ಬಾಗಿಲು ತೆರೆಯುತ್ತದೆ. ಆತ ಆಫೀಸಿಗೆ ಹೊರಟಿರಬೇಕು. ಆಕೆಯೂ ಅವನ ಹಿಂದೆಯೇ ಬಂದು ಬಾಗಿಲಲ್ಲಿ ನಿಲ್ಲುತ್ತಾಳೆ. ಆಕೆಯತ್ತ ಕೈ ಬೀಸಿ ಬ್ರೀಫ್‌ಕೇಸ್ ಸಂಬಾಳಿಸಿಕೊಂಡು ನಡೆಯತೊಡಗುತ್ತಾನೆ. ನನಗಂತೂ ಆತ ಕಾಣದಾಗುತ್ತಾನೆ. ತಿರುವಿನಿಂದ ಕೈ ಬೀಸಿರಬೇಕು. ಆಕೆಯ ಮುಖ ಅರಳುತ್ತದೆ. ತಿರುವಿನಿಂದ ಮರೆಯಾದನೆಂದು ಕಾಣುತ್ತದೆ. ಆಕೆ ಕೈಗಳೆರಡನ್ನೂ ಎತ್ತಿ ಹಣೆಯ ಮಟ್ಟದಲ್ಲಿ ಜೋಡಿಸಿ ಹಿಡಿದು ಕಣ್ಮುಚ್ಚಿದ್ದನ್ನು

ಕಾಣುತ್ತೇನೆ.* ಗಂಡನ ಜೀವದ ಮೇಲೆ ನಗರ ಜೀವನದಲ್ಲಿ ಸಾಮಾನ್ಯವಾದ ಆಕಸ್ಮಿಕಗಳ ಛಾಯೆ ಬೀಳದಿರಲಿ ಎಂದು ಅದೃಶ್ಯ ದೈವಕ್ಕೆ ನಮಿಸುತ್ತಿರಬೇಕು. ಆಕೆ ದಿನವೂ ಹೀಗೆ ಮಾಡುತ್ತಾಳೆ.

ನಿವಾಸದ ದೃಷ್ಟಿಯಿಂದ ನಾನು ಬಹಳ ಅದೃಷ್ಟಶಾಲಿಯೆಂದೇ ಹೇಳಬೇಕು. ನಗರದ ಇತರ ನಿವಾಸಗಳಂತೆ ಹಲವಾರು ಫ್ಲ್ಯಾಟ್‌ಗಳುಳ್ಳ ಒಂದು ಗಗನಚುಂಬಿಯೇನಲ್ಲ. ಬಲು ಹಿಂದೆ ನಿವಾಸಕ್ಕೆಂದು ಮಧ್ಯಮವರ್ಗದ ಒಂದು ಕುಟುಂಬ ಕಟ್ಟಿಕೊಂಡ ಮನೆ. ಮನೆಯೆಂದರೆ ಮನೆಯೇ. ಮಹಡಿಗಳಿಲ್ಲದೆ ಸಣ್ಣ ನಿವೇಶನವನ್ನು ಪೂರ್ತಿ ಆವರಿಸಿಕೊಂಡು ಕಟ್ಟಿದ ಮನೆ. ನಿವೇಶನ ಚಿಕ್ಕದಾದುದರಿಂದ ಕಾಂಪೌಂಡ್ ಇಲ್ಲ. ಹಾಗೆ ನಿವೇಶನ ದೊಡ್ಡದಾಗಿದ್ದರೂ ಕಲ್ಕತ್ತೆಯಲ್ಲಿ ಕಾಂಪೌಂಡ್ ಇರುವುದಿಲ್ಲವೆನ್ನಿ. ಒಟ್ಟಿನಲ್ಲಿ ಸ್ವತಂತ್ರವಾಗಿದೆ. ನಾನೂರು ರೂ. ಬಾಡಿಗೆಗೆ ಸಿಕ್ಕುವ ಮುಖ್ಯ ತೃಪ್ತಿಯೆಂದರೆ ಈ ಸ್ವಾತಂತ್ರ್ಯ. ಎರಡು ಕೋಣೆಗಳಿರುವ ಈ ಮನೆಯಲ್ಲಿ ರಸ್ತೆಗೆ ತಾಗಿದಂತಿರುವ ಕೋಣೆಯಲ್ಲೇ ನನ್ನ ಬದುಕೆಲ್ಲ ಕಳೆಯುತ್ತದೆ. ರಸ್ತೆಗೆ ತಾಕಿದಂತೆ ಒಂದು ಕಿಟಕಿಯಿದೆ. ಅದರ ಮೂಲಕ ಬರಹೋಗುವವರನ್ನು ನೋಡಬಹುದು. ಹಾಗೆ ನೋಡುತ್ತ ಕುಳಿತರೆ ಬಹಳ ಜನರೇನೂ ಕಾಣುವುದಿಲ್ಲ. ಏಕೆಂದರೆ ಇದೇನೂ ಮುಖ್ಯ ರಸ್ತೆಯಲ್ಲ. ನಾಲ್ಕಾರು ಮನೆಗಳಿಗೆ ಹೋಗುವ ದಾರಿಯಾಗಿ ರಸ್ತೆಯಿಂದ ಕವಲೊಡೆದ ಗಲ್ಲಿ. ನನ್ನ ಮನೆಯ ಪಕ್ಕಕ್ಕೆ ಮುಗಿದೂಹೋಗುತ್ತದೆ. ಅಲ್ಲಿಂದ ಮುಂದೆ ಹೋಗುವಂತಿಲ್ಲ. ಇದೂ ಒಂದು ಭಾಗ್ಯವೇ ತಾನೆ? ವಾಹನಸಂಚಾರದ ಗದ್ದಲವಂತೂ ಇಲ್ಲವಲ್ಲ.

ವಾಹನ ಸಂಚಾರವಿಲ್ಲ ಎಂದರೆ ಇಲ್ಲವೇ ಇಲ್ಲವೆಂದಲ್ಲ. ಈ ಗಲ್ಲಿಯಲ್ಲಿರುವ ನಾಲ್ಕಾರು ಕಟ್ಟಡಗಳಲ್ಲೇ ಒಂದೆರಡು ಸ್ಕೂಟರ್‌ಗಳಿವೆ. ಮುಂದಿನ ಸಾಲಿನ ಮೂರನೆ ಬಿಲ್ಡಿಂಗ್‌ನಲ್ಲಿ ಯಾರ ಬಳಿಯೋ ಒಂದು ಕಾರೂ ಇದೆ. ಇವಾವುವೂ ದಿನಕ್ಕೆರಡು ಬಾರಿಗಿಂತ ಹೆಚ್ಚಾಗಿ ಚಲಿಸುವುದಿಲ್ಲ. ರಸ್ತೆಯೆನ್ನಿ, ಗಲ್ಲಿಯೆನ್ನಿ ಇದರ ಮುಖ್ಯ ಬಳಕೆದಾರರು ಎಂದರೆ 'ಆಕೆ'ಯ ಮೂರು ವರ್ಷದ ಮಗ ಮತ್ತು ಅವನ ಟ್ರೈಸಿಕಲ್. ಅದು ಸುತ್ತುತ್ತಿರುವಷ್ಟು ಕಾಲವೂ ಆಕೆ ಬಾಗಿಲಿನಲ್ಲೇ ನಿಂತಿರುತ್ತಾಳೆ. ಕನ್ನಡಕದಿಂದ ಹಿಂದಿನಿಂದ ಅವಳ ಕಣ್ಣುಗಳು ಮಗನನ್ನೇ ಗಮನಿಸುತ್ತಿರುತ್ತವೆ.

ಗಂಡ ಹೊರಟು ಬಂದು ಕೆಲವು ನಿಮಿಷಗಳೇ ಕಳೆದರೂ ಆಕೆ ಏಕೋ ಅಲ್ಲೇ ನಿಂತಿದ್ದಾಳೆ. ಯಾರಾದರೂ ನೆರೆಯವರು ಕಂಡರೆ ಮಾತಾಡುವ ಬಯಕೆಯೋ ಏನೋ.

"ಏನು ನೋಡುತ್ತಿದ್ದೀರಿ ಬಾಬೂಜಿ? ಆಫೀಸಿಗೆ ಹೊತ್ತಾಗಲಿಲ್ಲವೇ? ಬೋರ್ನ್‌ವಿಟಾ ತಂದ ದಿಲೀಪನ ಎಚ್ಚರಿಕೆ ಕೇಳುತ್ತದೆ. ಕಣ್ಣು ತಂತಾನೆ ಕೈಗಡಿಯಾರದತ್ತ ಹೊರಳುತ್ತದೆ. ಆಫೀಸಿಗೆ ತಡವಾಯಿತೆಂದು ಗಡಬಡಿಸತೊಡಗುತ್ತೇನೆ. ಈಗಲಾದರೆ ಎಲ್ಲ ಮನಸ್ಸಿನಿಂದ ಮರೆಯಾಗುತ್ತದೆ. ಎಲ್ಲ ಎಂದರೆ ಎಲ್ಲವೂ.

ಬೋರ್ನ್‌ವಿಟಾ ಮುಗಿಸಿ ಮತ್ತೆ ಗಡಿಯಾರದತ್ತ ನೋಡುತ್ತೇನೆ. ತಡವಾಗಿರುವುದು ಸ್ಪಷ್ಟವಾಗಿದೆ. ಇಷ್ಟಕ್ಕಿದ್ದಂತೆ. ಇಂದು ಹೆಚ್ಚಿನ ಕೆಲಸವೇನಿಲ್ಲ ಹೋಗದಿದ್ದರೇನಂತೆ ಎನಿಸುತ್ತಿದೆ. ಕಳೆದ ಎರಡು ಭಾನುವಾರ ಕೂಡ ಆಫೀಸಿನಲ್ಲೇ ಕಳೆದಿದ್ದೇನೆ. ಇಂದು ರಜ ತೆಗೆದುಕೊಳ್ಳುವ ಎನಿಸುತ್ತದೆ. ಇನ್ನೊಂದು ಘಂಟೆಯ ವೇಳೆಗೆ ಫೋನ್ ಮಾಡಿದರಾಯಿತೆಂದುಕೊಂಡು ಷೂಸ್ ಬಿಟ್ಟು ಕಾಲು ಚಾಚಿ ಕುಳಿತಿರುತ್ತೇನೆ. ದಿಲೀಪನಿಗೆ ಪ್ಲೇಟ್ ತೊಳೆದಿಟ್ಟು ಮನೆಗೆ ಹೋಗಲು ಹೇಳುತ್ತೇನೆ. 'Statesman'ಅನ್ನು ಕೈಗೆ ತೆಗೆದುಕೊಳ್ಳುತ್ತೇನೆ. ಆಕಳಿಕೆ ಬರುತ್ತದೆ.

ದಿಲೀಪನಿಗೆ ಸಂಜೆ ಬರಲು ಹೇಳುತ್ತೇನೆ. ಅವನು ಹೊರಟುಹೋಗುತ್ತಾನೆ. ಸಿಗರೇಟ್ ಹಚ್ಚಿ ಮತ್ತೆ ಕಿಟಕಿಯ ಬಳಿ ನಿಲ್ಲುತ್ತೇನೆ. ಗಲ್ಲಿ ಜನಶೂನ್ಯವಾಗಿದೆ. ಏಕೋ ಬೇಸರವೆನಿಸುತ್ತದೆ.

---

* ಗಂಡ ಅಥವಾ ಮಕ್ಕಳು ಹೊರಹೋದಾಗ ಈ ರೀತಿ ನಮಿಸುವುದು ಭಾರತದ ಅನೇಕ ರಾಜ್ಯಗಳಲ್ಲಿ ಕಾಣುವ ಸಂಪ್ರದಾಯ. ವಿಶೇಷವಾಗಿ ಕಾಳಿ, ಭವಾನಿ ಮುಂತಾದ ದೇವತೆಯರಲ್ಲಿ ಇಂಥ ಪ್ರಾರ್ಥನೆ ನಡೆಯುತ್ತವೆ.

ಮುಂಬಯಿಯಲ್ಲಿ ಬೇಸರವಾಗುತ್ತಿರಲಿಲ್ಲ ವೆಂಬುದೇನೋ ನಿಜ. ಆದರೆ ಇಲ್ಲಿ ಬೇಸರ ವಾಗಲು ಕಲ್ಕತ್ತೆ ಕಾರಣವೇ ಅಲ್ಲ. ಈ ಮನಸ್ಸೇ ಮುದಿಯಾಯಿತೇ ಎಂಬ ಪ್ರಶ್ನೆ ಕಾಡುತ್ತದೆ.

ಕಲ್ಕತ್ತೆಗೆ ಬಂದಂದಿನಿಂದ ಜನಜಂಗುಳಿಯ ನಡುವಿನ ಏಕಾಕಿತನ ಕಾಡುತ್ತಿದೆ. ಅನೇಕ ಬಾರಿ ನನ್ನ ಮನೆ, ನನ್ನವರು ಇತ್ಯಾದಿ 'ನನ್ನ'ಗಳನ್ನು ಹುಡುಕುವ ಬಯಕೆಯಾಗುತ್ತದೆ. ಇಲ್ಲಿನ ಹವೆಯಲ್ಲಿ ಭಾವುಕತೆಯನ್ನು ಉಂಟುಮಾಡುವಂಥ ದೇನಿದೆಯೋ ನಾ ಕಾಣೆ.

ವೇಳೆಯಿಲ್ಲದ ಮುಂಬಯಿಯ ಜನ. ಅವರ ವೇಗ, ನಿಯಮಬದ್ಧ ಜೀವನ ಎಲ್ಲವನ್ನೂ ಇಲ್ಲಿಂದ ನೋಡಿದರೆ ವಿಚಿತ್ರವೆನಿಸುವುದು. ನಗರವೊಂದ ರಲ್ಲಿ ಬದುಕುವ ಇಲ್ಲಿನ ಜನರಿಗೆ ಇಷ್ಟೊಂದು ವೇಳೆಯೆಲ್ಲಿಂದ ದೊರಕುವುದೆನಿಸುತ್ತದೆ. ಇಲ್ಲವೇ ನಾನು ಆಲಸಿಯಾದೆನೆಂದು, ಸುತ್ತಣ ವಿಶ್ವದಲ್ಲಿ ಆಲಸ್ಯ ಕಂಡುಬರುತ್ತಿದೆಯೇ ಎಂದೂ ಎನಿಸುತ್ತದೆ.

ಮುಂಬಯಿಯ ಬದುಕೂ ಒಂದು ಸೊಗಸೆನಿಸಿತ್ತು. ಸುತ್ತಣ ಪ್ರಪಂಚದ ಪರಿವೆಯೇ ಇಲ್ಲದ ನನ್ನದೇ ನಿಯಮಿತ ದಿನಚರಿ. ಉತ್ಸಾಹ ಲವಲವಿಕೆಗಳು ತುಂಬಿದ್ದ ದಿನಗಳು. ಜಾಗರೂಕತೆಗಿಂತ ಚಟುವಟಿಕೆಗೇ ಪ್ರಾಧಾನ್ಯವಿದ್ದ ಬದುಕು. ಒಂದು ಬಗೆಯ ಗೆಳೆಯರ ಗುಂಪು. ವಾರಕ್ಕೊಮ್ಮೆ ಬಾಟಲಿಗಳ ಧ್ವಂಸ ಕಾರ್ಯ. ಚೆಲ್ಲಾಟವಾಡುತ್ತಿದ್ದ ಸ್ಟೆನೋಗಳು, ಸೆಕ್ರೆಟ್ರಿಗಳು, ಆಂಗ್ಲೋ-ಇಂಡಿಯನ್ ಹುಡುಗಿಯರು ಇವರೊಂದಿಗೆ ಕಳೆದ ರಾತ್ರಿಗಳು ಇವೆಲ್ಲವುಗಳ ನಡುವೆ ಹಂಚಿಹೋಗಿದ್ದ ಜೀವನದಲ್ಲಿ ಯಾವುದರ ಬಗೆಗೂ ಯೋಚಿಸಲಿಲ್ಲ, ಯೋಚಿಸಬೇಕೆನಿಸಿರಲೂ ಇಲ್ಲ.

ಕಲ್ಕತ್ತೆಯಲ್ಲಿ ಮೊದಲ ದಿನವೇ ನಮ್ಮ ಡೈರೆಕ್ಟರ್ ಹೇಳಿದ್ದರು, "ಇಲ್ಲಿ ನೀವು ಸ್ವಲ್ಪ ಹುಷಾರಾಗಿರಬೇಕು ಮಿಸ್ಟರ್, ಇಲ್ಲಿನ ಜನ ಬಹಳ



ಸೆನ್ಸಿಟಿವ್, ಅಷ್ಟೇ ಟರ್ಬ್ಯುಲೆಂಟ್. ಸ್ವಲ್ಪ ತಪ್ಪಿದರೂ ಚಿಂತೆಯಿಲ್ಲ ಜಾಗರೂಕತೆಯಿಂದಿರಿ" ಎಂದು ಹದಗೆಟ್ಟ ರಾಜಕೀಯ ವಾತಾವರಣ. ಕಾರ್ಮಿಕ ಮನೋಭಾವದಲ್ಲಿ ಸ್ವಾಸ್ಥ್ಯ ಕಳೆದು ಹೋಗಿದ್ದ ಪರಿಸ್ಥಿತಿಯಲ್ಲಿ ಅವರು ಹೇಳಿದುದೂ ಸರಿಯೇ. ಆದರೆ...?

"ನನ್ನ ಸುತ್ತ ಜನ ಇದ್ದಾರೆ. ನಾನು ಅವರ ಮರ್ಜಿ ಕಾಯಬೇಕು. ನನ್ನ ಅವರ ಬದುಕಿಗೆ ಸಂಬಂಧವಿದೆ...." ಈ ವಿಚಾರಸರಣಿಯೇ ಹೊಸದಾಗಿ ತೋರುತ್ತಿತ್ತು. ಆದರೂ ನನ್ನ ಸುತ್ತ ಒಂದು ಪ್ರಪಂಚವಿದೆ ಎಂದರಿವಾಗಲೂ ತಡವಾಗಲಿಲ್ಲ. "Whatever you say there is life in Calcutta" ಎಂದಾರಂಭಿಸಿ, ರಾಜಕೀಯ ಸಮಸ್ಯೆಗಳು, ಕಾರ್ಲ್ ಮಾರ್ಕ್ಸ್, ಕೇಂದ್ರದ ಮಲತಾಯಿ ಧೋರಣೆ, ಕಲ್ಕತ್ತೆಯ ನಾಟಕರಂಗ, ರವೀಂದ್ರ ಸಂಗೀತ ಇತ್ಯಾದಿಗಳೆಲ್ಲವರ ಬಗ್ಗೆ ಕೊರೆದು ವೇಳೆ ಹಾಳು ಮಾಡುವ ಸಹೋದ್ಯೋಗಿಗಳು, ಸಂದರ್ಶಕರಿಂದ ತಪ್ಪಿಸಿಕೊಂಡು ಹೋಟೆಲಿಗೆ ಬಂದೆನೆಂದರೆ, "ಮಿಸ್ಟರ್ ನಿಮ್ಮಲ್ಲಿ ಸಿಗರೇಟು ಇದೆಯೇ?" ಎನ್ನುತ್ತ ಒಳಬಂದು ತಾಸೆರಡು ತಾಸುಗಳಷ್ಟು ನನ್ನ ಕಾಲ ಹಾಗೂ ಸಿಗರೇಟುಗಳನ್ನು ಹಾಳು ಮಾಡಿ ನನಗಿಷ್ಟು ಉಪದೇಶ ನೀಡಿ ಹೋಗುವ ಹೋಟೆಲಿನ ದೀರ್ಘಕಾಲದ ನಿವಾಸಿಗಳು ಎದುರಾಗುತ್ತಿದ್ದರು. ನನ್ನ ಕಂಪನಿಯವರು ನನಗಾಗಿ ಪಿ. ಡಿ. ರೋಡ್‌ನಲ್ಲಿ ಒಂದು ಫ್ಲ್ಯಾಟ್ ಭಾಡಿಗೆಗೆ ತೆಗೆದುಕೊಟ್ಟಾಗ ಇಲ್ಲಿಂದ ಒಮ್ಮೆ ಪಾರಾದೆನೆನಿಸಿ ಹೋಟೆಲನ್ನು ಬಿಟ್ಟಿದ್ದೆ.

ಇದೇನು ದರಿದ್ರ ಯೋಚನೆಗಳು ಎನಿಸುತ್ತದೆ. ಊಟದ ಕಡೆಗೂ ಗಮನ ಹರಿಯುತ್ತದೆ. ಊಟ ಮಾಡಿದಂತೆಯೇ ಆಯಿತು, ಆಫೀಸಿಗೂ ಫೋನ್ ಮಾಡಿದರಾಯಿತು ಎಂದುಕೊಂಡು ಷೂಸ್ ಮೆಟ್ಟಿ ಬೇಗ ಜಡಿದು ಹೊರಬೀಳುತ್ತೇನೆ. ಊಟ ಮಾಡಲೂ ಬೇಸರವೆನಿಸುತ್ತದೆ. ಅದೂ ಒಂದು ಚಟವಿರಬೇಕು. ಮನಸ್ಸಿರಲಿ, ಬಿಡಲಿ, ಹೋಟೆಲಿಗೆ ನುಗ್ಗಿ-ಹೊಟ್ಟೆಗಿಷ್ಟು ಹಾಕಿಯೇ ಹಾಕುತ್ತೇನೆ. ಊಟ ಮಧ್ಯವಯಸ್ಕಳಿರಬಹುದಾದ ಸ್ಥೂಲದೇಹಿ ಗುಜರಾತಿ ಮಹಿಳೆಯು ದರ್ಪ ವೇಟರನ ಮೇಲೆ ನಡೆದಿರುತ್ತದೆ. ಶ್ರೀಮತಿ ದಾಸಗುಪ್ತಳ ನೆನಪಾಗುತ್ತದೆ. ಮೈ ಝುಮ್ಮೆನ್ನುತ್ತದೆ.

ಪೂರ್ಣದಾಸ್ ರೋಡ್‌ನಲ್ಲಿದ್ದ ಫ್ಲ್ಯಾಟ್ ಅನುಕೂಲವಾಗಿಯೇ ಇತ್ತು. ನಾಲ್ಕಂತಸ್ತಿನ ಕಟ್ಟಡದ ಎರಡನೇ ಅಂತಸ್ತಿನಲ್ಲಿನ ಸುಸಜ್ಜಿತ ನಿವಾಸ. ಅಲ್ಲಿರಲು ಆರಂಭಿಸಿದ ಎರಡನೇ ದಿನ ಪಕ್ಕದ ಫ್ಲ್ಯಾಟ್‌ನ ಅಗರವಾಲ ಪರಿಚಯವಾಗಿತ್ತು. "ಹೆಹೆ...ನೇಬರ್ಲಿನೆಸ್ ದೃಷ್ಟಿಯಿಂದ..." ಎನ್ನುತ್ತ ಬಂದು ಪರಿಚಯ ಮಾಡಿಕೊಂಡಿದ್ದ. ಅನುಕೂಲಸ್ಥ, ಧಾರಾಳಿ, ಒಳ್ಳೆಯ ಮಾತುಗಾರ. ಮಾತುಗಾರ ಎಂದರೆ ಮಾತನಾಡುತ್ತಿದ್ದ ಎಂದೇ ವಿನಾ ಮಾತನ್ನು ಕೇಳುತ್ತಿದ್ದ ಎಂದಲ್ಲ. ಅವನಿಗೆ ಪ್ರತಿ ಸಂಜೆ ವಿಸ್ಕಿ ಬೇಕು. ವಿಸ್ಕಿಗೆ ಕಂಪೆನಿ ಬೇಕು. ಸಂಜೆ ಮನೆಯಲ್ಲಿದ್ದರೆ ಧಾಳಿ ನಿಶ್ಚಿತ. "You see, without company...ಅದಕ್ಕೇ ಬಾಟಲ್ ಇಲ್ಲಿಗೇ ತಂದೆ... ice ಇರಬೇಕಲ್ಲ?..." ಎನ್ನುತ್ತ ವಿರಾಜಿಸುತ್ತಿದ್ದ.

ಅಗರವಾಲನೇ ಮೇಲಿನ ಫ್ಲ್ಯಾಟ್‌ನ ಶ್ರೀಮತಿ ದಾಸಗುಪ್ತಳ ಪರಿಚಯ ಮಾಡಿಸಿದ್ದ. ಶ್ರೀ ದಾಸಗುಪ್ತ ಬಿಸ್‌ನೆಸ್ ಮಾಡುತ್ತಾರಂತೆ. ತನ್ನಷ್ಟಕ್ಕೇ ಇರುವ ವ್ಯಕ್ತಿ. ದುಡ್ಡಿನದೇ ಧ್ಯಾನ. ಒಬ್ಬನೇ ಮಗ ಮುಂಬೈಯಲ್ಲಿ ಹಿರಿಯ ಹುದ್ದೆಯಲ್ಲಿದ್ದಾನಂತೆ. ಶ್ರೀಮತಿ ದಾಸಗುಪ್ತ ತನ್ನ ಯೌವನದಲ್ಲಿ ಸುಂದರಿಯಾಗಿದ್ದಿರಬೇಕು. ಬಂಗಾಳಿ ಹೆಂಗಸರೆಲ್ಲ ಲಕ್ಷಣವಾಗಿಯೇ ಇರುತ್ತಾರೆ. ನಾನು ಕಂಡಾಗ ಆಕೆಗೆ ೪೫–೫೦ ವರ್ಷವಾದರೂ ಆಗಿರಬೇಕು. ಅಂತಸ್ತನ್ನು ಗಮನಿಸಿ ಬಾಳುವ ಅಭ್ಯಾಸವುಳ್ಳಾಕೆ. ಅದೇಕೋ ಏನೋ ಪದೇ ಪದೇ ನೂರಿಪ್ಪತ್ತು ಪೌಂಡಿನ ದೇಹವನ್ನು ನನ್ನ ಡ್ರಾಯಿಂಗ್–ರೂಮ್‌ನ ಸೋಫಾದ ಮೇಲೆ ಹೊರಿಸಿ ತೃಪ್ತಿಪಡುತ್ತಿದ್ದಳು.

ಶ್ರೀಮತಿ ದಾಸಗುಪ್ತಳ ಹೆಸರು ಮೃದುಲಾ. ರಮ್‌ಗೇ ರಂಗೇರಿಸುತ್ತಿದ್ದಾರೆ ಮೃದುಲಾ ಎಂಬ ಹೆಸರಿಗೆ ಹೊಂದಲೇ-

ಮಾತಾಡುತ್ತೇ ಇದ್ದೆ. ಅವಳು ಬಂದು ನನ್ನೊಂದಿಗೆ ಲಂಚ್‌ಗೆ ಬನ್ನಿ ಎಂದಳು. ಇಲ್ಲವೆನ್ನುವ ಅಭ್ಯಾಸವಿಲ್ಲದಿದ್ದ ನಾನೂ ಸಮ್ಮತಿಸಿದೆ. ಮಧ್ಯಾಹ್ನದಲ್ಲೂ ಅಪೆಟೈಸರ್ ಎನ್ನುತ್ತ ಟ್ರಿಪ್ಲೆಕ್ಸ್ ಮೇಲೆ ಧಾಳಿ. ಊಟ ಮುಗಿದ ಮೇಲೆ ಅದೂ ಇದೂ ಮಾತನಾಡುತ್ತ ಎರಡು ಪೆಗ್ ಏರಿಸಿದಳು. ನಾನೇನೂ ಸುಮ್ಮನಿದ್ದೆ ಎಂದಲ್ಲ. ಆದರೂ ಆಕೆಯ ವೇಗ ಪ್ರಮಾಣಗಳೆರಡೂ ಅಚ್ಚರಿ ಹುಟ್ಟಿಸುವಂತಿತ್ತು. ನಿಜವಾಗಿ ತಲೆ ತಿರುಗತೊಡಗಿದ್ದೆಂದರೆ ಈ ಪ್ರಮೀಳಾಳ ಬಿಗಿಯಪ್ಪುಗೆಯಿಂದ. ಬಿಡಿಸಿಕೊಂಡು ಬೆವರೊರೆಸಿಕೊಳ್ಳುತ್ತ ಹೊರ ಬಂದಾಗ ಅಪಾದ ಶೀಘ್ರದಲ್ಲಿಯೇ ಡೈರಕ್ಟರಿಗೆ ಬೇಸರ ಬಂದರೂ ಲೆಕ್ಕಿಸದೇ ಫ್ಲ್ಯಾಟ್ ಖಾಲಿ ಮಾಡಿದ್ದೆ.

ಊಟ ಮುಗಿಸಿ ಹೊರಬರುತ್ತೇನೆ. ಮಾಡಲು ಬೇರೇನೂ ಕೆಲಸವಿಲ್ಲ. ನೂನ್ ಶೋಗೆ ಹೋಗಬಾರದೇಕೆ ಎನಿಸುತ್ತದೆ. ಸಿನಿಮಾಗಳೆಲ್ಲ ಬೋರು ಎಂದುಕೊಳ್ಳುತ್ತೇನೆ. ಮನೆಯುತ್ತ ತಿರುಗುತ್ತೇನೆ. ಟಾಕಿಯೊಂದರಲ್ಲಿ ಕುಳಿತು ಮನೆ ತಲುಪುತ್ತೇನೆ.

ಮನೆಗೆ ಮರಳಿದರೂ ಏನೋ ಬೇಸರ. ಸುತ್ತ ಏನು ನಡೆಯುತ್ತಿದೆ ಎಂಬ ಅರಿವು ನನಗಿಲ್ಲ. ನನಗೇನಾಗಿದೆ ಎಂಬರಿವು ಇತರರಾರಿಗೂ ಇಲ್ಲ. ನನ್ನ ಅಕ್ಕ ಪಕ್ಕದವರ ಬಗೆಗೆ ನನಗೆ ಗೊತ್ತಿದ್ದುದೇನಿದ್ದರೂ ಅವರ ನಾಮ ಫಲಕಗಳನ್ನೋದಿದ್ದುದರಿಂದಷ್ಟೇ. ಹಾಗೆ ಪರಿಚಯವಾಗಿದ್ದ ಆ ಹೆಸರುಗಳ ಮಾಲೀಕರನ್ನು ಗುರುತಿಸಲಾರೆ. ಹಾಗೆ ಗುರುತಾಗಿ ನನಗೇನಾಗಬೇಕಾಗಿದೆ ಎನಿಸುತ್ತದೆ. ಗುರುತು–ಪರಿಚಯವಾಗಿ ಅವರ ಮಕ್ಕಳಿಗೆ ಅಂಕಲ್ ಆಗಿ, ಅಂಕಲ್ ಆದ ತಪ್ಪಿಗೆ ಅವರ ಆಟಕ್ಕೆ ನನ್ನ ವಸ್ತುಗಳೆಲ್ಲಾ ಆಹುತಿಯಾಗಿ ಪರಿತಪಿಸುವ ಸಾಧ್ಯತೆಯಿಲ್ಲವಾಗಿರುವುದೇ ಪುಣ್ಯವೆನಿಸುತ್ತದೆ. ಹಿಂದಿನ ಅನುಭವದಂತೆ ಪರಿಚಯದವರ ಹಾವಳಿ ತಪ್ಪಿಸಿಕೊಳ್ಳಲು ದಿನವೂ ರಾತ್ರಿ ಶೋಗೆ ಹೋಗುವ ಪ್ರಮೇಯವೂ ಇಲ್ಲವಲ್ಲ.

ಯಾದರೂ ಬರಬಾರದೇ?' ಎನಿಸುತ್ತದೆ. ಹಾಳು ನಿದ್ದೆಯಂತೂ ಬರುವುದಿಲ್ಲ. ಎದ್ದು ಚಹಕ್ಕೆ ನೀರಿಟ್ಟು ಮತ್ತೆ ಕಿಟಕಿಯ ಬಳಿ ಬಂದು ನಿಲ್ಲುತ್ತೇನೆ. ಗಲ್ಲಿ ಜನಶೂನ್ಯವಾಗಿದೆ.

ಇದ್ದಕ್ಕಿದ್ದಂತೆ ಆಕೆ ಹೊರಬರುತ್ತಾಳೆ. ಮಗನನ್ನು ಬಹಳ ಮುದ್ದಾಡಿ ಮಲಗಿಸಿರಬೇಕು. ಅಸ್ತವ್ಯಸ್ತವಾದ ಕೂದಲು, ಸ್ವಲ್ಪವೇ ಹರಡಿದ ಕುಂಕುಮ, ಮುದುಡಿದ ಸೆರಗು, ಅರಳಿದ ಮುಖ, ಎಲ್ಲವೂ ಒಂದು ಬಗೆಯ ಶೋಭೆ ನೀಡಿದೆ ಎಂದುಕೊಳ್ಳುತ್ತೇನೆ. ಅವಳ ಹೆಸರಾಗಲೀ ಅವಳ ಗಂಡನ ಬಗೆಗಾಗಲೀ ಏನೂ ಅರಿಯದಿದ್ದರೂ ಇವಳನ್ನು ಬಹಳ ಗಮನಿಸುತ್ತಿದ್ದೇನಲ್ಲವೇ ಎನಿಸುತ್ತದೆ. ಚಹದ ನೀರು ನೆನಪಾಗಿ ಕಿಚನ್ ಕಡೆ ಕಾಲೆಳೆಯುತ್ತೇನೆ. ಚಹ ತಯಾರಿಸಿ ಕಪ್ಪು ಬಸಿ ಕೈಯಲ್ಲಿ ಹಿಡಿದು ಮತ್ತೆ ಕೋಣೆಗೆ ಬಂದು ಕುಳಿತು, ಕಿಟಕಿಯಿಂದ ಹೊರ ನೋಡುತ್ತೇನೆ, ಆಕೆ ಕಾಣುವುದಿಲ್ಲ. ಇದ್ದಕ್ಕಿದ್ದಂತೆ ನಗು ಬರುತ್ತದೆ, ಆಕೆಯ ಬಗ್ಗೆ ಏಕಿಷ್ಟು ಆಸಕ್ತಿ ಎಂದುಕೊಳ್ಳುತ್ತೇನೆ,

ಬಹಳ ದಿನಗಳವರೆಗೆ ಆಕೆಯನ್ನು ಗಮನಿಸಿರಲಿಲ್ಲ. ಒಮ್ಮೆ ಮನೆಗೆ ಬಂದ ಪ್ರಸಾದ ಹಸಿವಾಗುತ್ತಿದೆಯೆಂದ. ಬರಿದೆ ಬ್ರೆಡ್, ಮೊಟ್ಟೆ, ಹಾಗೂ ಫ್ರಿಜ್‌ನಲ್ಲಿ ಹಣ್ಣುಗಳಿದ್ದವು. ದಿಲೀಪನೂ ಇರಲಿಲ್ಲ. ಮೊಟ್ಟೆಗಳನ್ನೊಡೆದು ಪ್ರಸಾದನೇ ಆಮ್ಲೆಟ್ ತಯಾರಿಸಿ ತಿಂದ. ವೇಸ್ಟ್‌ಬಿನ್ ಕಾಣಲಿಲ್ಲವೇನೋ. ಕಿಚನ್‌ನ ಕಿಟಕಿ ತೆರೆದು ಮೊಟ್ಟೆಯ ಸಿಪ್ಪೆಗಳನ್ನು ರಸ್ತೆಯಲ್ಲಿ ಬೀಳುವಂತೆ ಎಸೆದುಬಿಟ್ಟ. ಪ್ರಸಾದ ಹೋಗಿ ಅರ್ಧ ಘಂಟೆಯಾಗಿರಬೇಕು. ಕರೆಗಂಟೆ ಒತ್ತಿದ ಸದ್ದಾಯಿತು. ಬಾಗಿಲು ತೆರೆದಾಗ ನನ್ನ ನೆರೆಮನೆಯಾತ ನಿಂತಿದ್ದ. "ಮೊಟ್ಟೆಯ ಸಿಪ್ಪೆಗಳನ್ನು ಬಿಸುಟುದು ನೀವೇನು ?" ಯಾವ ಪರಿಚಯವೂ ಇಲ್ಲದ ನೇರ ಪ್ರಶ್ನೆ. ನನಗೆ ಪ್ರಸಾದನ ಕೆಲಸದ ಅರಿವಿರಲಿಲ್ಲ. ಅವನು ಕೈ ತೋರಿಸಿದ ಕಡೆಗೆ ನೋಡಿದೆ. ಏನಾಗಿರಬೇಕೆಂದು ಊಹಿಸಿ, "ನಾನಲ್ಲ, ನನ್ನೊಬ್ಬ ಅತಿಥಿ. ಏನಾದರಾಗಲಿ ಕ್ಷಮಿಸಿ" ಎಂದರೇನಂತೆ? ಆತನಂತೂ ಕ್ಷಮಿ-

ವರು... ಸಿವಿಕ್ ಸೆನ್ಸ್... ಕ್ಲೀನ್ಲೀನೆಸ್..." ಸುಮಾರು ಕೂಗಾಡಿದ ಅವನ ಕೂಗಾಟ ತಡೆಯು ಲಾರದೇ ನಾನೂ ಕೂಗಾಡಿದೆ. ದಣಿದ ಬಳಿಕ ಇಬ್ಬರೂ ಹಿಂದಿರುಗಿದೆವು. ಆಗಲೇ ತನ್ನ ಮನೆಯ ಬಾಗಿಲಿನಲ್ಲಿ ನಿಂತಿದ್ದ ಈಕೆಯನ್ನು ಗಮನಿಸಿದ್ದು. ಎಷ್ಟು ಹೊತ್ತಿನಿಂದ ನಿಂತಿದ್ದಳೋ ಏನೋ. ಬಾಗಿಲು ಮುಚ್ಚಿ ಒಳಬಂದು ಕಿಟಕಿ ಯಿಂದ ನೋಡಿದರೆ ಮೊಟ್ಟೆಯ ಸಿಪ್ಪೆಗಳನ್ನು ಗುಡಿಸಿ ತೊಟ್ಟಿಯಲ್ಲಿ ಹಾಕುತ್ತಿದ್ದಳು. ನಾಚಿಕೆ-ಯೆನಿಸಿತ್ತು. ಆಕೆಯ ಮೇಲೆ ಸಿಟ್ಟೂ ಬಂದಿತ್ತು.

ಇದಾಗಿ ಒಂದು ತಿಂಗಳೂ ಕಳೆದಿರಲಿಲ್ಲ. ಸ್ವಲ್ಪ ಅಸ್ವಸ್ಥತೆಯಾಯಿತು. ಉದಾಸೀನ ಮಾಡಿದೆ. ಕಾಯಿಲೆಗೂ ಸಿಟ್ಟು ಬಂದಿರಬೇಕು. ಸಾಕಷ್ಟು ತೀವ್ರವೇ ಆಯಿತು. ಡಾಕ್ಟರ ಅಪ್ಪಣೆ, ದೌರ್ಬಲ್ಯ ಎರಡೂ ಕಾರಣದಿಂದ ರಜೆ ಪಡೆದು ಸುಮಾರು ಹದಿನೈದು ದಿನ ಹಾಸಿಗೆ ಹಿಡಿದುಬಿಟ್ಟೆ. ಡಾಕ್ಟರು ದಿನಕ್ಕೆರಡು ಬಾರಿ ಬಂದು ಹೋಗುತ್ತಿದ್ದರು. ದಿಲೀಪನ ಏನಾ ಕೇಳುವವರಾರೂ ಇರಲಿಲ್ಲ. ಹಾಸಿಗೆ ಹಿಡಿದ ಎರಡನೇ ದಿನ ದಿಲೀಪ ಕೆಲಸ ಮುಗಿಸಿ ಹೊರ ಹೊರಟ. "ಶುನ್‌ಜ್ಯೋ" (ಇಲ್ಲಿ ಕೇಳು-ತ್ತೀಯಾ ?) ಈಕೆಯ ಸ್ವರ ಕೇಳಿಸಿತು. "ನಿಮ್ಮ ಬಾಬೂಜಿಗೆ ಮೈಸರಿಯಿಲ್ಲವೆಂದು ಕಾಣು-ತ್ತದೆ... ಡಾಕ್ಟರು ಬರುತ್ತಿದ್ದಾರೆಯೇ ?..." ಇತ್ಯಾದಿ ವಿಚಾರಿಸುತ್ತಿದ್ದಳು. ಅವನನ್ನು ಬೀಳ್ಕೊಳ್ಳುವ ಮುನ್ನ ಕೇಳಿದಳು: "ಮತ್ತೆ ಯಾವಾಗ ಬರುತ್ತೀ ?" ಅವನು ಬರುವುದು ಸಂಜೆಗೇ ಎಂದು ತಿಳಿದ ಮೇಲೆ ತಾಸೆರಡು ತಾಸಿ-ಗೊಮ್ಮೆ ಕಿಟಕಿಯಿಂದ ಹಣಿಕಿ ನೋಡುತ್ತಿ-ದ್ದಳು. ದಿನವೂ ದಿಲೀಪನಲ್ಲಿ ನನ್ನ ಆರೋಗ್ಯದ ಬಗೆಗೆ ವಿಚಾರಿಸುತ್ತಿದ್ದಳು. ನನಗೆ ಆರೋಗ್ಯ-ವಾಗಿದೆಯೆಂದು ತಿಳಿದ ಮೇಲೆ ಆಕೆ ಕಿಟಕಿಯಲ್ಲಿ ತಲೆ ಹಾಕುವುದು ನಿಂತುಹೋಯಿತು.

ಬಿಳುಪು ಮೈ ಬಣ್ಣ. ಸುಮಾರು ಮುವ-ತ್ತೈದರ ವಯಸ್ಸಿನ ಬೆಳವಣಿಗೆ ಕಡಿಮೆಯಾದ ದೇಹ. ಕನ್ನಡಕದ ಹಿಂದೆಯೂ ಹೊಳೆಯುವ ಕಣ್ಣು. ಮುಗುಳುನಗೆ. ನೋಡಲು ಆಕೆ ರೂಪಸಿ-

ನನ್ನ ಆಫೀಸಿಗೆ ಕೈ ಬೀಸಿ ಬೀಳ್ಕೊಡುತ್ತಾಳೆ. ಅವರ ಜೊತೆ ಒಂದೆ ಕೈಗಳನ್ನು ಹಣೆಯ ಬಳಿ ಮುಗಿದು ಕಾಣದ ದೈವಕ್ಕೆ ನಮಿಸುತ್ತಾಳೆ. ಅವಳನ್ನು ಕಾಣದಿದ್ದರೆ ಚಡಪಡಿಕೆಯಾಗುತ್ತದೆ.

ಅವಳ ಮೂರು ವರ್ಷದ ಮಗನನ್ನು ಮಾತ್ರ ಈಗೀಗ ಗಲ್ಲ ಸವರಿದ್ದೇನೆ. ಮುದ್ದಾದ ಮಗು ಎತ್ತಿಕೊಂಡಿದ್ದೇನೆ. ಈ ವೇಳೆಯಲ್ಲಿ ಆತನನ್ನು ಹೊರತು ಆಕೆಯೊಂದಿಗೆ ಯಾರೂ ಇರುವುದಿಲ್ಲ. ಆದರೂ ಯಾವ ಸೆಳೆತವೋ ಎದ್ದು ಹೋಗಿ ಅವಳ ಮನೆಯ ಬಾಗಿಲು ತಟ್ಟುತ್ತೇನೆ. ಬಾಗಿಲು ತೆರೆದವಳ ಕಣ್ಣಲ್ಲಿ ಅಚ್ಚರಿ ಕಾಣುತ್ತದೆ. ಬಿಸಿಲು ಹೆಚ್ಚಿಲ್ಲದಿದ್ದರೂ ಬೆವರುತ್ತೇನೆ. ಏನು ಹೇಳಬೇಕೋ ತೋಚುವುದಿಲ್ಲ. ಆಕೆ ಮುಗುಳುನಕ್ಕು "ಆ ಜಾವ್" (ಬನ್ನಿ) ಎನ್ನುತ್ತಾಳೆ. ಒಳ ಹೋಗುತ್ತೇನೆ. ಕಾಲುಗಳು ನಡುಗುತ್ತಿವೆ ಯೆನಿಸುತ್ತದೆ. ಡ್ರಾಯಿಂಗ್‌ರೂಮಿನಲ್ಲಿ ಕುರ್ಚಿಯತ್ತ ಕೈ ತೋರುತ್ತಾಳೆ. ಕುಳಿತುಕೊಳ್ಳು ತ್ತೇನೆ. ಆಕೆ ಒಳಹೋಗಿ ನೀರಿನ ಗ್ಲಾಸಿ-ನೊಂದಿಗೆ ಹೊರಬರುತ್ತಾಳೆ. ಫ್ರಿಜ್‌ನ ತಣ್ಣೀರು ಹಿತವೆನಿಸುತ್ತದೆ. ಏನಾದರೂ ಹೇಳ ಬೇಕು. ಗಂಟಲು ಒಣಗಿದೆಯೆನಿಸುತ್ತದೆ. ಏನೂ ತೋಚುವುದಿಲ್ಲ. ಇದ್ದಕ್ಕಿದ್ದಂತೆ ಎದ್ದು ನಿಂತು "Sorry" ಎಂದಷ್ಟೇ ಹೇಳಿ ಹೊರ ಬರುತ್ತೇನೆ. ನನ್ನ ಮನೆಯ ಬಾಗಿಲಿನಲ್ಲಿ ನಿಂತು ಹಿಂತಿರುಗುತ್ತೇನೆ. ಆಕೆ ಬಾಗಿಲಿನಲ್ಲೇ ನಿಂತಿರು ವುದು ಕಾಣುತ್ತದೆ. ಆಕೆ ನಕ್ಕು ಕೈ ಮುಗಿಯು ತ್ತಾಳೆ. ಪ್ರತಿವಂದಿಸಿ ಒಳಬರುತ್ತೇನೆ.

ದಿಲೀಪ ಬಂದ ಕೂಡಲೇ ಒಂದು ಟ್ಯಾಕ್ಸಿ ತರಹೇಳುತ್ತೇನೆ. ಕಟ್ಟಿಯಾಗಿರುವ ಸಾಮಾನು ಗಳನ್ನು ದಿಲೀಪ ಟ್ಯಾಕ್ಸಿಗೇರಿಸುತ್ತಾನೆ. ದಿಲೀಪನಿಗೆ ಬೀಗದ ಕೈಯಿತ್ತು, ಖಾಲಿ ಮಾಡಿ, ಸಾಮಾನುಗಳನ್ನು ಸಾಗಿಸುವ ವರೆಗೆ ಮನೆಯ ಕಡೆ ಗಮನವಿರಲು ಹೇಳಿ ಟ್ಯಾಕ್ಸಿ ಹತ್ತುತ್ತೇನೆ. ಡ್ರೈವರ್‌ಗೆ ಹಳೆಯ ಹೋಟಲಿನತ್ತ ಹೋಗಲು ಹೇಳುತ್ತೇನೆ. ಟ್ಯಾಕ್ಸಿ ತಿರುವಿನಲ್ಲಿ ತಿರುಗು ತ್ತಿದ್ದಂತೆ ಆಕೆ ಕಣ್ಣು ಮುಚ್ಚಿ ಆಗಸದತ್ತ ಕೈ ಮುಗಿದು ನಿಂತಿರುವುದು ಕಾಣುತ್ತದೆ.

ಕಳೆದುಹೋದ ಪ್ರತಿಷ್ಠೆಯನ್ನು ಅದು ಮತ್ತೆ ಗಳಿಸಿಕೊಳ್ಳುತ್ತಿದೆ

# ಕಲ್ಲಿದ್ದಲಿಗೆ ಬಂತು ಮತ್ತೆ ಪ್ರಾಶಸ್ತ್ಯ

ಎಂ. ಆರ್. ಎಸ್. ರಾವ್

ಕಲ್ಲಿದ್ದಲಿನಿಂದ ಮಾನವನಿಗಾದ ಉಪಕಾರ ಅಷ್ಟಿಷ್ಟಲ್ಲ. ಸುಮಾರು ಇನ್ನೂರು ವರ್ಷಗಳ ವರೆಗೆ ಅದು ಔದ್ಯಮಿಕ ರಂಗದ ಬೆನ್ನೆಲುಬಾಗಿತ್ತು. ಅದಿಲ್ಲದೆ ಯಂತ್ರಗಳು ನಡೆಯುವಂತಿರಲಿಲ್ಲ, ಉಗಿಬಂಡಿ ಸಾಗುವಂತಿರಲಿಲ್ಲ; ದೀಪಗಳು ಹತ್ತಿಕೊಳ್ಳುವಂತಿರಲಿಲ್ಲ. ಈ ಶತಮಾನದ ಮಧ್ಯಭಾಗದಲ್ಲಿ ಹೆಚ್ಚು ಸ್ವಚ್ಛವೂ ಮಿತವ್ಯಯಕರದ್ದೂ ಆದ ಪೆಟ್ರೋಲಿಯಂ ಹಾಗೂ ನೈಸರ್ಗಿಕ ಅನಿಲಗಳ ಅಗಾಧ ನಿಕ್ಷೇಪಗಳ ಶೋಧವಾಗಿ ನಾಗರಿಕ ಜಗತ್ತಿನ ಈ ಪರಿಕಾರ ಹಿಂದೆ ಬಿದ್ದ.

ಹೊಸ ನಿಕ್ಷೇಪಗಳಲ್ಲಿ ಪೆಟ್ರೋಲಿಯಂ ಹಾಗೂ ನೈಸರ್ಗಿಕ ಅನಿಲಗಳ ಸಂಗ್ರಹ ಅದು ಮಾನವನ ಅವಶ್ಯಕತೆಗಳನ್ನು ಚಿರಕಾಲವೂ ಪೂರೈಸುವುದೆಂಬೊಂದು ಭ್ರಮೆಯನ್ನುಂಟುಮಾಡುವಷ್ಟು ಅಗಾಧವಾಗಿತ್ತು. ಆದರೆ ಭ್ರಮೆಯು ಭ್ರಮೆಯೆ. ಭ್ರಮನಿರಸನವಾಗುವ ಕಾಲ ಬಂದದ್ದು ಮಾತ್ರ ಇತ್ತೀಚೆಗೆ. ಈ ಶತಮಾನ ಕೊನೆಗೊಳ್ಳುವ ಹೊತ್ತಿಗೆ ತೈಲ ನಿಕ್ಷೇಪಗಳ ಗರ್ಭ ಬರಿದಾಗಿರುತ್ತದೆ. ಅಕಸ್ಮಾತ್ತಾಗಿ ತೈಲ ನಿಕ್ಷೇಪಗಳಲ್ಲಿ ಅಷ್ಟಿಷ್ಟು ಎಣ್ಣೆ ಉಳಿದುಕೊಂಡಿದ್ದರೂ ಪ್ರಮಾಣ ಅಲ್ಪವಾದುದರಿಂದ ಅದನ್ನು ಹೊರದೆಗೆಯುವುದು ಆರ್ಥಿಕವಾಗಿ ದುಷ್ಕರವಾಗುತ್ತದೆ.

ತೈಲ ನಿಕ್ಷೇಪಗಳ ಒಡಲು ಬರಿದಾಗುವುದರೊಡನೆ ಅರಬ ರಾಷ್ಟ್ರಗಳ ವೈಭವೋಪೇತವಾದ ಜೀವನದ ಇತಿಶ್ರೀಯಾಗುತ್ತದೆ ಅಥವಾ ಈಗಾಗಲೆ ಇರಾಣ, ಅಬೂಧಾಬಿ ಹಾಗೂ ಸೌದಿ ಅರೇಬಿಯಗಳು ಮಾಡಿದಂತೆ ತೈಲದ ಮಾರಾಟ ಹಾಗೂ ರಾಯಲ್ಟಿಗಳ ರೂಪದಲ್ಲಿ ಬಂದ ಹಣವನ್ನು ಇತರ ದೇಶಗಳ ಔದ್ಯಮಿಕ ರಂಗದಲ್ಲಿ ತೊಡಗಿಸುವ ಮೂಲಕವೋ ಜಾಗತಿಕ ವಾಣಿಜ್ಯ ಅಥವಾ ಬ್ಯಾಂಕಿಂಗ್ ರಂಗಗಳಲ್ಲಿ ಲಾಭದಾಯಕವಾಗಿ ಬಂಡವಾಳವನ್ನು ತೊಡಗಿಸುವ ಮೂಲಕವೋ ಈ ವೈಭವೋಪೇತ ಜೀವನವನ್ನು ಇನ್ನೂ ಸ್ವಲ್ಪ ಕಾಲ ಮುಂದುವರಿಸಿಕೊಂಡು ಬರಲು ಅರಬ ರಾಷ್ಟ್ರಗಳಿಗೆ ಸಾಧ್ಯವಾಗುತ್ತದೆ.

ತೈಲ ನಿಕ್ಷೇಪಗಳು ಬರಿದಾಗಿ ತತ್ಪರಿಣಾಮವಾಗಿ ಪ್ರಚಲಿತ ಶಕ್ತಿಸಂತುಲನದಲ್ಲಿ ಏರುಪೇರುಗಳುಂಟಾಗಿ ಜಾಗತಿಕ ರಾಜಕೀಯದಲ್ಲಿ ಹೊಸ ಶಕ್ತಿಸಮತೋಲನವೇ ರೂಪಗೊಳ್ಳಬಹುದು. ಅದೆಲ್ಲಾ ದೂರಗಾಮಿಯಾದ ಪರಿಣಾಮದ ವಿಚಾರವಾಯಿತು. ಸಾಮಾನ್ಯ ಮನುಷ್ಯನಿಗೆ ಮುಖ್ಯವಾದದ್ದು ಇಂದು ನಾಳಿನ



ಪ್ರಶ್ನೆ.

ಪೆಟ್ರೋಲಿಯಂನ ಬೆಲೆ ಲಂಗು ಲಗಾಮಿಲ್ಲದೆ ಏರುತ್ತಿದೆ. ಅದಕ್ಕೆ ಆರ್ಥಿಕ ಹಾಗೂ ರಾಜಕೀಯ ಕಡಿವಾಣಗಳನ್ನು ತೊಡಿಸಲು ಕೆಲ ಮುಂದುವರಿದ ದೇಶಗಳು ಪ್ರಯತ್ನಿಸಿದರೂ ಯಶ ಸಿಗಲಿಲ್ಲ. ಪಾಶ್ಚಾತ್ಯ ದೇಶಗಳು ಇಸ್ರೇಲಿಗೆ ಬೆಂಬಲ ಕೊಡುತ್ತಿರುವುದರ ಪ್ರತೀಕಾರವಾಗಿ ಅರಬ ರಾಷ್ಟ್ರಗಳು ತೈಲವನ್ನು ರಾಜಕೀಯ ಅಸ್ತ್ರವಾಗಿ ಬಳಸುತ್ತಿವೆಯೆಂದು ಪಾಶ್ಚಾತ್ಯ ರಾಜನೀತಿಜ್ಞರ ದೂರು. 'ಈ ದೂರಿಗೆ ತಳಬುಡವೇ ಇಲ್ಲ; ತೈಲವನ್ನು ನಾವು ಅಗ್ಗವಾಗಿಯೆ ಪೂರೈಸುತ್ತಿದ್ದೇವೆ. ತೈಲವನ್ನು ಹೊರದೆಗೆವ ಸ್ವಾಮ್ಯ ಪಡೆದ ಪಾಶ್ಚಾತ್ಯ ಕಂಪನಿಗಳು ಅತಿ ಹೆಚ್ಚು ಲಾಭದಲ್ಲಿ ಆ ತೈಲವನ್ನು ತಮ್ಮ ದೇಶದಲ್ಲಿ ಮಾರಿ ತಮ್ಮ ದೇಶದವರನ್ನೇ ಕೊಳ್ಳೆ ಹೊಡೆದರೆ ನಾವೇನು ಮಾಡಲು ಸಾಧ್ಯ? ಈ ಅಭಿವೃದ್ಧಿ ಕಾರ್ಯಗಳಿಗಾಗಿ ಹೆಚ್ಚು ಹಣ ದೊರಕಿಸಲು ನಾವು ತೈಲವ ಬೆಲೆಯನ್ನು ಸ್ವಲ್ಪ ಹೆಚ್ಚಿಸಿದರೆ ಕೊಳ್ಳೆಯ ಪ್ರಮಾಣದಲ್ಲಿ ಮೋತಾ ಆಗಬಹುದೆ ವಿನಾ ಜನಸಾಮಾನ್ಯರ ಕಿಸೆಗೇನೂ ಕತ್ತರಿ ಬೀಳುವುದಿಲ್ಲ; ಬಿದ್ದರೆ ಅದನ್ನು ತಪ್ಪಿಸುವ ಹೊಣೆ ಆಯಾ ದೇಶಗಳ ಸರಕಾರದ್ದೇ ಹೊರತು ನಮ್ಮದಲ್ಲ' ಎಂಬುದು ತೈಲೋತ್ಪಾದಕ ದೇಶಗಳ ಸಮಾಧಾನ.

ಪರಿಸ್ಥಿತಿ ಹೇಗೇ ಇರಲಿ, ಇದರಿಂದ ಜನಸಾಮಾನ್ಯರು ಗಾಸಿಗೊಂಡಿರುವುದಂತೂ ನಿಜ. ತೈಲೋತ್ಪಾದಕ ದೇಶಗಳನ್ನು ಹೊರತುಪಡಿಸಿದರೆ ತೈಲವ ಬೆಲೆಯೇರಿಕೆಯ ಬಿಸಿ ತಟ್ಟದ ದೇಶವಿಲ್ಲ. ಆದರೆ ಹೆಚ್ಚು ಬಿಸಿ ತಟ್ಟಿದ್ದು ಪ್ರಗತಿಶೀಲವಾದ ಪಾಶ್ಚಾತ್ಯ ರಾಷ್ಟ್ರಗಳಿಗೆ. ಅಮೇರಿಕದಲ್ಲಿ ಅತಿಪ್ರಸರಣಕ್ಕೆ ಕಾರಣವಾದ ಸಂಗತಿಗಳಲ್ಲಿ ಇದೂ ಒಂದೆಂಬುದು ಅನೇಕ ತಜ್ಞರ ಮತ.

ಇದಕ್ಕೆಲ್ಲ ಪರಿಹಾರವೊಂದೆ. ಹೊಸ ಶಕ್ತಿಮೂಲವನ್ನು ಕಂಡುಹಿಡಿಯುವುದು. ಅದಕ್ಕಾಗಿ ವಿಜ್ಞಾನಿಗಳು ಪ್ರಪಂಚದಾದ್ಯಂತ ಶ್ರಮಿಸುತ್ತಿದ್ದಾರೆ. ಅವರು ಈ ವರೆಗೆ ಸೂಚಿಸಿದ ಪರಿಹಾರಗಳು ಹಲವಾರು. ಕೆಲವರು ಸಾಗರದ ತೆರೆಗಳಿಂದ ವಿದ್ಯುತ್ತನ್ನು ಉತ್ಪಾದಿಸಿ ಶಕ್ತಿಯ ಕೊರತೆಯನ್ನು ಕೆಲ ಮಟ್ಟಿಗೆ ನೀಗಿಸಬಹುದೆಂದು ಹೇಳಿದರೆ ಇನ್ನು ಕೆಲವರು ಸೂರ್ಯನಿಂದಲೆ ನಮ್ಮೆಲ್ಲ ಅವಶ್ಯಕತೆಗಳನ್ನು ಪೂರೈಸಿಕೊಳ್ಳಬಹುದೆಂದು ಹೇಳುತ್ತಾರೆ. ಪರಮಾಣು ಶಕ್ತಿಯನ್ನು ರಚನಾತ್ಮಕ ಕಾರ್ಯಗಳಿಗಾಗಿ

ಉಪಯೋಗಿಸಿಕೊಳ್ಳಬೇಕೆಂದು ಹೇಳುವವರೂ ಹಲವಾರು ಜನ.

ಆದರೆ ಇವೆಲ್ಲವೂ ಸದ್ಯೋಭವಿಷ್ಯದಲ್ಲಿಯೆ ಕೈಗೂಡುವಂಥವಲ್ಲ. ಆದ್ದರಿಂದ ಕಲ್ಲಿದ್ದಲಿಯ ಉಪಯೋಗವೇ ಸಧ್ಯದ ಸಮಸ್ಯೆಗೆ ತಾರಕನೆಂಬ ಮಾತು ವೈಜ್ಞಾನಿಕ ವಲಯಗಳಲ್ಲಿ ಧ್ವನಿತವಾಗುತ್ತಿದೆ. ಮಾನವನ ಹಳೆ ಗೆಳೆಯ ಹೀಗೆ ಮತ್ತೆ ಸಹಾಯಕ್ಕೆ ಬರುತ್ತಿದ್ದಾನೆ. ಶಕ್ತಿಯ ಅವಶ್ಯಕತೆಯನ್ನು ದೀರ್ಘಕಾಲದವರೆಗೆ ಪೂರೈಸುವಷ್ಟು ಸಂಗ್ರಹ ಪೃಥ್ವಿಯ ಗರ್ಭದಲ್ಲಿ ನಿಹಿತವಾಗಿದೆಯೆಂದು ವಿಜ್ಞಾನಿಗಳು ಹೇಳುತ್ತಾರೆ. ಅಮೇರಿಕವೊಂದರಲ್ಲೆ ನಾಲ್ವತ್ತು ಮೂರು ಸಾವಿರ ಕೋಟಿ ಟನ್ನುಗಳಷ್ಟು ಕಲ್ಲಿದ್ದಲಿ ಸಂಗ್ರಹಗೊಂಡಿದೆ. ಇದೆಲ್ಲವನ್ನೂ ಶಕ್ತಿಯಾಗಿ ಪರಿವರ್ತಿಸಿದರೆ ಸೌದಿ ಅರೇಬಿಯದಲ್ಲಿ ಲಭ್ಯವಿರುವ ತೈಲವೆಲ್ಲವನ್ನೂ ಶಕ್ತಿಯಾಗಿ ಪರಿವರ್ತಿಸಿದರೆ ಅದರ ಪ್ರಮಾಣ ದೊರೆಯುವುದಕ್ಕಿಂತ ಎಷ್ಟೋ ಪಟ್ಟು ಹೆಚ್ಚಾಗುತ್ತದೆ. ಇದನ್ನೇ ಇನ್ನೊಂದು ಬಗೆಯಲ್ಲಿ ಹೇಳಬಹುದಾದರೆ ಅಮೇರಿಕ ಈ ಎಲ್ಲ ಇಂಧನವನ್ನು ಬಳಸಿದರೆ ಇನ್ನು ಒಂದು ನೂರು ವರ್ಷಗಳವರೆಗೆ ಅಲ್ಲಿ ಶಕ್ತಿಯ ಕೊರತೆಯಾಗಕ್ಕಿಲ್ಲ. ಇಂದು ರಶಿಯನಷ್ಟು ಪ್ರಮಾಣದ ದೇಶವೂ ಕಲ್ಲಿದ್ದಲನ್ನು ಉತ್ಪಾದಿಸುತ್ತಿಲ್ಲ. (ವಾರ್ಷಿಕ ಉತ್ಪಾದನೆ ೬೮.೪ ಕೋಟಿ ಟನ್ನುಗಳಷ್ಟು) ಇದರ ನಂತರದ ಸ್ಥಾನ ಅಮೇರಿಕದ್ದು (ವಾರ್ಷಿಕ ಉತ್ಪಾದನೆ ೬೦ ಕೋಟಿ ಟನ್ನುಗಳಷ್ಟು). ಇದರ ಪೈಕಿ ಆರು ಕೋಟಿ ಟನ್ನುಗಳಷ್ಟು ಕಲ್ಲಿದ್ದಲನ್ನು ಅದು ಕೆನಡಾ, ಜಪಾನ್, ಪಶ್ಚಿಮ ಯುರೋಪ್ ಹಾಗೂ ದಕ್ಷಿಣ ಅಮೇರಿಕಗಳಿಗೆ ರವಾನಿಸುತ್ತದೆ.

ಅಮೇರಿಕವು ಗಣಿಗಳಿಂದ ಹೊರ ತೆಗೆಯುತ್ತಿರುವ ಕಲ್ಲಿದ್ದಲಿಯ ಪ್ರಮಾಣ ಮೇಲು ನೋಟಕ್ಕೆ ಹೆಚ್ಚೆಂದು ತೋರಿದರೂ ಅದು ಸೇಕಡಾ ಹದಿನೇಳರಷ್ಟು ಮಾತ್ರ ಶಕ್ತಿಯ ಅವಶ್ಯಕತೆಯನ್ನು ಪೂರೈಸುವುದರಿಂದಾಗ ಈ ಪ್ರಮಾಣ ಅಲ್ಪವೆಂದು ತೋರುವುದು. ತೈಲದ ಬೆಲೆ ದಿನೆ ದಿನೆ ಏರುತ್ತಿರುವ ಈ ಕಾಲದಲ್ಲಿ ಕಲ್ಲಿದ್ದಲಿಯ ಉತ್ಪಾದನೆಯನ್ನು ತೀವ್ರವಾಗಿ ಹೆಚ್ಚಿಸುವುದೊಂದೇ ಈಗುಳಿದಿರುವ ದಾರಿ.

ಅಮೇರಿಕದ ಸರಕಾರ ಮುಂದಿನ ಐದು ವರ್ಷಗಳಲ್ಲಿ ಕಲ್ಲಿದ್ದಲಿಯ ಉತ್ಪಾದನೆಯನ್ನು ೬೦ ಕೋಟಿಯಿಂದ ೯೬ ಕೋಟಿ ಟನ್ನುಗಳಿಗೇರಿಸಲು ಮುನ್ನೂರೈವತ್ತು ಕೋಟಿ ಡಾಲರುಗಳ ಯೋಜನೆಯೊಂದನ್ನು ಹಾಕಿಕೊಂಡಿದೆ. ಖಾಸಗಿ ವಲಯವೂ ಇಷ್ಟೇ ಮೊತ್ತವನ್ನು ಇದಕ್ಕಾಗಿ ಬಳಸುವ ಅಂದಾಜಿದೆ. ಈ ಎಲ್ಲ ಹಣವನ್ನು ಕಲ್ಲಿದ್ದಲಿಯ ಉತ್ಪಾದನೆಯನ್ನು ಹೆಚ್ಚಿಸಲು ಹಾಗು ಕಲ್ಲಿದ್ದಲಿಯ ಬಗೆಗೆ ವಿವಿಧ ಸಂಶೋಧನೆಗಳನ್ನು ಕೈಕೊಳ್ಳಲು ಬಳಸಲಾಗುವುದು.

ಕಲ್ಲಿದ್ದಲನ್ನು ಹೊರದೆಗೆಯಲು ಪ್ರಚಲಿತ ಇರುವ ವಿಧಾನಗಳು ಮುಖ್ಯವಾಗಿ ಎರಡು. ಮೊದಲನೆಯದೆಂದರೆ ಭೂಪೃಷ್ಠವನ್ನು ಸುಲಿದು ಮೇಲ್ಭಾಗದಲ್ಲಿ ಕಂಡುಬರುವ ಕಲ್ಲಿದ್ದಲನ್ನು ಸಂಗ್ರಹಿಸುವುದು. ಇದರಿಂದ ಅರಣ್ಯಗಳು ನಾಶವಾಗಿ ಮಳೆಯ ಪ್ರಮಾಣ ಕಡಿಮೆಯಾಗುವುದು. ಕಲ್ಲಿದ್ದಲನ್ನು ಹೊರದೆಗೆದ ಸ್ಥಳಗಳಲ್ಲಿ ಚಂದ್ರನ ಮೇಲೆ ಕಂಡುಬರುವಂತಹ ಗುಳಿಗಳು ನಿರ್ಮಾಣಗೊಂಡು ನಿಸರ್ಗ ಸೌಂದರ್ಯ ಹೇಳ ಹೆಸರಿಲ್ಲದಂತಾಗುವುದು; ಪರಿಸರ ವ್ಯತ್ಯಸ್ತಗೊಳ್ಳುವುದು. ಕಲ್ಲಿದ್ದಲನ್ನು ತೆಗೆವ ಎರಡನೆಯ ಮಾರ್ಗವೆಂದರೆ ಗಣಿಗಳನ್ನು ತೋಡುವುದು. ಈ ವಿಧಾನವೂ ದೋಷಮುಕ್ತವಾಗಿಲ್ಲ. ಗಣಿಗಳಲ್ಲಿ ಕೆಲಸ ಮಾಡುವವರ ಪುಪ್ಪುಸಗಳಲ್ಲಿ ಕಲ್ಲಿದ್ದಲಿಯ ಸಣ್ಣ ಸಣ್ಣ ಕಣಗಳು ಸಂಗ್ರಹಗೊಂಡು ಅನೇಕ ರೋಗಗಳಿಗೆ ಕಾರಣವಾಗಬಹುದು. ಅಲ್ಲದೆ ಕೆಲಸಗಾರನೊಬ್ಬನ ಅಜಾತುರ್ಯದಿಂದ ಗಣಿಗಳಲ್ಲಿನ ಮೀಥೇನ್ ವಾಯು ಹೊತ್ತಿಕೊಂಡು ಸ್ಫೋಟ ಸಂಭವಿಸಬಹುದು.

ಈ ಎಲ್ಲ ಸಾಧಕ-ಭಾಧಕಗಳನ್ನು ವಿಚಾರಿಸಿ ಬಾಧಕಗಳು ಆದಷ್ಟು ಕಡಿಮೆಯಾಗುವಂತೆ ಗಣಿಗಳ ತಜ್ಞರು ಪ್ರಯತ್ನಿಸುತ್ತಿದ್ದಾರೆ. ಪ್ರಕೃತಿಯ ಸೌಂದರ್ಯ ಹಾಳಾಗದ ಹಾಗೆ, ಪರಿಸರಕ್ಕೆ ಧಕ್ಕೆ ಬಾರದ ಹಾಗೆ ಕಲ್ಲಿದ್ದಲನ್ನು ತೆಗೆಯುವ ವಿಧಾನವನ್ನು ರೂಪಿಸುತ್ತಿದ್ದಾರೆ. ಭೂಪೃಷ್ಠದ ಮೇಲಿನ ಕಲ್ಲಿದ್ದಲು ಅಗೆದು ತೆಗೆದ ನಂತರ

ಬೋಳುಬೋಳಾದ ಆ ಸ್ಥಳವನ್ನು ಹಾಗೆಯೆ ಬಿಡದೆ ಮತ್ತೆ ನಿಸರ್ಗರಮಣೀಯವಾಗಿ ಕಾಣು-ವಂತೆ ಮಾಡಲು ಸಸ್ಯಗಳನ್ನು ಬೆಳೆಸಲು ಅಮೇ-ರಿಕದ ಸರಕಾರ ಒಂದು ಯೋಜನೆಯನ್ನೇ ಹಾಕಿಕೊಂಡಿದೆ. ಸಂಕೀರ್ಣವಾದ ಯಂತ್ರೋಪಕರಣಗಳನ್ನುಪಯೋಗಿಸುವುದರಿಂದ ಸುರಂಗ ತೋಡಿ ಕಲ್ಲಿದ್ದಲವನ್ನು ತೆಗೆಯುವುದು ಮೊದಲಿನಷ್ಟು ಅಪಾಯಕರವಾಗಿಲ್ಲ. ಆದರೆ ಅಕಸ್ಮಾತ್ತಾಗಿ ಛಾಸನಾದಲ್ಲಿ ಜರುಗಿದಂತಹ ದುರಂತ ಮತ್ತೆ ಜರುಗಿದರೆ ಹೇಗೆ? ಅದಕ್ಕೂ ವಿಜ್ಞಾನಿಗಳ ಬಳಿ ಉತ್ತರವಿದೆ: ಸಂಪೂರ್ಣ ಸ್ವಯಂಚಾಲಿತ ಯಂತ್ರಗಳಿಂದ ಗಣಿಗಳನ್ನು ತೋಡುವವುದು. ಆ ದಿನ ದೂರವಿಲ್ಲ.

ಗಣಿಗಳನ್ನು ತೋಡಿ ಕಲ್ಲಿದ್ದಲ್ಲನ್ನು ಹೊರ ತೆಗೆಯಬಹುದೇನೋ ನಿಜ. ಆದರೆ ಈ 'ಹೊಲಸು' ಇದ್ದಿಲನ್ನು ಜನ ಹೇಗೆ ತಾನೇ ಸ್ವೀಕರಿಸಿಯಾರು? ಮೇಲಾಗಿ ಕಾರಖಾನೆಗಳ ಹೊಗೆಗೊಳವೆಗಳ ಮೂಲಕ ಅಪಾರವಾಗಿ ಹೊರ ಬೀಳುವ ದೂಷಕಗಳು ಈಗಾಗಲೆ ವಾತಾವರಣವನ್ನು ಮಲಿನಗೊಳಿಸಿವೆ. ಕಲ್ಲಿದ್ದಲಿಯ ಸಾರ್ವತ್ರಿಕ ಉಪಯೋಗದಿಂದ ವಾತಾವರಣ ಇನ್ನಷ್ಟು ಕ್ಷಿಪ್ರವಾಗಿ ಮಲಿನಗೊಳ್ಳಲಾರದೆ? ಎಂದು ನೀವು ಕೇಳಬಹುದು. ವಿಜ್ಞಾನಿಗಳಿಗೆ ಇದು ಗೊತ್ತಿಲ್ಲದಿಲ್ಲ. ಅವರು ಕಲ್ಲಿದ್ದಲಿಯಿಂದ ಅನಿಲವನ್ನುತ್ಪಾದಿಸಲು ಪ್ರಯತ್ನಿಸುತ್ತಿದ್ದಾರೆ. ಅದು ಸಫಲವಾದಾಗ, ನಗರಸಭೆಯವರು ನಲ್ಲಿಯ ಮೂಲಕ ನೀರನ್ನು ಪೂರೈಸುವಂತೆ ಮನೆಮನೆಗೂ ಅನಿಲವನ್ನೊದಗಿಸಲು ಸಾಧ್ಯ-ವಾಗುವುದು. ಇದಲ್ಲದೆ ಕಲ್ಲಿದ್ದಲಿನಿಂದ ಪೇಂಟು, ಪರಿಮಳ, ರಾಸಾಯನಿಕಗಳಿಂದ ಹಿಡಿದು ಅನೇಕ ಬಗೆಯ ಸಂಶ್ಲೇಷಣಾತ್ಮಕವಾದ ತೈಲಗಳನ್ನೂ ಉತ್ಪಾದಿಸಬಹುದು.

ಆದರೆ ಕೆಲಸ ಅಷ್ಟು ಸುಲಭವಾಗಿಲ್ಲ. ಯಾವುದೋ ಪುರಾತನ ಕಾಲದಲ್ಲಿ ಉತ್ಪಾತಗಳು ಸಂಭವಿಸಿ ಗಿಡ ಮರಗಳು ಭೂಗರ್ಭದಲ್ಲಿ ಸೇರಿ ಹೋಗಿ ಅಪಾರವಾದ ಒತ್ತಡ ಹಾಗೂ ಉಷ್ಣತೆಗಳಿಂದ ಸೃಷ್ಟಿಯಾದ ಈ ಕಲ್ಲಿದ್ದಲು ಮಾನವನ ಪ ಯತ ಗಳಿಗೆ ಹಾಗೆಯೆ ಮಣಿಯುವಂತದಲ

ಲಿಗ್ನೈಟ್, ಬಿಟುಮಿನ್, ಆಂಥ್ರಸೈಟ್ ಗಳಂತಹ ಕಲ್ಲಿದ್ದಲಿಗಳ ವಿಧಗಳಲ್ಲಿ ಇಂಗಾಲದ ಪ್ರಮಾಣ ಏಕಪ್ರಕಾರವಾಗಿಲ್ಲ. ಕ್ಲೋರಿನ್, ಗಂಧಕಗಳಂತಹ ರಾಸಾಯನಿಕಗಳ ಪ್ರಮಾಣವೂ ಒಂದೇ ತೆರನಾಗಿರುವುದಿಲ್ಲ. ಇದು ವಿಜ್ಞಾನಿಗಳ ಈ ಕಾರ್ಯವನ್ನು ಇನ್ನೂ ಕಠಿಣಗೊಳಿಸುತ್ತದೆ.

ಆದರೆ ಯಾವುದೂ ಅಸಾಧ್ಯವಲ್ಲ. ಭೂಗರ್ಭದಿಂದ ತೆಗೆದ ಕಲ್ಲಿದ್ದಲನ್ನು ವಿವಿಧ ಔದ್ಯಮಿಕ ಅಗತ್ಯಗಳಿಗೆ ಅನುಕೂಲವಾಗುವಂತೆ ಪರಿವರ್ತಿಸಲು ಪ್ರಪಂಚದಾದ್ಯಂತ ವಿಜ್ಞಾನಿಗಳು ಶ್ರಮಿ-ಸುತ್ತಿದ್ದಾರೆ. ಅಮೇರಿಕವೊಂದರಲ್ಲೆ ಅದಕ್ಕೆ ಸಂಬಂಧಿಸಿದ ಏಳು ನೂರು ಅರ್ಜಿಗಳು ಅಲ್ಲಿನ ಕಲ್ಲಿದ್ದಲು ಸಂಶೋಧನಾ ಸಂಸ್ಥೆಯೆದುರು ಬಂದಿವೆ. ಸಂಸ್ಥೆಯ ತಜ್ಞರು ಅವೆಲ್ಲವುಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಒಟ್ಟು ನಾಲ್ವತ್ತು ಯೋಜನೆಗಳಿಗೆ ಧನಸಹಾಯ ನೀಡಲು ಸಮ್ಮತಿಸಿದೆ.

ಏಳುನೂರು ಯೋಜನೆಗಳ ಪೈಕಿ ಕೇವಲ ನಾಲ್ವತ್ತು ಯೋಜನೆಗಳಿಗೆ ಧನಸಹಾಯವೇ ? ಎಂದು ನೀವು ಹುಬ್ಬೇರಿಸಬಹುದು. ಆದರೆ ವಸ್ತುಸ್ಥಿತಿ ಬೇರೆಯೇ ಇದೆ. ನಾಲ್ವತ್ತು ಏಕೆ, ಕೇವಲ ಹತ್ತು ಯೋಜನೆಗಳಿಗೆ ಧನಸಹಾಯ ನೀಡುವುದೂ ಅನೇಕ ದೇಶಗಳಿಗೆ ಸಾಧ್ಯವಾಗಲಿ-ಕ್ಕಿಲ್ಲ. ಇಂಥ ಒಂದೊಂದು ಯೋಜನೆಗೂ ತಗಲುವ ವೆಚ್ಚ ಅಪಾರ. ಕಲ್ಲಿದ್ದಲಿಯ ಬಗೆಗೆ ಉಪಯುಕ್ತವಾದ ಸಂಶೋಧನೆಗಳನ್ನು ನಡೆಸುವುದರಲ್ಲಿ ಇರುವ ತೊಂದರೆಯೆಂದರೆ ಸಂಶೋಧನೆ ಲಾಭದಾಯಕವೆಂದು ಪ್ರಯೋಗಶಾಲೆಯಲ್ಲಿ ತೋರಿ ಬಂದರೂ ಅದನ್ನು ಬೃಹತ್ಪ್ರಮಾಣದಲ್ಲಿ ಕಾರ್ಯಗತಗೊಳಿಸಿದಾಗ ಹಾನಿಕರವೆಂದು ಸಿದ್ಧವಾಗಬಹುದು. ಆದ್ದರಿಂದ ಯಾವುದೊಂದು ಸಂಶೋಧನೆಯಾಗಲಿ ಯೋಜನೆಯಾಗಲಿ ವ್ಯಾವಹಾರಿಕವಾಗುವುದೋ ಇಲ್ಲವೋ ಎಂಬುದನ್ನು ನೋಡಬೇಕಾದರೆ ಮೂರು ಕೋಟಿ ಡಾಲರುಗಳನ್ನು ಖರ್ಚು ಮಾಡಿ ಪೈಲಟ್ ಪ್ಲಾಂಟನ್ನೇ ನಿರ್ಮಿಸಬೇಕು.

ಕಲ್ಲಿದ್ದಲಿಯಿಂದ ಸರಳವಾಗಿ ಅನಿಲವನ್ನು-ತ್ಪಾದಿಸಲು ವಿಜ್ಞಾನಿಗಳು ಪ್ರಯತ್ನಿಸುತ್ತಿ-

ದ್ದಾರೆ. ಅಮೇರಿಕದ ಅನಿಲೋತ್ಪಾದಕ ಸಂಘ-ಗಳು ಕಲ್ಲಿದ್ದಲಿಯಿಂದ ಒಳ್ಳೆ ದರ್ಜೆಯ ಗ್ಯಾಸನ್ನು ತಯಾರಿಸುವ ಯೋಜನೆಯನ್ನು ರೂಪಿಸುತ್ತಿದ್ದು ಹೀಗೆ ತಯಾರಿಸಿದ ಅನಿಲ ಇನ್ನು ಮೂರು ವರ್ಷಗಳಲ್ಲಿ ಅಲ್ಲಿ ವಾಣಿಜ್ಯ ತಳಪದಿಯ ಮೇಲೆ ಲಭ್ಯವಾಗಬಹುದು.

ಆದರೆ ತೈಲದ ಬೆಲೆಯೇರಿಕೆಯ ಬಿಸಿ ತಟ್ಟಿರುವ ಅಮೇರಿಕದ ಔದ್ಯಮಿಕ ರಂಗ ಅಲ್ಲಿಯವರೆಗೆ ಕಾಯಬೇಕಿಲ್ಲ. ಎರಡು ಖಾಸಗಿ ಕಂಪೆನಿಗಳು ಒಂದು ನೂರ ಅರವತ್ತು ಕೋಟಿ ಡಾಲರುಗಳ (ಸುಮಾರು ಹನ್ನೆರಡು ನೂರು ಕೋಟಿ ರೂಪಾಯಿಗಳು) ವೆಚ್ಚದಿಂದ ನಿರ್ಮಿಸುತ್ತಿರುವ ಎರಡು ಕಾರಖಾನೆಗಳು ಇದೇ ವರ್ಷ ಪೂರ್ತಿ-ಗೊಳ್ಳುವ ನಿರೀಕ್ಷೆಯಿದೆ. ಅವು ಮೊದಲು ಕಲ್ಲಿದ್ದಲಿಯಿಂದ ಅನಿಲವನ್ನು ನಿರ್ಮಿಸುತ್ತವೆ. ಈ ಅನಿಲಕ್ಕೆ ಮೀಥೇನ್ ವಾಯುವನ್ನು ಬಳಸಿ ಅದರ ಔಷ್ಣಿಕ ಮೌಲ್ಯ (heat value) ವನ್ನು ಹೆಚ್ಚಿಸಲಾಗುವುದು. ಅವು ಪೂರ್ಣವಾಗಿ ಕಾರ್ಯಪ್ರವೃತ್ತವಾದಾಗ ಪ್ರತಿದಿನ ಐವತ್ತು ನಾಲ್ಕು ಕೋಟಿ ಘನ ಅಡಿಗಳಷ್ಟು ಅನಿಲ ವನ್ನು ಉದ್ದಿಮೆಗಳಿಗೆ ಪೂರೈಸುವವು.

ಕಲ್ಲಿದ್ದಲಿಯ ಸಂಶೋಧನೆ ಸರಕಾರ ಹಾಗೂ ಖಾಸಗಿರಂಗಕ್ಕೆ ಮಾತ್ರ ಸೀಮಿತವಾಗಿಲ್ಲ. ವೆಸ್ಟ್ ವರ್ಜೀನಿಯಗಳಂತಹ ವಿಶ್ವವಿದ್ಯಾನಿಲಯ-ಗಳ ಸಂಶೋಧಕರು ಕಂಪ್ಯೂಟರಿನ ಸಹಾಯದಿಂದ ವಿವಿಧ ಮಾದರಿಗಳನ್ನು ತಯಾರಿಸಿ ಯಾವ ಮಾದರಿ ಹೆಚ್ಚು ಸುಲಭವೂ ವ್ಯಾವಹಾರಿಕವೂ ಆಗುತ್ತದೆಂದು ಆಸಕ್ತ ವಲಯಗಳಿಗೆ ಸೂಚಿಸು-ತ್ತಿದ್ದಾರೆ.

ಕಲ್ಲಿದ್ದಲನ್ನು ಅಗೆದು ತೆಗೆದು ಕಾರಖಾನೆಗೆ ಸಾಗಿಸಲು ಬರುವ ವೆಚ್ಚವನ್ನು ತಪ್ಪಿಸಲು ವಿಜ್ಞಾನಿಗಳು ಕಲ್ಲಿದ್ದಲನ್ನು ಭೂಗರ್ಭದಲ್ಲಿಯೇ ಅನಿಲವಾಗಿ ರೂಪಾಂತರಿಸಲು ಯೋಜನೆ-ಗಳನ್ನು ಹಾಕಿಕೊಳ್ಳುತ್ತಿದ್ದಾರೆ.

ಕಲ್ಲಿದ್ದಲಿನಿಂದ ತೈಲವನ್ನು ತಯಾರಿಸ-ಬಹುದು. ಅಮೇರಿಕದ ಸದ್ಯದ ಯೋಜನೆ-ಗಳು ಸಫಲವಾದರೆ ಇನ್ನು ಎಂಟು ವರ್ಷಗಳಲ್ಲಿ ಪ್ರತಿದಿನ ಹತ್ತುಲಕ್ಷ ಬ್ಯಾರೆಲ್ಲುಗಳಷ್ಟು ತೈಲ-ವನ್ನು ಉತ್ಪಾದಿಸುವ ಗುರಿ ಪೂರ್ಣಗೊಳ್ಳ-ಬಹುದು.

ಕಲ್ಲಿದ್ದಲನ್ನು ತೈಲ ಹಾಗೂ ಅನಿಲವನ್ನಾಗಿ ಮಾರ್ಪಡಿಸಲು ಕಲ್ಲಿದ್ದಲನ್ನು ಅಗೆಯುವ ಹೊಸ ವಿಧಾನಗಳನ್ನು ರೂಪಿಸಲು ಹಾಗೂ ಕಲ್ಲಿದ್ದಲಿ-ಯನ್ನು ಪ್ರಚಲಿತ ರೂಪದಲ್ಲಿ ಉಪಯೋಗಿಸು-ವುದರಿಂದ ಉಂಟಾಗುತ್ತಿರುವ ವಾಯು-ಮಾಲಿನ್ಯವನ್ನು ಕಡಿಮೆಮಾಡಲು ಕೈಕೊಳ್ಳುವ ಸಂಶೋಧನೆಗಳಲ್ಲಿ ಪರಸ್ಪರ ಸಹಕರಿಸಲು ಇಂಗ್ಲೆಂಡ್–ಅಮೇರಿಕಗಳು ಕಳೆದ ವರ್ಷ ಒಂದು ಒಪ್ಪಂದವನ್ನು ಮಾಡಿಕೊಂಡವು. ಇವು ನಡೆ-ಸುವ ಸಂಶೋಧನೆಯ ಫಲ ಉಳಿದ ದೇಶಗಳಿಗೂ ದೊರೆಯುವುದು.

ಕಲ್ಲಿದ್ದಲಿನ ಅಪಾರವಾದ ಗಣಿಗಳನ್ನು ಹೊಂದಿದ ಮುಖ್ಯ ದೇಶಗಳಲ್ಲಿ ಭಾರತವೂ ಒಂದು, ಅದು ಪ್ರತಿವರ್ಷ ಒಂಭತ್ತು ಕೋಟಿ ಟನ್ನುಗಳಷ್ಟು ಕಲ್ಲಿದ್ದಲನ್ನು ಹೊರದೆಗೆಯು-ತ್ತಿದ್ದು ಒಟ್ಟು ಎಂಟು ನೂರು ಕೋಟಿ ಟನ್ನು-ಗಳಷ್ಟು ಸಂಗ್ರಹವನ್ನು ಹೊಂದಿದೆ. ಮುಂದು-ವರಿದ ದೇಶಗಳಲ್ಲಾಗುತ್ತಿರುವ ಸಂಶೋಧನೆ-ಯನ್ನು ಪಯೋಗಿಸಿಕೊಂಡು ನಮ್ಮ ದೇಶವೂ ಸದ್ಯದ ಬಿಕ್ಕಟ್ಟಿನಿಂದ ಪಾರಾಗಬಹುದು. ✡

ಆಧಾರ : 'ಸ್ಪಾನ್'



ಸಂದರ್ಶನಕ್ಕಾಗಿ ಕರೆದ ಓರ್ವ ಅಭ್ಯರ್ಥಿಯನ್ನು ಲೋಕಸೇವಾ ಆಯೋಗದ ಸದಸ್ಯನೊಬ್ಬ ಪ್ರಶ್ನಿಸಿದ: "ಇದೆಂಟಿಸ್ ಫಾಚರ್ನಾ ಜವಾನ್ ಎಂಬುದರ ಅರ್ಥ-ವೇನೋ?" "ಈ ಜನ್ಮದಲ್ಲಿ ನನಗೆ ಇಲ್ಲಿ ನೌಕರಿ ಸಿಗೋದಿಲ್ಲಾ ಅಂತ ಸಾರ್" ಅಭ್ಯರ್ಥಿ ಉತ್ತರಿಸಿದ.

★ ಎಚ್ಚೆಚ್

# ದುಕೋಬರ್ಸ್

ಏಥ್ಯಾಪ್ನದ ಉರಿಬಿಸಿಲು. ಗ್ರಾಮದಲ್ಲಿ ಒಂದೂ ನರಪಿಳ್ಳೆಯ ಸಂಚಾರವಿಲ್ಲ. ದೂರದಿಂದ ನಡೆದುಬಂದ ಗಂಡು ಹೆಣ್ಣುಗಳ ತಂಡ ಡಬ್ಬಗಳಲ್ಲಿ ಹೊತ್ತು ತಂದ ಸೀಮೆ ಎಣ್ಣೆಯನ್ನು ಮನೆಗಳ ಮೇಲೆ ಸುರಿಯಿತು. ಮುಖಂಡ ಸೊಟ್ಟ ಕೊಳ್ಳಿಯಿಂದ ಎಲ್ಲ ಮನೆಗಳಿಗೂ ಬೆಂಕೆಯಿಟ್ಟ. ನಿಮಿಷಾರ್ಧದಲ್ಲಿ ಇಡಿ ಹಳ್ಳಿಯೆ ಉರಿದು ಬೂದಿಯಾಗುತ್ತಿದ್ದಂತೆ ನೆರೆದವರೆಲ್ಲಾ ಕೇಕೆ ಹಾಕಿ ನಕ್ಕರು. ಅಷ್ಟರಿಂದ ತೃಪ್ತರಾಗದ ಅವರು ತೊಟ್ಟ ಬಟ್ಟೆಗಳನ್ನೆಲ್ಲಾ ಬೆಂಕಿಗೆ ಕಿತ್ತೊಗೆದು ವಿಜಯಶಾಲಿಗಳಂತೆ ಜಯಘೋಷ ಮಾಡುತ್ತಾ ಕುಣಿಯಲಾರಂಭಿಸಿದರು.

ಇಂಥ ವಿಕ್ಷಿಪ್ತ ದೃಶ್ಯ ಕೆನಡಾದ ಹಳ್ಳಿ ಪಟ್ಟಣಗಳಲ್ಲಿ ಸುಮಾರು ಹದಿನೈದು ವರ್ಷಗಳ ಹಿಂದಿನ ವರೆಗೂ ವಾಮಪಂಥೀಯ ಧಾರ್ಮಿಕ ಸಂಘಟನೆಯಿಂದ ನಡೆಯುತ್ತಿತ್ತು. ಸೃಷ್ಟಿಕರ್ತನಿಗಲ್ಲದೆ ಮತ್ತಾವ ಶಕ್ತಿಗೂ ತಲೆಬಾಗಬಾರದೆಂಬ ಛಲ ಈ ಸಂಘಟನೆಗೆ ಸೇರಿದವರಲ್ಲಿ ಬಲವತ್ತರವಾಗಿತ್ತು. ಧರ್ಮ ಪ್ರಚಾರಕ್ಕಾಗಿ, ತತ್ತ್ವಗಳ ಅನುಷ್ಠಾನಕ್ಕಾಗಿ ಅವರು ಗಂಡು–ಹೆಣ್ಣು, ಹಿರಿಯ–ಕಿರಿಯ, ಮೇಲು–ಕೀಳು ಎಂಬ ಭೇದಭಾವವಿಲ್ಲದೆ ಹಗಲಿರುಳು ದುಡಿಯುತ್ತಿದ್ದರು.

ಈ ಪಂಥದ ಹೆಸರು ದುಕೋಬರ್ಸ್. ಇವರು ಹೊಸದಾಗಿ ನೆಲೆಸಿರುವ ಕೆನಡಾದ ಬ್ರಿಟಿಷ್ ಕೊಲಂಬಿಯ ಪ್ರಾಂತ್ಯಗಳಲ್ಲಿ ಸರಕಾರದ ಬಗೆಗೆ ವಿರೋಧಿ ಭಾವನೆ ಮತ್ತು ಪ್ರಾಪಂಚಿಕ ಸಂಕೋಲೆಗಳಿಂದ ವಿಮುಕ್ತರಾಗಬೇಕೆಂಬುವ ಚಳುವಳಿ ತೀವ್ರವಾಗಿ ಬೆಳೆದಿತ್ತು. ಸರಕಾರದ ಆಡಳಿತವನ್ನು ಧಿಕ್ಕರಿಸಿ ಕಾನೂನು ಕಟ್ಟಳೆಗಳನ್ನು ಮುರಿದು ಭಯೋತ್ಪಾದನೆಯಲ್ಲಿ ತೊಡಗಿದ್ದ ಈ ಧಾರ್ಮಿಕ ಸಂಘಟನೆ ಕೆನಡಾ ಸರಕಾರಕ್ಕೆ ಭಾರಿ ತಲೆನೋವಾಗಿತ್ತು. ಅವರಂತೂ ಹಾಳಾಗಿ ಹೋಗಲಿ, ಕೊನೆಯ ಪಕ್ಷ ಅವರ ಮಕ್ಕಳಿಗಾದರೂ ಒಳ್ಳೆಯ ವಿದ್ಯಾಭ್ಯಾಸ ದೊರೆಯುವಂತೆ ಮಾಡಿ ಸುಸಂಸ್ಕೃತ, ಸಭ್ಯ ನಾಗರಿಕರನ್ನಾಗಿ ಮಾಡಬೇಕೆಂದು ಕೆನಡಾ ಸರಕಾರ ಪ್ರಯತ್ನಿಸಿದರೆ ದುಕೋಬರ್ಸ್ ಸಂಸ್ಥೆಯವರು ನಾನಾ ವಿಧಗಳಿಂದ ಅದಕ್ಕೂ ತಣ್ಣೀರೆರಚಿದರು. ಶಾಲೆಗಳಿಗಾಗಿ ನಿರ್ಮಿಸಿದ ಕಟ್ಟಡಗಳನ್ನೂ ದುಕೋಬರ್ಸ್‌ಗಳು ತಮ್ಮ ಸಂಸ್ಥೆಯ ಪ್ರಚಾರಕ್ಕೆಂದು ಬಳಸುತ್ತಿದ್ದರು. ಮಕ್ಕಳನ್ನು ಶಾಲೆಗೆ ಕಳುಹಿಸುವ ಧೈರ್ಯ ಅನೇಕರಿಗೆ ಆಗುತ್ತಿರಲಿಲ್ಲ. ಶಾಲೆಗೆ ಬರುತ್ತಿದ್ದ ಉಪಾಧ್ಯಾಯರು ಜೀವವುಳಿಸಿಕೊಳ್ಳಲು ಕೆಲಸಕ್ಕೆ ರಾಜೀನಾಮೆ ಕೊಟ್ಟು ಊರು ತೊರೆಯುವ ಪ್ರಸಂಗ ಮೇಲಿಂದ ಮೇಲೆ ಬರುತ್ತಿತ್ತು. ಯಾರಾದರೂ ಕಾನೂನಿಗೆ ಹೆದರಿ ತೆರಿಗೆ ಕೊಟ್ಟರೆ ಅಥವಾ ಮಕ್ಕಳನ್ನು ಶಾಲೆಗೆ ಕಳುಹಿಸಿದರೆ ಮರುದಿನ ಅವರ ಮನೆ ಸುಟ್ಟು ಬೂದಿಯಾಗುತ್ತಿತ್ತು.

ದುಕೋಬರ್ಸ್ ಎಂದರೆ ಶಕ್ತಿದೈತ್ಯರು

ಸಿಂಪರ್ಥ. ಕ್ರಿ. ಶ. ೧೮೯೯ರಲ್ಲಿ ಪೂರ್ವ ಯುರೋಪಿನ ದೇಶಗಳಿಂದ ಕೆನಡಾಕ್ಕೆ ವಲಸೆ ಬಂದ ಈ ಜನರ ಚಳುವಳಿ ಉಗ್ರ ರೂಪ ತಾಳುವ ಹೊತ್ತಿಗೆ ಆ ಸಂಘಟನೆಗೆ ಸೇರಿದವರ ಸಂಖ್ಯೆ ಹದಿನಾಲ್ಕು ಸಾವಿರಕ್ಕೇರಿತು. ಅವರ ಚಟುವಟಿಕೆಗಳೆಲ್ಲ ಬಹು ಗುಪ್ತವಾಗಿ ನಡೆಯುತ್ತಿದ್ದವು. ಈ ಬಗ್ಗೆ ತಾವು ಯಾರ ಮುಂದೆಯೂ ಬಾಯಿ ಬಿಡುವುದಿಲ್ಲವೆಂದು ಅವರ ಸದಸ್ಯರು ಪ್ರತಿಜ್ಞೆಯನ್ನು ಸ್ವೀಕರಿಸಿದ್ದರು. ಭಯೋತ್ಪಾದನ ಕಾರ್ಯಗಳಿಂದ ಸರಕಾರವನ್ನು ಬೆದರಿಸಿ ಕೃತಕವಾಗಿ ನಿರ್ಮಿಸಲಾದ ಸಮಾಜದ ಕಟ್ಟುಪಾಡುಗಳನ್ನು ಕಿತ್ತೊಗೆದು ಸಂಘದ ತತ್ತ್ವಗಳನ್ನು ಜಾರಿಗೆ ತರಬಹುದೆಂಬುದು ಅವರ ದೃಢನಂಬಿಕೆಯಾಗಿತ್ತು. ಅವರು ನಡೆಸುತ್ತಿದ್ದ ಘೋರ ಕೃತ್ಯಗಳನ್ನು ಕಣ್ಣಾರೆ ನೋಡಿದವರಾರೂ ನ್ಯಾಯಾಲಯದಲ್ಲಿ ಆ ಬಗ್ಗೆ ಸಾಕ್ಷ್ಯ ನುಡಿಯಲು ಹಿಂಜರಿಯುವಷ್ಟು ದುಕೋಬರ್ಸ್ ಸಂಸ್ಥೆ ಭಯಾವಹವಾಗಿತ್ತು. ಕೆನಡಾ ಸರಕಾರ ಯಾವ ಕಾರ್ಯಕ್ರಮಗಳನ್ನು ಕೈಕೊಂಡರೂ ಅವರನ್ನು ದಾರಿಗೆ ತರಲಾಗಲಿಲ್ಲ. ಬದಲು ಆ ಸಂಘಟನೆ ಮೊದಲಿಗಿಂತ ಹೆಚ್ಚು ಶಕ್ತಿಯುತವಾಗುತ್ತಾ ನಡೆಯಿತು.

೧೯೨೪ರವರೆಗೆ ಗುಪ್ತವಾಗಿ ಅಲ್ಲಲ್ಲಿ ನಡೆಯುತ್ತಿದ್ದ ಸಮಾಜಘಾತುಕ ಕಾರ್ಯಗಳು ಬಹಿರಂಗವಾಗಿ ನಡೆಯಲಾರಂಭಿಸಿದವು. ಹಿಂಸಾಚಾರಿಗಳ ಭಯೋತ್ಪಾದಕ ಕಾರ್ಯಗಳನ್ನು ಸಹಿಸದ ಸರಕಾರ ಆಗ ಅವರ ದಮನಕ್ಕಾಗಿ ಉಗ್ರವಾದ ಕಾರ್ಯಕ್ರಮ ಕೈಕೊಂಡಿತು. ಒಂದೇ ವಾರದಲ್ಲಿ ಅವರ ವಿನಾಶ ಕೃತ್ಯಗಳೆಲ್ಲಾ ದಮನವಾಗುವಲ್ಲದೆ ಸಂಘದ ನೂರಾರು ಜನರನ್ನು ಬಂಧಿಸಲಾಯಿತು. ಇದೇ ಸಮಯದಲ್ಲಿ ದುಕೋಬರ್ಸ್‌ಗಳ ಪ್ರಮುಖ ಮುಖಂಡನಾಗಿದ್ದ ಪೀಟರ್ ಲಾರ್ಡ್ಲಿ ಸತ್ತುಹೋದ. ನಾಯಕನ ಅಕಾಲಿಕ ಮರಣದಿಂದ ತತ್ತರಿಸಿಹೋದ ತೀವ್ರಗಾಮಿಗಳು ಸರಕಾರವೇ ಅವನನ್ನು ಕೊಂದಿತೆಂದು ಕೂಗೆಬ್ಬಿಸಿದರು. ಅದರ ಬಗ್ಗೆ ವಿಚಾರಿಸುವ ಧೈರ್ಯ ಯಾರಿಗೂ ಇರಲಿಲ್ಲ. ಸರಕಾರ ಅವನ ಸಾವಿನಲ್ಲಿ ತನ್ನ ಕೈವಾಡವಿಲ್ಲವೆಂದು ಪದೆ ಪದೆ ಹೇಳಿದರೂ ಅವರು ಕೆನಡಾ ಸರಕಾರವನ್ನು ಟೀಕಿಸುತ್ತಲೇ ಇದ್ದರು.

ಈ ಸಮಯದಲ್ಲಿ ವ್ಯಾಪಕವಾದ ಸರಕಾರ ವಿರೋಧಿ ಚಟುವಟಿಕೆಗಳನ್ನು ದುಕೊಬರ್‌ಗಳು ನಡೆಸದಿದ್ದರೂ ಆಗಾಗ್ಯೆ ಪ್ರಾಂತದಾದ್ಯಂತ ನಡೆಯುತ್ತಿದ್ದ ಲೂಟಿ, ಸುಲಿಗೆ, ಬಾಂಬ್ ಆಸ್ಫೋಟನೆಗಳಲ್ಲಿ ಅವರ ಕೈವಾಡವಿದ್ದೇಯಿತ್ತು. ಮೂವತ್ತೈದು ವರ್ಷಗಳವರೆಗೆ ಹೆಚ್ಚುಕಡಿಮೆ ಸ್ತಬ್ಧವಾಗಿದ್ದ ಅವರ ಚಟುವಟಿಕೆಗಳು ಪುನಃ ನಡೆಯಲಾರಂಭಿಸಿ ೧೯೬೧ರಲ್ಲಿ ಬ್ರಿಟಿಷ್ ಕೊಲಂಬಿಯ ಪ್ರಾಂತದ ಕೂಟೆನೆ ಪರ್ವತ ಶ್ರೇಣಿಯ ಉದ್ದಕ್ಕೂ ಇರುವ ನಗರ ಗ್ರಾಮಗಳಲ್ಲಿ ಬಾಂಬುಗಳು ಸ್ಫೋಟವಾಗುವಂತಾಯಿತು. ಅನಿರೀಕ್ಷಿತವಾಗಿ ರಾಷ್ಟ್ರೀಯ ಹೆದ್ದಾರಿಗಳು, ರೈಲ್ವೆ ಮಾರ್ಗಗಳು, ಪ್ರಮುಖ ಸೇತುವೆಗಳು ನೆಲಸಮವಾದವು. ಪಂಥೀಯರು ವಾಸಿಸದ ನಗರದ ವಿದ್ಯುಚ್ಛಕ್ತಿ ಸರಬರಾಜು ಕಡಿದು ಹೋಯಿತು. ಹೀಗೆ ವಿನಾಶಕಾರಿ ಕೃತ್ಯಗಳಿಂದ ಜನಗಳಿಗೆ ನೆಮ್ಮದಿಯಿಂದ ಬಾಳಲಾಗಲಿಲ್ಲ. ದುಕೋಬರ್‌ಗಳನ್ನು ಕಂಡವರೆಲ್ಲರೂ ಜೀವಭಯದಿಂದ ನಡುಗುತ್ತಿದ್ದರು. ಅವರನ್ನು ಎದುರು ಹಾಕಿಕೊಳ್ಳುವ ಧೈರ್ಯ ಯಾರಿಗೂ ಇರಲಿಲ್ಲ. ಈ ಸಂಘಟನೆಯಿಂದಾಗಿ ಸರಕಾರಿ ತೆರಿಗೆ ಕೊಡುವಂತೆ ಅಥವಾ ಸರಕಾರಿ ಕಾನೂನುಗಳನ್ನು ಪಾಲಿಸುವಂತೆ ಒತ್ತಾಯಿಸುವ ಧೈರ್ಯ ಸರಕಾರಿ ಅಧಿಕಾರಿಗಳಿಗಾಗುತ್ತಿರಲಿಲ್ಲ. ಈ ಸಂಸ್ಥೆಯ ಸದಸ್ಯರಿಂದ ಕೊಲೆ ಸುಲಿಗೆಗಳು ನಡೆದ ವರದಿ ಯಾವರೂ ಅಪರಾಧಿಗಳನ್ನು ಪತ್ತೆಮಾಡಿ ಶಿಕ್ಷಿಸುವ ಕಾರ್ಯಕ್ಕೆ ಪೋಲೀಸರು ಕೈ ಹಾಕುತ್ತಿರಲಿಲ್ಲ.

ಅವರ ಹಾವಳಿಯಿಂದ ಜನ ನೆಮ್ಮದಿಯಿಂದ ಬಾಳುವುದೇ ಕಷ್ಟವಾಗಿತ್ತು. ಮೂವತ್ತೈದು ವರ್ಷಗಳ ಅವಧಿಯಲ್ಲಿ ಸಾವಿರಕ್ಕಿಂತಲೂ ಹೆಚ್ಚು ಲೂಟಿ ಪ್ರಕರಣಗಳು ನಡೆದವು. ಹಲವಾರು ಜನ ಪ್ರಾಣ ಕಳೆದುಕೊಂಡರು. ಖಾಸಗಿ ಮತ್ತು ಸರಕಾರಿ ಆಸ್ತಿಪಾಸ್ತಿಗಳಿಗೆ ಸುಮಾರು ಇಪ್ಪತ್ತು ಕೋಟಿಗಿಂತಲೂ ಹೆಚ್ಚು ನಷ್ಟವುಂಟಾಗಿತ್ತು. ಆದರೆ ಒಂದು ಪ್ರಕರಣದಲ್ಲೂ

ತಪ್ಪಿತಸ್ಥರಿಗೆ ಶಿಕ್ಷೆಯಾಗಿರಲಿಲ್ಲ.

ಇವರ ದುಷ್ಕೃತ್ಯಗಳನ್ನು ಹೀಗೆಯೇ ಸಹಿಸಿಕೊಂಡು ಹೋಗುವುದು ಅಸಾಧ್ಯವಾದಾಗ ಕೆನಡಾ ಸರಕಾರ ಅವರನ್ನು ದಮನಗೊಳಿಸಲು "ದುಕೋಬರ್ ಪಡೆ"ಯೆಂಬ ವಿಶೇಷ ಪಡೆಯೊಂದನ್ನು ರಚಿಸಿತು. ಈ ಪಡೆಯೊಂದಿಗೆ ಮಿಲಿಟರಿ, ಪೋಲೀಸ್ ದಳಗಳೂ ಒಟ್ಟುಗೂಡಿ ಭಯೋತ್ಪಾದಕರನ್ನು ನೆಲಸಮ ಮಾಡಲು ಸನ್ನದ್ಧವಾದವು. ನೂರಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ದೂಕೋಬರ್ಸ್ ನಾಯಕರನ್ನು ಬಂಧಿಸಲಾಯಿತು. ಅವರಿಗೆ ನ್ಯಾಯಾಲಯ ಹತ್ತು ವರ್ಷಗಳ ಕಠಿಣ ಶಿಕ್ಷೆ ನೀಡಿತು. ಈ ಪಂಥದವರು ತಮ್ಮ ವಿನಾಶಕಾರಿ ಕೃತ್ಯಗಳಿಗೆ ಮುಖ್ಯವಾಗಿ ಬೆಂಕಿಯನ್ನೇ ಬಳಸುತ್ತಿದ್ದುದರಿಂದ ಅವರಿಗಾಗಿಯೇ ಅಗ್ನಿನಿರೋಧಕವಾದ ಕಾರಾಗೃಹವನ್ನು ಕಟ್ಟಿಸಿ ಅಗಸಿಜ್‌ನಲ್ಲಿ ಬಂಧಿಸಿಡಲಾಯಿತು.

ವಾಮಾಚಾರಿಗಳ ಭಯೋತ್ಪಾದಕ ಚಟುವಟಿಕೆ ಈಗೇನು ಸ್ತಬ್ಧವಾಯಿತೆಂದು ಕೆನಡಾ ಸರಕಾರ ಭಾವಿಸಿತು. ಆದರೆ ಇದು ಶುದ್ಧ ಭ್ರಮೆಯೆಂದು ತಿಳಿದುಬರಲು ತಡವಾಗಲಿಲ್ಲ. ಒಂದು ದಿನ ನಗ್ನರಾದ ಸ್ತ್ರೀ–ಪುರುಷರು ಅಗಸಿಜ್ ಕಾರಾಗೃಹವನ್ನು ಮುತ್ತಿಗೆ ಹಾಕಿದ್ದನ್ನು ಕಂಡು ಅದಕ್ಕೆ ದಿಗಿಲಾಯಿತು. ಬಂಧನಕ್ಕೊಳಗಾದವರ ಕೌಟುಂಬಿಕ ಸದಸ್ಯರು ಮತ್ತು ಬಂಧು–ಬಳಗದವರು ಅಂದು ತಮ್ಮ ಮನೆಗಳಿಗೆ ಬೆಂಕಿ ಹಚ್ಚಿ ಬಟ್ಟೆ ಕಿತ್ತೊಗೆದು ನಗ್ನರಾಗಿ ಅಗಸಿಜ್‌ನತ್ತ ಧಾವಿಸಿ ಬಂದಿದ್ದರು. ಆದರೆ ಸರಕಾರ ಕಬ್ಬಿಣದ ಕೈಯಿಂದ ಮಾರುತ್ತರ ಕೊಟ್ಟಿದ್ದರಿಂದ ಅವರ ಆಟ ನಡೆಯಲಿಲ್ಲ. ಕ್ರಮೇಣವಾಗಿ ಪಂಥದ ಚಟುವಟಿಕೆಗಳೆಲ್ಲವೂ ನೆಲಸಮವಾದವು.

೧೯೬೪ರಲ್ಲಿ 'ದೇವರ ಹೆಸರಿನಲ್ಲಿ ಭಯೋತ್ಪಾದನೆ' ಎಂಬ ಪುಸ್ತಕ ಹೊರಬಂತು. ಅದರಲ್ಲಿ ದುಕೋಬರ್ಸ್‌ನ ಭಯೋತ್ಪಾದಕ ಚಟುವಟಿಕೆಗಳನ್ನೂ ಅದರಿಂದ ಜನರಿಗುಂಟಾದ ಸಾವು ನೋವುಗಳನ್ನೂ ಅಂಕಿಸಂಖ್ಯೆಗಳ ಸಮೇತವಾಗಿ ವಿವೇಚಿಸಲಾಗಿತ್ತು. ದುಕೋಬರ್ಸ್ ಪಂಥದವರು ತಮ್ಮ ಮುಖಂಡನಾದ ಪೀಟರ್ ಅಂಗ್ಲಿಯನ್ನು ಸರಕಾರ ಜೇಲಿನಲ್ಲಿ ಕೊಂದಿದೆಯೆಂದು ಹುಯಿಲೆಬ್ಬಿಸಿದ್ದರು. ಇದು ಸತ್ಯವಲ್ಲ, ಆತ ಇನ್ನೂ ಜೀವಂತವಾಗಿಯೇ ಇದ್ದಾನೆ ಎಂಬುದನ್ನು ಆ ಪುಸ್ತಕದಲ್ಲಿ ಸಪ್ರಮಾಣವಾಗಿ ಸಿದ್ಧ ಮಾಡಿ ತೋರಿಸಲಾಗಿತ್ತು. ನಂತರ ಆ ಹುಯಿಲು ಹೇಳಹೆಸರಿಲ್ಲದಾಯಿತು. ಈ ಪುಸ್ತಕ ಎಷ್ಟು ಪ್ರಭಾವಿಯಾಗಿತ್ತೆಂದರೆ ಇದನ್ನೋದಿದ ಕೈದಿಗಳು ಹಳೆಯ ಹಿಂಸಾಚಾರದ ಮಾರ್ಗ ತೊರೆದು ಹೊಸ ಜೀವನ ನಡೆಸಲು ನಿರ್ಧರಿಸಿದರು. ಕೆನಡಾ ಸರಕಾರ ಕೈದಿಗಳನ್ನು ಬಹು ಚೆನ್ನಾಗಿ ನೋಡಿಕೊಂಡಿತು. ವಿದ್ಯಾಭ್ಯಾಸದ ಲವಲವಿಕೆಯುಳ್ಳ ಅನಕ್ಷರಸ್ಥರಿಗಾಗಿ ಉಪಾಧ್ಯಾಯರನ್ನು ನಿಯಮಿಸಿತು. ಕಾಲಾಂತರದಲ್ಲಿ ದುಕೋಬರ್ಸ್ ಪಂಥದವರ ಮನಃಪರಿವರ್ತನೆಯಾದದ್ದನ್ನು ಕಂಡು ಸರಕಾರ ಅವರ ಶಿಕ್ಷೆಯನ್ನು ಮೊಟಕುಗೊಳಿಸಿತಲ್ಲದೆ ಬಿಡುಗಡೆಗೊಂಡವರಿಗೆ ಸ್ವಗ್ರಾಮದಲ್ಲಿ ಮನೆ ಕಟ್ಟಲು ನೆರವು ನೀಡಿತು. ಹೀಗಾಗಿ ನಾಲ್ಕು ವರ್ಷಗಳ ವರೆಗೆ ಹಾಳು ಬಿದ್ದಿದ್ದ ಕೂಟೆನೆ ಗ್ರಾಮಕ್ಕೆ ಹೊಸ ಕಳೆ ಬರುವುದರೊಂದಿಗೆ ಆ ದೇಶದ ಇತಿಹಾಸದ ಒಂದು ಕರಾಳ ಅಧ್ಯಾಯ ಕೊನೆಗೊಂಡಿತು. ✿



## ಸೆರಗು ಹಿಡಿದಾನು

ಸಂಗಾತಿ ನಾನು ಸಂಜೇಲಿ ನೀರಿಗೋದೆ
ಸಿಂಗಾನಲ್ಲೂರ ಕುದುರೆ ಒಂದಿಗೆ ಬರೊ। ಗೌಡಾನು
ಸಂಗಾತಿ ಸೆರಗ ಹಿಡಿದಾನು
ಅಂಜಬ್ಯಾಡ ಸಂಗಾತಿ ನನ್ನೂರ ಗೌಡನು
ಗುಂಡಾಲ ಪ್ಯಾಟೆ ಗುರಿಕಾರ। ತಮ್ಮಯ್ಯ
ಸರಸಾಕ ಸೆರಗಾ ಹಿಡಿದಾನು

–ಜಾನಪದ ಗೀತ

# ಮಡಿದಳಾ ಮಹಾತಾಯಿ

ರಾ. ಶಿ. ನಾರಾಯಣ

ದಸರಾ ರಜದಲ್ಲಿ ನನ್ನ ಸ್ನೇಹಿತನ ಬಲವಂತಕ್ಕೆ ಅವನ ಜೊತೆ ಕೆಲವು ದಿನ ಇರಲು ಹಾಗು ಕೊಡಗಿನ ಪ್ರಕೃತಿ ಸೌಂದರ್ಯವನ್ನು ಸವಿಯಲು ವಿರಾಜಪೇಟೆಗೆ ಹೋಗಿದ್ದೆ. ನನ್ನ ಸ್ನೇಹಿತನ ತಂದೆ ಸರಕಾರಿ ನೌಕರರಾಗಿದ್ದು ಒಂದು ಬಾಡಿಗೆಯ ಮನೆಯಲ್ಲಿದ್ದರು.

ವಿರಾಜಪೇಟೆಯನ್ನು ಒಂದೇ ದಿನದಲ್ಲಿ ಸುತ್ತಿದ ನನಗೇಕೊ ಊರು ತುಂಬಾ ಬೇಸರ ತರುವಂತೆನಿಸಿ ಉಳಿದ ದಿನಗಳನ್ನು ಮಡಕೇರಿ ಮತ್ತಿತರ ಕಡೆಗಳಲ್ಲಿ ಕಳೆಯಬೇಕೆಂದು ನಿರ್ಧರಿಸಿದೆ. ಅಂದು ನಾನು ಸ್ನೇಹಿತನ ಕೂಡ ಪೇಟೆಯನ್ನು ಸುತ್ತಿ ಮನೆಗೆ ಬಂದಾಗ ಮಧ್ಯಾಹ್ನವಾಗಿತ್ತು. ಬಂದವನೆ ಊಟ ಮುಗಿಸಿ ಕೈತೊಳೆಯಲು ಬಚ್ಚಲುಮನೆಯತ್ತ ನಡೆದೆ.

ಅಲ್ಲಿ ನನ್ನ ಸ್ನೇಹಿತನ ಅಕ್ಕ ಸ್ವಲ್ಪ ದೂರ ನಿಂತುಕೊಂಡು ಒಂದೇ ಸಮನೆ ದೂರದಲ್ಲಿದ್ದ ಕೋಳಿಯನ್ನೇ ನೆಟ್ಟ ದೃಷ್ಟಿಯಿಂದ ನೋಡುತ್ತಿದ್ದುದು ನನ್ನಲ್ಲಿ ಕುತೂಹಲವನ್ನುಂಟುಮಾಡಿತು. ಬೇಗ ಬೇಗ ಕೈ ತೊಳೆದುಕೊಂಡವನೆ ಓಡಿಹೋಗಿ ಅವಳು ನಿಂತಲ್ಲಿ ನಿಂತಕೊಂಡೆ.

ಅಷ್ಟರಲ್ಲಿ ನನ್ನ ಸ್ನೇಹಿತನೂ ಜೊತೆ ಸೇರಿದ. ದೂರದಲ್ಲಿ ಎಂಟು ಮರಿಗಳನ್ನು ಕಟ್ಟಿಕೊಂಡು ಹೇಂಟೆಯೊಂದು ಅವುಗಳ ಜೊತೆ ನಿಂತಿತ್ತು. ಅವಕ್ಕೆ ಸ್ವಲ್ಪ ದೂರದಲ್ಲಿ ಕರಿ ನಾಗರ ಹಾವೊಂದು ಹೆಡೆ ಬಿಚ್ಚಿ ಬುಸುಗುಡುತ್ತಿತ್ತು. ಮುಂದಿರುವ ಕೋಳಿಯು ಮರಿಗಳ ಮೇಲೆ ತನ್ನ ಸೂಕ್ಷ್ಮ ದೃಷ್ಟಿಯನ್ನು ಇಟ್ಟಿತ್ತು. ನಾವೆಲ್ಲಾ ಅಸಹಾಯಕರಂತೆ ೩–೪ ಮಾರು ದೂರ ನಿಂತು



ಅದನ್ನು ವೀಕ್ಷಿಸುತ್ತಿದ್ದೆವು. ಮನೆಯಲ್ಲಿ ದೊಡ್ಡವರು ಯಾರೂ ಇರಲಿಲ್ಲ.

ಕೋಳಿ ಒಂದೊಂದಾಗಿ ತನ್ನ ಮರಿಗಳನ್ನು ತನ್ನ ರೆಕ್ಕೆಯೊಳಕ್ಕೆ ಸೇರಿಸುತ್ತಲೇ ಇತ್ತು. ಆದರೆ ಆಕಸ್ಮಾತ್ತಾಗಿ ದೂರ ನಿಂತ ಒಂದು ಮರಿಯನ್ನು ತಾಯಿಗೆ ರೆಕ್ಕೆಯಲ್ಲಿ ಸೇರಿಸಿಕೊಳ್ಳಲಾಗಲಿಲ್ಲ. ಹಾವು ಸರಕ್ಕೆಂದು ಆ ಮರಿಯ ಕಡೆ ನುಗ್ಗಿ ಮರಿಯನ್ನು ಕಚ್ಚಿತು. ತನ್ನ ಮರಿಯೊಂದು ಹಾವಿಗೆ ಆಹುತಿಯಾದದ್ದನ್ನು ಕಂಡು ರೌದ್ರಾವತಾರ ತಾಳಿದ ತಾಯಿ ಕೋಳಿ ರೆಕ್ಕೆಯೊಳಗಿರುವ ಮರಿಗಳನ್ನು ಮರೆತು ಒಂದೇ ನೆಗೆತಕ್ಕೆ ಹಾವಿನ ಮೇಲೆ ಎರಗಿತು. ಹಾವು ಬುಸುಗುಟ್ಟುತ್ತಾ ಹೋರಾಟಕ್ಕೆ ಸಿದ್ಧವಾಯಿತು. ಕೋಳಿ ಒಂದೆರಡು ಸಲ ಹಾವಿನ ಮೇಲೆ ನೆಗೆದು ತನ್ನ ಕಾಲಿನಿಂದ ಹಾವನ್ನು ತಿವಿದು ಗಾಯಗೊಳಿಸಿತು. ಇತ್ತ ಮರಿಗಳು ಒಂದೇ ಸಮನೆ ಆಕ್ರಂದಿಸತೊಡಗಿದವು. ಮರಿಗಳ ಆರ್ತ ನಾದ ಕೋಳಿಗೆ ಕೇಳಿಸಲು ಅದು ಪುನಃ ಓಡಿ ಮರಿಗಳ ಬಳಿ ಬಂತು. ಆದರೆ ಚತುರ ಹಾವು ಮಾತ್ರ ಸರಕ್ಕನೆ ನುಗ್ಗಿ ಇನ್ನೂ ಒಂದು ಮರಿಯ ಬಲಿತೆಗೆದುಕೊಂಡಿತು. ಈಗಂತೂ ಆ ಕೋಳಿಗೆ ರೋಷ ಉಕ್ಕುತ್ತಿತ್ತು.

ಅವೆರಡೂ ಮತ್ತೆ ಹೋರಾಡತೊಡಗಿದವು. ಹಾವು ಮರಿಗಳನ್ನು ತಿನ್ನಲು ಬರುತ್ತಿತ್ತು; ಕೋಳಿಯು ಹಾವಿನ ಮೇಲೆರಗುತ್ತಿತ್ತು. ಹೀಗೆ ಹತ್ತು ನಿಮಿಷಗಳು ಕಳೆದಿರಬಹುದು. ನನ್ನ ಸ್ನೇಹಿತನ ತಂದೆಯವರು ಮನೆಗೆ ಬಂದು ಈ ದೃಶ್ಯವನ್ನು ನೋಡಿದರು. ಪುನಃ ಒಳಗೆ ಹೋಗಿ ಒಂದು ದಪ್ಪವಾದ ಕೋಲನ್ನು ತಂದು ಒಂದೇ ಏಟಿಗೆ ಹಾವಿನ ಕತೆಯನ್ನು ಮುಗಿಸಿದರು. ಸತ್ತುಬಿದ್ದ ಹಾವನ್ನು ಆ ಕೋಳಿ ತನ್ನ ಮನಸ್ಸು ತೃಪ್ತಿಯಾಗುವ ವರೆಗೂ ಕಚ್ಚಿ ಉಳಿದ ನಾಲ್ಕೇ ಮರಿಗಳನ್ನು ತನ್ನ ಪಕ್ಕದೊಳಗೆ ಇಟ್ಟುಕೊಂಡು ಮಹಾಯುದ್ಧವೊಂದನ್ನು ಜಯಿಸಿದ ವೀರನಂತೆ ಮನೆಯತ್ತ ಬಂತು. ನನ್ನ ಸ್ನೇಹಿತನ ತಂದೆಯವರು ಅದನ್ನು ಒಂದು ದೊಡ್ಡ ಬುಟ್ಟಿಯಲ್ಲಿ ಮುಚ್ಚಿದರು. ಅನಂತರ ಹಾವಿನ ಅಂತ್ಯಸಂಸ್ಕಾರವೂ ಆಯಿತು.

ಅಂದು ನಮಗೆಲ್ಲಾ ಹಾವು–ಕೋಳಿಯ ಜಗಳದ್ದೇ ಸುದ್ದಿ. ಬಣ್ಣ ಬಣ್ಣವಾಗಿ ಆ ಘಟನೆಯನ್ನು ವಿವರಿಸಿದ್ದೇ ವಿವರಿಸಿದ್ದು.

ಮಾರನೆಯ ದಿನ ಬೆಳಿಗ್ಗೆ ಎದ್ದು ನಾವು ಮುಚ್ಚಿದ್ದ ಬುಟ್ಟಿಯನ್ನು ತೆಗೆದಾಗ ತಾಯಿ ಕೋಳಿ ಮಾತ್ರ ಮಲಗಿತ್ತು. ಉಳಿದ ನಾಲ್ಕು ಮರಿಗಳು ಅದರ ಸುತ್ತೂ ಕೂಗುತ್ತಾ ಸುತ್ತುತ್ತಿದ್ದವು. ನಾನು ಒಂದು ಉದ್ದವಾದ ಕೋಲನ್ನು ತೆಗೆದುಕೊಂಡು ಆ ಕೋಳಿಯನ್ನು ಅಲುಗಾಡಿಸಿದೆ. ಜೀವವಿದ್ದ ಲಕ್ಷಣ ಕಂಡುಬರಲಿಲ್ಲ. ಹಾವಿನೊಡನೆ ಹೋರಾಡುವಾಗ ವಿಷದಂಶನದಿಂದ ಅದು ಮರಣಹೊಂದಿತ್ತೆನ್ನುವುದು ಸ್ಪಷ್ಟವೇ ಇತ್ತು. ಮರಿಗಳ ರಕ್ಷಣೆಗಾಗಿ ಅದು ತನ್ನ ಪ್ರಾಣವನ್ನೇ ಅರ್ಪಿಸಿತ್ತು. ✡



"ಪ್ರಿಯೆ, ನಿನಗೊಂದು ಒಳ್ಳೆ ಸುದ್ದಿ. ಇಂದೇ ನಾನು ಜೀವವಿಮೆ ಮಾಡಿಸಿದ್ದೇನೆ. ಇಂದಿನಿಂದ ನಿನ್ನ ಭವಿಷ್ಯ ಭದ್ರ."

"ಏನು ಭವಿಷ್ಯವೋ ಏನೋ. ನನ್ನ ಇನ್‌ಶೂರೆನ್ಸ್ ಮೊದಲು

# ಅವರು ಹೇಳಿದ್ದು

ಉಪಕಾರಿಗೆ ಮರದೂಷಿತನಪಕಾರಂ ಗೆಯ್ವನೇಂ ಬುದ್ಧೋಂದಿಚ್ಛೆ ಬಿಯ್ಯೇ?

—ಪೊನ್ನ

ಸುಜನರ ಲೋಕೋನ್ನತರ ಪರಹಿತರ ನಿಮ್ಮನ್ನರ ಬರವಾರ್ಗೆ
ಸುಖಮನುತ್ಪಾದಿಸದೋ —ನಾಗವರ್ಮ-೧

ಹಿರಿಯರ್ ಮುನ್ನಂ ಕೂಡಿದುದನೆಡೆಯೊಳೇಂ ಕಿಡಿಸುವರೇ? —ರನ್ನ

ಪರಮಾಣು ಪ್ರಮಾಣನೊರ್ವ ಕ್ಷತ್ರಿಯನ ಮೇಲೆ ಪರ್ವತಪ್ರಮಾಣ ಪಂಚಶತ ಪಿಶಾಚಂಗಳೆರ್ಗುವು. —ದುರ್ಗಸಿಂಹ

ಘಟವನೊಡೆದು ಬಯಲ ನೋಡಲೇಕೆ? ಆ ಘಟದೊಳಗಿಪ್ಪುದೇ ಬಯಲೆಂದರಿದೊಡೆ ಸಾಲದೆ?

—ದೇವರ ದಾಸಿಮಯ್ಯ

ಕಾದುವರೆಲ್ಲಂ ವೀರರೇ? —ನಯಸೇನ

ಗುಣಹೀನನ ಸಿರಿಯಿಂದಂ ಗುಣಿಗಳ ಬಡತನಮೆ ನಾಡೆಯುಂ ಲೇಸಲ್ತೇ?

—ನಾಗಚಂದ್ರ

ಸಿರಿಯುಸ್ಥಿರೆ, ವಾಗ್ವಧುವುಂ ಪರಿಕಿಸೆ, ವಾಚಾಳೆ!

—ಕರ್ಣಪಾರ್ಯ

ಕೋಡುಕೊಳ್ವಾತಂ ಪಿಂಡೆಯು ಕೊಳ್ಗೆ ಹೇಸುವನೆ?

—ಬ್ರಹ್ಮಶಿವ

ಸಾಗರವ ಮುಟ್ಟಿದ ನದಿಗಳೆಲ್ಲಾ ಸಾಗರವಪ್ಪವಯ್ಯಾ!

—ಸಕಲೇಶ ಮಾದರಸ

ಮುಂದೆ ಹುಟ್ಟುವ ಕೂಸಿಂಗೆ ಇಂದು ಮೊಲೆಯು ಕೊಡುವಂತೆ

—ಪ್ರಭುದೇವರು

ಚಂದ್ರಂಗೆ ರಾಹು ಅಡ್ಡ ಬಂದಲ್ಲಿ, ಅಂಬುಧಿ ಬೊಬ್ಬಿಟ್ಟಿತೇ? ಅಂಬುಧಿಯು ಮುನಿ ಅಪೋಶನವ ಕೊಂಬಲ್ಲಿ ಚಂದ್ರಮನಡ್ಡ ಬಂದನೆ?

—ಬಸವೇಶ್ವರ

ಮಹಾರೋಗದ ನಿವಾರಣೆ-೬

# ನಾಲಿಗೆ-ಟಾನ್ಸಿಲ್ ಕ್ಯಾನ್ಸರ್

ನಿಮ್ಮ ವಯಸ್ಸು ೩೫ ರಿಂದ ೪೦ ವರ್ಷದ ಮೇಲೆ ಇದೆಯೇ ?
ಹಾಗಾದರೆ ಈ ಕೆಳಗಿನ ಅಂಶಗಳನ್ನು ಅವಶ್ಯ ಗಮನಿಸಬೇಕು

* ನಿಮಗೆ ಮೇಲಿಂದ ಮೇಲೆ ಗಂಟಲು ನೋವು ಆಗುತ್ತಿದ್ದರೆ ಹಾಗೂ ಎಷ್ಟೇ ಔಷಧೋಪಚಾರ ತೆಗೆದುಕೊಳ್ಳುತ್ತಿದ್ದರೂ ಗುಣವಾಗದಿದ್ದರೆ,
* ಅಡಕೆ, ಕೂದಲು, ಇಲ್ಲವೆ ಮೀನಿನ ಎಲಬು ಗಂಟಲಲ್ಲಿ ಸಿಕ್ಕಿಕೊಂಡಂತೆ ನಿಮಗೆ ಅನುಭವವಾದರೆ ಮತ್ತು ಅದನ್ನು ಹೊರತೆಗೆಯುವದಕ್ಕಾಗಿ ಮೇಲಿಂದ ಮೇಲೆ ಖ್ಯಾಕರಿಸಬೇಕೆಂದೆನಿಸಿದರೆ,
* ನಿಮ್ಮ ಕಿವಿಯಲ್ಲಿ ದೋಷವಿಲ್ಲದಿದ್ದರೂ ನೋವು ಆಗುತ್ತಿದ್ದರೆ,
* ಮಾತು ಮೇಲಿಂದ ಮೇಲೆ ತೊದಲುತ್ತಿದ್ದರೆ ಮತ್ತು ಬಾಯಿತುಂಬ ಹುಂಗುಳು ಆಗಿ ಔಷಧದಿಂದಲೂ ಕಡಿಮೆಯಾಗದಿದ್ದರೆ,
* ಬಾಯಿಯಿಂದ ಸದಾ ಜೊಲ್ಲು ಸುರಿಯುತ್ತಿದ್ದರೆ,
* ಬಾಯಿಯಿಂದ ಯಾವಾಗಲೂ ದುರ್ವಾಸನೆ ಬರುತ್ತಿದ್ದರೆ,
* **ಕುತ್ತಿಗೆಯಲ್ಲಿ ಗಂಟು ಕಂಡುಬಂದರೆ,**

ನಿಮಗೆ ನಿಶ್ಚಯವಾಗಿಯೂ ಗಂಟಲು ಇಲ್ಲವೆ ಟಾನ್ಸಿಲ್ ಕ್ಯಾನ್ಸರ್ ಬೇನೆ ತಗಲಿದ ಸಂಭವ ಇರುತ್ತದೆ ಕೂಡಲೆ ನೀವು ತಜ್ಞ ಈ. ಎನ್. ಟಿ. ಡಾಕ್ಟರರನ್ನು ಭೇಟಿಯಾಗಿ ಔಷಧೋಪಚಾರ ಪ್ರಾರಂಭಿಸಬೇಕು.

ಈ ರೋಗ ತಗಲಿದ ಬಗ್ಗೆ ನೀವು ಅಧೈರ್ಯಪಡಬೇಕಾಗಿಲ್ಲ. ಪ್ರಾರಂಭಿಕ ಅವಸ್ಥೆಯಲ್ಲಿದ್ದರೆ ಇದನ್ನು ನೂರಕ್ಕೆ ನೂರು ಗುಣಪಡಿಸಬಹುದು.

ಕ್ಯಾನ್ಸರ್ ರೋಗದಿಂದ ಬಳಲುತ್ತಿರುವ ಬಡ ಹಾಗೂ ಮಧ್ಯಮ ವರ್ಗದ ಜನರ ಉಪಚಾರಕ್ಕಾಗಿ ಹುಬ್ಬಳ್ಳಿಯ ಅಮರಗೋಳದ ಬಳಿ ಒಂದು ಆಧುನಿಕ ಸುಸಜ್ಜಿತ ಆಸ್ಪತ್ರೆಯೊಂದು ಕಟ್ಟಿಸಲಾಗುತ್ತಿದೆ. ಈ ಬೃಹತ್ ಯೋಜನೆಗೆ ಎಷ್ಟು ಹಣ ಬಂದರೂ ಸಾಲದು.

ಈ ಸತ್ಕಾರ್ಯಕ್ಕಾಗಿ ಮುಕ್ತಹಸ್ತದಿಂದ ಸಹಾಯ ಮಾಡಿರಿ.

**ಡಾ। ಆರ್. ಬಿ. ಪಾಟೀಲ, ಚೇರಮನ್**

ಕರ್ನಾಟಕ ಕ್ಯಾನ್ಸರ್ ಶುಶ್ರೂಷಾ ಹಾಗೂ ಸಂಶೋಧನೆ ಸಂಸ್ಥೆ
ವಿದ್ಯಾನಗರ, ಹುಬ್ಬಳ್ಳಿ

---



**ಸ್ಥಳದಾನ**

ಸೊಂಡೂರ ಮ್ಯಾಂಗನೀಸ್ ಆ್ಯಂಡ್ ಐರನ್ ಓರ್ಸ್ ಲಿ.,
ಸೊಂಡೂರು (ಬಳ್ಳಾರಿ ಜಿಲ್ಲೆ)

ಅನಂತರ ಐದು ಮೈಲಿ ದೂರದಲ್ಲಿರುವ ರೂಪದಾಸಪುರದ ಮಿಡ್ಲ್ ವ್ಹರ್ನಾಕ್ಯುಲರ್ ಸ್ಕೂಲಿನಲ್ಲಿ ವ್ಯಾಸಂಗ ಮುಂದುವರಿಸಿದರು. ನರಸಿಂಹಪುರದ ಸದಾಶಿವ ಮಿಶ್ರರೆನ್ನುವರು ಈ ಶಾಲೆಯ ಮುಖ್ಯೋಪಾಧ್ಯಾಯರು. ಮಕ್ಕಳಿಲ್ಲದ ಅವರು ಶಾಲೆಯ ಬಾಲಕರನ್ನು ಎಷ್ಟು ಮಟ್ಟಿಗೆ ಪ್ರೀತಿಸುತ್ತಿದ್ದರೆಂದರೆ ಮುಂದೆ ಹಲವು ವರ್ಷಗಳ ನಂತರ ಗೋಪಬಂಧು ದಾಸರು ಮಯೂರಭಂಜದ ಮಹಾರಾಜರ ಬಳಿ ವಕೀಲರಾದಾಗ ಅಲ್ಲಿ ಒಂದು ಅನಾಥಾಲಯವನ್ನು ಸ್ಥಾಪಿಸಲು ಒತ್ತಾಯಪಡಿಸಿ, ಅದರ ಮೇಲ್ವಿಚಾರಣೆಗೆ ಸದಾಶಿವ ಮಿಶ್ರರನ್ನು ನೇಮಿಸಿದರು.

ರೂಪದಾಸಪುರದಲ್ಲಿ ಶಿಕ್ಷಣವನ್ನು ಪೂರೈಸಿದ ನಂತರ ಗೋಪಬಂಧುದಾಸರು ಮುಂದಿನ ಶಿಕ್ಷಣಕ್ಕಾಗಿ ಪೂರಿ ಜಿಲ್ಲಾ ಸ್ಕೂಲು ಸೇರಲು ಅಲ್ಲಿಗೆ ಪ್ರಯಾಣ ಬೆಳೆಸಿದರು. ಅಲ್ಲಿಂದ 'ಉತ್ಕಲ ಬ್ರಾಹ್ಮಣ ಸಮಿತಿ'ಯ ಸ್ಥಾಪಕರಾದ ಪೂರಿಯ ಮೋಕ್ತೇಸರ ಶ್ರೀ ರಾಮಚಂದ್ರದಾಸರವರ ಪರಿಚಯವಾಗಿ ಅವರ ಆಶ್ರಯದಲ್ಲಿ ನಡೆಯುತ್ತಿದ್ದ ವಿಚಾರಗೋಷ್ಠಿಯಲ್ಲಿ ಭಾಗವಹಿಸತೊಡಗಿದ್ದರಿಂದ ಇವರ ವ್ಯಕ್ತಿತ್ವ ವಿಕಾಸಗೊಳ್ಳಲು ಸಹಾಯವಾಯಿತು.



ಪೂರಿಯ ಜಗತ್ಪ್ರಸಿದ್ಧವಾದ ಜಗನ್ನಾಥ ಜಾತ್ರೆ ನಡೆದ ಸಂದರ್ಭ. ದೂರದೂರದಿಂದ ಜನ ಬಂದಿದ್ದಾರೆ. ಕಾಲರಾ ರೋಗ ಹರಡಿ ಎಷ್ಟೋ ಜನ ರಸ್ತೆಯಲ್ಲಿ ಸತ್ತುಬಿದ್ದರು. ಸರಕಾರದ ಹಾಗೂ ಪೌರಾಡಳಿತದ ನಿರ್ಲಕ್ಷ್ಯ ಪರಿಸ್ಥಿತಿಯನ್ನು ಬಿಗಡಾಯಿಸಿತ್ತು. ಹೆಣಗಳು ಸಂಸ್ಕಾರವಿಲ್ಲದೆ ಕೊಳೆಯುತ್ತಿರುವ ದೃಶ್ಯವೇ ಎಲ್ಲೆಲ್ಲೂ. ಈ ಪರಿಸ್ಥಿತಿಯನ್ನು ನೋಡಲಾರದೆ ಗೋಪಬಂಧುದಾಸರು 'ಪೂರಿ ಸೇವಾಸಮಿತಿ'ಯನ್ನು ರಚಿಸಿ, ಅದರ ಮುಖಾಂತರ ರೋಗಪೀಡಿತರಿಗೆ ವೈದ್ಯಕೀಯ ನೆರವನ್ನೂ ಸತ್ತವರಿಗೆ ಅಂತ್ಯಸಂಸ್ಕಾರವನ್ನೂ ಜರುಗಿಸಲು ತಕ್ಕ ವ್ಯವಸ್ಥೆ ಮಾಡಿದರು.

ಅವರ ಕಾರ್ಯ ಏಕಮುಖವಾಗಿರಲಿಲ್ಲ. ಕವನಗಳನ್ನು ರಚಿಸುವ ಮೂಲಕ ಹೈಸ್ಕೂಲಿನಲ್ಲಿದ್ದಾಗಲೇ ಸಾಹಿತ್ಯಸೇವೆಗೆ ಆರಂಭಿಸಿದರು. ಗೋಪಬಂಧು ೧೮೯೯ರಲ್ಲಿ ಮೆಟ್ರಿಕ್ ಮುಗಿಸಿ ರೇವನ್‌ಷಾ ಕಾಲೇಜು ಸೇರಿದರು. ಆಗ ಅವರಿಗೆ ೨೩ ವರ್ಷ ವಯಸ್ಸು. ಇದೇ ಸಮಯದಲ್ಲಿ ತಂದೆ ತೀರಿಕೊಂಡರು. ಗೋಪಬಂಧು ದಾಸರು ಸಂಸಾರದ ಜವಾಬ್ದಾರಿಯನ್ನೆಲ್ಲಾ ಅಣ್ಣ ನಾರಾಯಣದಾಸರಿಗೆ ವಹಿಸಿ ಕಾಲೇಜು ಶಿಕ್ಷಣ ಮುಂದುವರಿಸಿದರು.

ಆಗ ಕಟಕ್‌ನ ರೇವನ್‌ಷಾ ಕಾಲೇಜು ಕಲ್ಕತ್ತ ವಿಶ್ವವಿದ್ಯಾನಿಲಯಕ್ಕೆ ಸೇರಿತ್ತು. ಮೊದಲಿನಿಂದಲೂ ಉಡಿಯಾ ಭಾಷೆಯ ಬಗೆಗೆ ಬಂಗಾಳಿಗಳ ತಾತ್ಸಾರ. ಗೋಪಬಂಧುದಾಸರು 'ಕರ್ತವ್ಯ ಸಭಾವಾಹಿನಿ'ಯನ್ನು ರಚಿಸಿ ತನ್ಮೂಲಕ ಉಗ್ರ ಪ್ರತಿಭಟನೆ ಸಲ್ಲಿಸಿದ್ದರಿಂದ ವಿಶ್ವವಿದ್ಯಾಲಯದಿಂದ ಉಡಿಯಾ ಭಾಷೆಗೆ ಕೆಲವು ಮಟ್ಟಿಗೆ ಮನ್ನಣೆ ಬಂತು.

ಈ ದಿನಗಳಲ್ಲಿ ಪ್ರವಾಹಪೀಡಿತರಿಗಾಗಿ ಚಂದಾ ಎತ್ತಿ ನೊಂದ ಜನರಿಗೆ ಅವಶ್ಯವಿದ್ದ ಸಹಾಯ ಮುಂತಾದ ಸಾಮಾಜಿಕ ಕಾರ್ಯಗಳಲ್ಲಿ ಅವರು ಮಗ್ನರಾಗಿರುತ್ತಿದ್ದರು. ಈ ವೇಳೆಗೆ ಪುಣೆಯಲ್ಲಿ ಡೆಕ್ಕನ್ ಎಜ್ಯುಕೇಶನ್ ಸೊಸೈಟಿ ಪ್ರಾರಂಭವಾದ ಸುದ್ದಿ

ಗೋಪರಿಗೆ ಮುಟ್ಟಿತು. ಆಗ ಅಂತಹುದೇ ಒಂದು ವಿದ್ಯಾಸಂಸ್ಥೆಯನ್ನು ಉತ್ಕಲದಲ್ಲೂ ಸ್ಥಾಪಿಸಬೇಕೆಂಬ ಆಶೆಯ ಬೀಜ ಕಾಲೇಜಿನಲ್ಲಿ ಓದುತ್ತಿದ್ದ ಗೋಪರಲ್ಲಿ ಮೊಳಕೆಯೊಡೆಯಿತು.

ಕಾಲೇಜಿನ ಮೊದಲನೆ ವರ್ಷದಲ್ಲಿ ಓದುತ್ತಿದ್ದಾಗಲೆ ಮಗನ ಸಾವಿನ ಸುದ್ದಿ ಮುಟ್ಟಿತು. ಕಾಲೇಜಿಗೆ ಇತಿಶ್ರೀ ಹಾಕಲು ಮನಸ್ಸು. ಆದರೆ ಅಣ್ಣ ಹಾಗೂ ಇತರ ಆತ್ಮೀಯರ ಒತ್ತಾಯದಿಂದ ಕಾಲೇಜಿಗೆ ವಾಪಸಾದರು. ಸೇವೆಗಾಗಿ ಹಾತೊರೆಯುತ್ತಿದ್ದ ಮನಸ್ಸು ಓದಿನಲ್ಲಿ ವಿರಮಿಸಲಿಲ್ಲ. ಹೀಗಾಗಿ ಬಿ. ಎ. ಪರೀಕ್ಷೆಯಲ್ಲಿ ತೇರ್ಗಡೆಯಾಗಲಿಲ್ಲ. ಅಂತೂ ೧೯೦೪ರಲ್ಲಿ ಬಿ. ಎ. ಮುಗಿಸಿ ಲಾ ಹಾಗೂ ಎಂ. ಎ. ಗೆ ಓದಲು ಕಲ್ಕತ್ತಕ್ಕೆ ಪ್ರಯಾಣ ಬೆಳೆಸಿದರು.

ಗೋಪಬಂಧುದಾಸರು ಕಲ್ಕತ್ತದಲ್ಲಿ ಬರೀ ಪುಸ್ತಕದ ಹುಳುವಾಗಿರಲಿಲ್ಲ. ಅಲ್ಲಿನ ಗಲ್ಲಿಗಲ್ಲಿಯಲ್ಲೂ ತಿರುಗಿ ಅಲ್ಲಿ ವಾಸಿಸುತ್ತಿದ್ದ ಉಡಿಯಾ ಜನರ ಜೀವನವನ್ನು ಹತ್ತಿರದಿಂದ ಪರಿಶೀಲಿಸಿದರು. ಅಲ್ಲಿನ ಉಡಿಯಾ ಜನರಲ್ಲಿ ಹೆಚ್ಚಿನವರು ಕೂಲಿಗಳೋ ಅಡುಗೆಯಾಳುಗಳೋ ಆಗಿ ದಾರುಣವಾದ ಜೀವನ ನಡೆಸುವುದನ್ನು ಕಂಡು ಇದಕ್ಕೆ ಏನಾದರೂ ಮಾಡಲೇಬೇಕೆಂದು ನಿರ್ಧರಿಸಿದರು. ಇದರ ಅಂಗವಾಗಿ ಅವರು ಒಂದು ಸಂಘವನ್ನು ಸ್ಥಾಪಿಸಿದರು. ರಾತ್ರಿ ಶಾಲೆ ಸ್ಥಾಪಿಸಿ ಅಕ್ಷರ ಕಲಿಸಲು ಆರಂಭಿಸಿದರು. ಅದು ಇಂದಿಗೂ ಕಲ್ಕತ್ತದಲ್ಲಿ ಸರಾಗವಾಗಿ ನಡೆದಿದೆ. ಗೋಪಬಂಧುದಾಸರು ದೂರದ ಕಲ್ಕತ್ತದಲ್ಲಿದ್ದರೂ ತಾಯ್ನಾಡಾದ ಉತ್ಕಲದ ಸಮಸ್ಯೆಗಳನ್ನು ಮರೆಯಲಿಲ್ಲ. ಕ್ಷಾಮ ಹಾಗೂ ಪ್ರವಾಹದ ಸಮಯಗಳಲ್ಲಿ ಚಂದಾ ಎತ್ತಿ ಬಡ ಜನರಿಗೆ ನೆರವಾಗುತ್ತಿದ್ದರು.

೧೯೦೫ರ ಬೇಸಿಗೆ ರಜದಲ್ಲಿ ಭುವನೇಶ್ವರಕ್ಕೆ ಬಂದು ತಮ್ಮ ಮಿತ್ರ ವಾಸುದೇವ ರಥರೊಡನೆ ಉತ್ಕಲದ ಮೂಲೆ ಮೂಲೆಗಳಲ್ಲೂ ಸಂಚರಿಸಿದರು.

ಇದೇ ಸಂದರ್ಭದಲ್ಲಿ ಬಂಗಾಲದ ಕ್ರಾಂತಿಕಾರಿ ಶಶಿಭೂಷಣ ರಾಯ್‌ಚೌಧರಿಯವರ ಪರಿಚಯವಾಗಿ ಅವರ ಕಾರ್ಯ ಚಟುವಟಿಕೆ ಗೋಪರಿಗೆ ಸ್ವಾತಂತ್ರ್ಯಹೋರಾಟಕ್ಕೆ ಪ್ರಚೋದನೆ ನೀಡಿತು. ಇದಕ್ಕಾಗಿ ಜನರ ಒಗ್ಗಟ್ಟು ಅಗತ್ಯವೆಂದರಿತು ಸಮಾಜಸೇವೆ ಹಾಗೂ ಗ್ರಾಮೋದ್ಧಾರ ಕಾರ್ಯಗಳಲ್ಲಿ ತೊಡಗಿದರು.

ಆದರೆ ದುರ್ದೈವ ಅವರ ಬೆನ್ನು ಬಿಟ್ಟಿರಲಿಲ್ಲ. ೧೯೦೬ರಲ್ಲಿ ಲಾ ಪದವಿಯನ್ನು ಪಡೆದ ದಿನವೆ ಅವರ ಪತ್ನಿ ಮರಣ ಹೊಂದಿದಳು. ಅವರಿಗೆ ಆಗ ಕೇವಲ ೨೮ ವರ್ಷ ವಯಸ್ಸು. ಅವರ ಹನ್ನೆರಡು ವರ್ಷದ ಸಂಸಾರದಲ್ಲಿ ೫ ಮಕ್ಕಳು ಜನಿಸಿದ್ದವು. ಆದರೆ ಇದ್ದ ಗಂಡುಮಕ್ಕಳಿಬ್ಬರೂ ಅಕಾಲದಲ್ಲೇ ಮೃತ್ಯುವನ್ನಪ್ಪಿದರು. ಮತ್ತೆ ಮದುವೆಯಾಗಲು ಆಪ್ತೇಷ್ಟರಿಂದ ಒತ್ತಾಯ ಬಂದರೂ ಮಣಿಯದೇ ನಾಡಿಗಾಗಿ ಟೊಂಕ ಕಟ್ಟಿದರು.

ತಮ್ಮ ಮಕ್ಕಳನ್ನು ಅಣ್ಣ ನಾರಾಯಣದಾಸರ ಜವಾಬ್ದಾರಿಗೆ ವಹಿಸಿ ಉತ್ಕಲದ ಸೇವೆಗಾಗಿ ನಿಂತರು. ಪ್ರಫುಲ್ಲಚಂದ್ರ ರೇ ಅವರು ಇವರನ್ನು 'ಉತ್ಕಲಮಣಿ' ಎಂದದ್ದು ಆಶ್ಚರ್ಯವೇನಲ್ಲ.

ವಿದ್ಯಾಭ್ಯಾಸ ಮುಗಿಸಿ ಬಂದನಂತರ ಕೆಲವು ತಿಂಗಳು ನೀಲಗಿರಿಯ ವಿದ್ಯಾಸಂಸ್ಥೆಯಲ್ಲಿ ಮುಖ್ಯೋಪಾಧ್ಯಾಯರಾಗಿ ಕೆಲಸ ಮಾಡಿದರು. ತಮ್ಮ ಧ್ಯೇಯ ಧೋರಣೆಗಳಿಗೆ ಈ ವೃತ್ತಿ ಅವಕಾಶ ಕಲ್ಪಿಸುವುದಿಲ್ಲವೆಂದು ರಾಜೀನಾಮೆ ಕೊಟ್ಟು ವಕೀಲಿ ವೃತ್ತಿಯನ್ನಾರಂಭಿಸಿದರು. ಆಗ ಉತ್ಕಲದ ಮಹಾ ಮಹಾ ನದಿಗಳಿಗೆ ಪ್ರವಾಹ ಬಂದು ನೆರೆಹಾವಳಿಯಿಂದ ಜನ ತೊಂದರೆಗೀಡಾದಾಗ ಅವರುಗಳಿಗೆ ನೆರವು ನೀಡಲು ನಿದ್ರಾಹಾರ ತೊರೆದು ದುಡಿದರು.

• ಬಳಿಕ ಹಿರಿಯ ನಾಯಕ ಮಧುಸೂದನದಾಸರ ಆದೇಶದಂತೆ ಮಯೂರಭಂಜದ ರಾಜ ಶ್ರೀ ರಾಮಚಂದ್ರ ಭಂಜದೇವರ ಬಳಿ ಸರಕಾರಿ ವಕೀಲರಾಗಿ ಕೆಲಸ ಮಾಡಲು ಬಾರಿಪಾದಕ್ಕೆ ಹೊರಟರು. ೧೯೧೨ರಲ್ಲಿ ಮಹಾರಾಜರು ಮರಣ ಹೊಂದಿದನಂತರ ಗೋಪಬಂಧುದಾಸರು ವಕೀಲಿವೃತ್ತಿಗೆ ವಾಪಸಾದರು.

ಸರಿಯಾದ ಶಿಕ್ಷಣ ಹಾಗೂ ವಿದ್ಯಾಭ್ಯಾಸಗಳಿಲ್ಲದೆ ಉತ್ಕಲದ ಜನ ಇತರ ರಾಜ್ಯಗಳ ಜನರೊಂದಿಗೆ ಸರಿಸಮನಾಗಿ ನಿಲ್ಲಲಾರರೆಂಬುದು

ಗೋಪಬಂಧುದಾಸರಿಗೆ ಮನವರಿಕೆಯಾಗಿತ್ತು. ಮಹಾರಾಷ್ಟ್ರದವರು ಡೆಕ್ಕನ್ ಎಜ್ಯುಕೇಶನ್ ಸೊಸೈಟಿಯನ್ನು ಸ್ಥಾಪಿಸಿ ತನ್ಮೂಲಕ ಫರ್ಗ್ಯುಸನ್ ಕಾಲೇಜನ್ನು ನಡೆಸುವ ಹಾಗೆಯೇ ತಾವೂ ಒಂದು ಕಾಲೇಜನ್ನು ಏಕೆ ಸ್ಥಾಪಿಸಬಾರದೆಂಬ ವಿಚಾರ ಗೋಪಬಂಧುದಾಸರಿಗೆ ಬಂದಿತು. ಅದಕ್ಕಾಗಿ ಅವರು ರಾಜ್ಯದ ಮೂಲೆ ಮೂಲೆಯಲ್ಲೂ ತಿರುಗಿ ಕೊನೆಗೆ ಸಾಕ್ಷಿಗೋಪಾಲದ ಬಕುಲವನವನ್ನು ಈ ಉದ್ದೇಶಕ್ಕಾಗಿ ಆರಿಸಿಕೊಂಡರು. ಅಲ್ಲಿಯೇ ಪ್ರಸಿದ್ಧ ಗೋಪಾಲ ಕೃಷ್ಣ ಮಂದಿರ. ಪಂಡಿತರು, ಬ್ರಾಹ್ಮಣ ಹಾಗೂ ವೇದಪಾರಂಗತರಿಂದ ಆವರಿಸಿದ್ದ ಸ್ಥಳ. ಕೇವಲ ಮಳೆಗಾಲವಲ್ಲಿ ಕಟ್ಟಡದೊಳಗೂ ಉಳಿದ ದಿನಗಳಲ್ಲಿ ಬಕುಲವನದಲ್ಲೂ ತರಗತಿಗಳು ಆರಂಭ ವಾದುವು.

ಸೂರ್ಯ ಚಂದ್ರರ ಬೆಳಕು ಭೂಮಿಯ ಎಲ್ಲ ವರ್ಗದ ಜನರಿಗೂ ಹೇಗೆ ಪ್ರಾಪ್ತವೊ ಹಾಗೆಯೆ ವಿದ್ಯಾಭ್ಯಾಸದ ಹಕ್ಕು ಎಲ್ಲರಿಗೂ ಇದೆ ಎನ್ನುವ ಧ್ಯೇಯದಿಂದ ಆರಂಭವಾದ ಈ ಶಾಲೆಯಲ್ಲಿ ಜಾತಿ ಭೇಧವಿಲ್ಲದೆ ಎಲ್ಲರೂ ಓದುತ್ತಿದ್ದರು. ಇಲ್ಲಿಯ ಸಹಪಂಕ್ತಿ, ಸಹಜೀವನವನ್ನು ಸಹಿಸಲಾರದೆ ಅನೇಕರು, ಅನೇಕ ರೀತಿಯ ತೊಡಕುಗಳನ್ನು ತಂದೊಡ್ಡಿದರು. ವಿರೋಧಿಗಳು ಶಾಲೆಯನ್ನು ಸುಟ್ಟು ಭಸ್ಮ ಮಾಡಿದರು. ಇದು ಯಾವುದಕ್ಕೂ ಹೆದರದೆ ಗೋಪಬಂಧುದಾಸರು ಚಂದಾ ಎತ್ತಿ ಒಂದು ಕಟ್ಟಡವನ್ನೇ ಕಟ್ಟಿಸಿದರು. ಗೋಪರ ಕರೆಗೆ ಓಗೊಟ್ಟು ಮಹಾ ಮಹಾ ಪಂಡಿತರು ಈ ಸಂಸ್ಥೆಯಲ್ಲಿ ಸೇವೆ ಸಲ್ಲಿಸಲು ಮುಂದೆ ಬಂದರು. ಇದು ಬರೀ ಅಕ್ಷರ ಕಲಿಸುವ ಸಂಸ್ಥೆಯಾಗಿರದೆ, ಜ್ಞಾನಪ್ರಸಾರ, ರಾಷ್ಟ್ರೀಯ ಮನೋಭಾವ ಹಾಗು ಮಾನಸಿಕ ವಿಕಾಸಗಳ ಕೇಂದ್ರವಾಗಿತ್ತು.

ಸಂಸ್ಥೆಗೆ ಸರಕಾರದ ಮಾನ್ಯತೆ ಬಹಳ ಮುಖ್ಯ ವಾಗಿತ್ತು. ಆಗ ಬ್ರಿಟಿಶರ ಆಡಳಿತ ಕಾಲ. ಇಂತಹ ಸ್ಥಳಗಳಲ್ಲಿ ಸರಕಾರದ ವಿರುದ್ಧ ಚಟುವಟಿಕೆಗಳು ನಡೆಯಬಹುದೆಂಬ ಕಾರಣ ದಿಂದಾಗಿ ಮಾನ್ಯತೆ ಕೊಡಲು ಸರಕಾರ ಅನೇಕ ಅಡೆತಡೆಗಳನ್ನೊಡ್ಡಿತು. ಗೋಪಬಂಧುದಾಸರು ಇದೆಲ್ಲದರಿಂದ ಧೃತಿಗೆಡಲಿಲ್ಲ. ಕೊನೆಗೆ 'ಸತ್ಯ ವಾದಿ ಶಾಲೆ' ಮಾನ್ಯತೆ ಪಡೆಯಿತು.

ಅದು ಬರೀ ಪ್ರೌಢಶಾಲೆಯಾಗಿರದೆ ರಾಜ್ಯದ ಮುಖಂಡರುಗಳನ್ನು ತಯಾರು ಮಾಡುವ ಮುಖ್ಯ ಸಂಸ್ಥೆಯೂ ಆಗಿತ್ತು. ಇದರ ಉನ್ನತಿ, ಅವನತಿಗಳ ಕಾಲವನ್ನು ಉತ್ಕಲದ ಇತಿಹಾಸದಲ್ಲಿ ಸತ್ಯವಾದಿಯುಗ ಎಂದು ಕರೆಯಲಾಗಿದೆ. ಒಂದು ರೀತಿಯಲ್ಲಿ ಇದು ಉತ್ಕಲದ ಶಾಂತಿನಿಕೇತನವಾಗಿತ್ತು. ಗೋಪಬಂಧುದಾಸರು ಅಖಿಲ ಭಾರತ ಕಾಂಗ್ರೆಸ್ ಚಳುವಳಿಗೆ ಇಳಿದ ಮೇಲೆ ಇದು ರಾಷ್ಟ್ರೀಯ ಶಾಲೆಯಾಯಿತು.

೧೯೧೨ರಲ್ಲಿ ಬಿಹಾರ ಮತ್ತು ಉತ್ಕಲಗಳು ಬಂಗಾಲದಿಂದ ಬೇರ್ಪಟ್ಟಾಗ ಮಧುಸೂದನ ದಾಸರ ಆದೇಶದಂತೆ ಗೋಪಬಂಧುದಾಸರು ೧೯೧೭ರಲ್ಲಿ ವಿಧಾನಸಭೆಗೆ ಆಯ್ಕೆಯಾಗಿಬಂದರು. ಆದ್ದರಿಂದ ವಕೀಲಿ ವೃತ್ತಿಗೆ ವಿರಾಮವನ್ನಿತ್ತರು.

ಈ ಸಮಯದಲ್ಲಿ ಅವರು ಕೆಲವು ಮಹತ್ವದ ಕಾರ್ಯಗಳಲ್ಲಿ ತಮ್ಮ ದೃಷ್ಟಿಯನ್ನು ಕೇಂದ್ರೀಕರಿಸಿದರು: ಮೊದಲನೆಯದು, ಉಡಿಯಾ ಭಾಷಾಭಿವೃದ್ಧಿ: ಎರಡನೆಯದು, ಪ್ರವಾಹ ಹಾಗೂ ಕ್ಷಾಮಗಳ ನಿವಾರಣೆ ಬಗ್ಗೆ ಸ್ಥಿರವಾದ ಕಾರ್ಯಕ್ರಮವನ್ನು ಕೈಕೊಳ್ಳುವುದು. ೧೯೧೯ ರಲ್ಲಿ ಪೂರಿ ಜಿಲ್ಲೆಯಲ್ಲಿ ಭೀಕರ ಕ್ಷಾಮ ಪರಿಸ್ಥಿತಿ ತಲೆದೋರಿದಾಗ ಜನರ ಪರಿಸ್ಥಿತಿ ತೀರಾ ನಿಕೃಷ್ಟವಾಗಿತ್ತು. ಸರಕಾರ ಮೌನ ತಾಳಿ ಕಣ್ಣುಮುಚ್ಚಿ ಕೂತಿತ್ತು. ಆಗ ಗೋಪಬಂಧುದಾಸರು ಪರಿಹಾರಕ್ಕಾಗಿ ಮೊರೆಯಿಟ್ಟು, ಲೆ. ಗವರ್ನರರನ್ನು ಜೊತೆಯಲ್ಲಿ ಕರೆದುಕೊಂಡು ಕ್ಷಾಮಪೀಡಿತ ಪ್ರದೇಶಗಳನ್ನು ಸುತ್ತಿ, ಪರಿಹಾರ ದೊರಕಿಸಿದರು.

ಪ್ರವಾಹವನ್ನು ತಡೆಗಟ್ಟಲು ಒಂದು ಮಾರ್ಗ ಹುಡುಕಬೇಕೆಂದು ಅವರು ಸರಕಾರವನ್ನು ಬಹುವಾಗಿ ಒತ್ತಾಯಿಸಿದ ಪರಿಣಾಮವಾಗಿ ೧೯೨೮ರಲ್ಲಿ ಸರಕಾರ ಈ ಬಗ್ಗೆ ಒಂದು ಸಮಿತಿಯನ್ನು ನೇಮಿಸಿತು. ಈ ಸಮಿತಿಯ ವರದಿಯೆ ಮುಂದೆ ಬೃಹತ್ತಾದ ಹೀರಾಕುಡ್ ಯೋಜನೆಗೆ ನಾಂದಿಯಾಯಿತು.

ಅನಾದಿಕಾಲದಿಂದಲೂ ಉಪ್ಪಿನ ವ್ಯಾಪಾರಕ್ಕೆ

ಪ್ರಸಿದ್ಧವಾದದ್ದು ಉತ್ಕಲ ಪ್ರಾಂತ. ಆದರೆ ಆಗಿನ ಸರಕಾರ ಇದಕ್ಕೆ ನಿರ್ಬಂಧ ಹಾಕಿತು. ಇದರ ನಿವಾರಣೆಗಾಗಿ ವಿಧಾನ ಪರಿಷತ್ತಿನಲ್ಲಿ ಬಹಳವಾಗಿ ಪ್ರಯತ್ನಿಸಿ ಆಶ್ವಾಸನೆ ಪಡೆದರು. ಮುಂದೆ ೧೯೧೮ ರಲ್ಲಿ ಮಹಾಯುದ್ಧ ಮುಗಿದ ನಂತರ ಅನ್ಯಪ್ರಾಂತಗಳಲ್ಲಿ ತಯಾರಾದ ಉಪ್ಪು ಸುಲಭ ಬೆಲೆಯಲ್ಲಿ ದೊರೆಯತೊಡಗಿದ್ದರಿಂದ ಈ ಉದ್ದಿಮೆ ನಿಲ್ಲುವಂತಾಯಿತು. ಸರಕಾರ ಉಪ್ಪಿಗೆ ಸುಂಕ ವಿಧಿಸಿದ್ದಕ್ಕೆ ಆಗ ಪ್ರತಿಭಟನೆಯೂ ಇತ್ತು. ೧೯೩೧ರಲ್ಲಿ ಗಾಂಧೀಜಿಯವರ ಉಪ್ಪಿನ ಸತ್ಯಾಗ್ರಹಕ್ಕೆ ಗೋಪಬಂಧುಗಳ ಈ ಪ್ರತಿಭಟನೆಯೇ ನಾಂದಿಯಾಯಿತು.

ತಮ್ಮ ಜೀವನಾಡಿಯಂತಿದ್ದ 'ಸತ್ಯವಾದಿ ಶಾಲೆ' ಮುಚ್ಚಿಹೋದರೂ ಶಿಕ್ಷಣ ಪ್ರಸಾರ ಕಾರ್ಯವನ್ನು ಗೋಪಬಂಧುಗಳು ಬಿಡಲಿಲ್ಲ. ಅವರ ಪ್ರಯತ್ನದಿಂದ ಅನೇಕ ಇಂಗ್ಲಿಷ್ ಮಾಧ್ಯಮಿಕ ಶಾಲೆಗಳು ತೆರೆಯಲ್ಪಟ್ಟವು. ರೇವನ್‌ಷಾ ಕಾಲೇಜಿನಲ್ಲಿ ಬಿ. ಎಲ್. ತರಗತಿ ಪ್ರಾರಂಭವಾಯಿತು. ಕಟಕ್‌ನಲ್ಲಿ ಒಂದು ತಾಂತ್ರಿಕ ಶಾಲೆಯೂ ಪೂರಿಯಲ್ಲಿ ಒಂದು ಸಂಸ್ಕೃತ ಕಾಲೇಜೂ ಆರಂಭವಾಯಿತು. ಅಲ್ಲದೆ ಆಯ್. ಸಿ. ಎಸ್. ಪರೀಕ್ಷೆಗೆ ಇಂಗ್ಲೆಂಡಿಗೆ ಒಬ್ಬ ಉಡಿಯನನ್ನು ಕಳುಹಿಸುವ ಏರ್ಪಾಡೂ ಇವರಿಂದ ಆಯಿತು.

ಉತ್ಕಲ ಸಮ್ಮಿಲನಿ ಗೋಪರ ಕಾರ್ಯಕ್ಷೇತ್ರಕ್ಕೆ ಕಿರಿದಾದುದರಿಂದ ೧೯೨೧ರಲ್ಲಿ ಅದರಿಂದ ಹೊರಬಂದು ಅಖಿಲ ಭಾರತ ಕಾಂಗ್ರೆಸ್ಸನ್ನು ಸೇರಿ ಅಸಹಕಾರ ಚಳುವಳಿಯಲ್ಲಿ ಭಾಗವಹಿಸಿದರು.

ಇವರ ಆಮಂತ್ರಣ ಸ್ವೀಕರಿಸಿ ಉತ್ಕಲ ರಾಜ್ಯಕ್ಕೆ ಭೇಟಿ ನೀಡಿದ ಬಾಪೂಜೀ ಇಲ್ಲಿಯ ಬಡತನ ಕಂಡು ಕಣ್ಣೀರಿಟ್ಟು ಅಂದಿನಿಂದಲೇ [illegible] ಪ್ರವಾಸ ಮಾಡಿದರಂತೆ.

ಎಲ್ಲದಕ್ಕೂ ಮಿಗಿಲಾಗಿ ಗೋಪರು ಮಾಡಿದ [illegible] ಕಾರ್ಯವೆಂದರೆ ಉತ್ಕಲಕ್ಕೆ [illegible] ಲವಲಿ ಕೆಲವು

ಪ್ರಸಾರಕ್ಕೆ ಯಾವ ಪತ್ರಿಕೆಯೂ ಮಹತ್ವ ಕೊಡುತ್ತಿರಲಿಲ್ಲ. ದೇಶದಲ್ಲಿ ಬಾಪೂಜಿಯ ನೇತೃತ್ವದಲ್ಲಿ ಸ್ವಾತಂತ್ರ್ಯ ಚಳುವಳಿ ಚುರುಕಿನಿಂದ ಸಾಗುತ್ತಿತ್ತು. ಆದರೆ ಇದು ಯಾವುದೂ ಜನರ ಕಿವಿಗೆ ಮುಟ್ಟುತ್ತಿರಲಿಲ್ಲ. ಇದನ್ನರಿತ ಗೋಪಬಂಧುದಾಸರು ಅನೇಕ ತೊಂದರೆಗಳನ್ನು ಎದುರಿಸಿ ಒಂದು ಪತ್ರಿಕೆಯನ್ನು ಆರಂಭಿಸಿದರು. ಮೊದಲು ವಾರ ಪತ್ರಿಕೆಯಾಗಿ ಆರಂಭವಾದ 'ಸಮಾಜ' ಕ್ರಮೇಣವಾಗಿ ವೃದ್ಧಿಸಿ ದಿನಪತ್ರಿಕೆಯಾಗಿ ಪರಿವರ್ತಿತವಾಯಿತು. ಇಂದಿಗೂ ಅದು ಉಡಿಯ ಜನರ ಆದರಕ್ಕೆ ಪಾತ್ರವಾಗಿದೆ. ಎಷ್ಟೇ ವಿರೋಧ ಬಂದರೂ ಈ ಪತ್ರಿಕೆಯು ಹಿತದೃಷ್ಟಿಯಿಂದ ಗೋಪಬಂಧುದಾಸರು ಅದನ್ನು ಲಾಲಾ ಲಜಪತರಾಯರ ಸರ್ವಂಟ್ಸ್ ಆಫ್ ಪೀಪಲ್ಸ್ ಸೋಸಾಯಿಟಿಗೆ ಒಪ್ಪಿಸಿದರು. ಕೊನೆಯವರೆಗೂ ಅವರು ಅದರ ಸಂಪಾದಕರಾಗಿ ಸೇವೆ ಸಲ್ಲಿಸಿದರು.

ಉತ್ಕಲಕ್ಕೆ ಕಾಂಗ್ರೆಸ್ಸನ್ನು ತಂದವರೇ ಗೋಪಬಂಧುದಾಸರು. ಅವರು ರಾಜ್ಯದಲ್ಲೆಲ್ಲ ತಿರುಗಿ ಕಾಂಗ್ರೆಸ್ಸಿನ ಧ್ಯೇಯಧೋರಣೆಗಳನ್ನು ಜನತೆಗೆ ವಿವರಿಸಿದರು. 'ಟಿಳಕ ಸ್ವರಾಜ್ಯ ಫಂಡ್' ವ್ಯವಸ್ಥೆ ಮಾಡಿ ಕಾಂಗ್ರೆಸ್ಸಿಗಾಗಿ ಹಣಸಂಗ್ರಹಿಸಿದರು. ಹೀಗಾಗಿ ಸರಕಾರದ ದೃಷ್ಟಿ ಅವರ ಮೇಲೆ ಸಹಜವಾಗಿಯೆ ಇತ್ತು. ಫಲವಾಗಿ ಅವರು ಅನೇಕ ಬಾರಿ ಸೆರೆಮನೆವಾಸ ಅನುಭವಿಸಬೇಕಾಯಿತು. ಗೋಪಬಂಧುದಾಸರು ಅಲ್ಲಿಯೂ ಸುಮ್ಮನೆ ಕಾಲ ಕಳೆಯದೆ ಸಂಸ್ಕೃತ ಭಾಗವತ ಹಾಗೂ ಮಹಾಭಾರತಗಳನ್ನು ಅಭ್ಯಸಿಸಿ ತಮ್ಮ ಸಹಪಾಠಿ ಪೂರಿ ಶಂಕರಾಚಾರ್ಯರೊಂದಿಗೆ ಚರ್ಚಿಸುತ್ತಿದ್ದರಂತೆ. ಗೋಪಬಂಧುದಾಸರು ಒಳ್ಳೆಯ ಕವಿಗಳೂ ಆಗಿದ್ದರು. ಕಟಕ್ಕಿನಿಂದ ಹಜಾರಿಬಾಗ್ ಜೈಲಿಗೆ ಇವರನ್ನು ಕರೆದೊಯ್ಯುತ್ತಿದ್ದಾಗ, ದಾರಿಯಲ್ಲಿ ಅವರು ಅತ್ಯಮೋಘ ' ಕಲಾಕೃತಿಯಾದ 'ಬಂದೀರ್ ಆತ್ಮಕಥಾ' ರಚಿಸಿದರು. ಇದು ೧೯೩ [illegible] ಕಾವ್ಯ ಇವರಲ್ಲಿ

ವ್ಯಕ್ತಿತ್ವ ಹಾಗೂ ಜೀವನಧ್ಯೇಯ ಇವುಗಳನ್ನು ಬಹು ಹೃದಯಂಗಮವಾಗಿ ವಿವರಿಸಿದ್ದಾರೆ. ಇದಲ್ಲದೆ 'ಗೋ ಮಾಹಾತ್ಮ್ಯ', 'ನಚಿಕೇತ ಉಪಾಖ್ಯಾನ' ಮತ್ತು 'ಕಾರ ಕಬಿತ' ಮುಂತಾದ ಕೃತಿಗಳನ್ನು ರಚಿಸಿದ್ದಾರೆ. ೧೯೨೪ ನೇ ಜೂನ್ ೨೬ ರಂದು ಇವರು ಬಿಡುಗಡೆಯಾದರು. ಇದೇ ಸಂದರ್ಭದಲ್ಲಿ ಕಟಕ್‌ನಲ್ಲಿ ರಾಜಕೀಯ ಸಮ್ಮೇಲನ ನಡೆಯುತ್ತಿತ್ತು. ಬಂಗಾಳದ ಆಚಾರ್ಯ ಪ್ರಫುಲ್ಲಚಂದ್ರ ರೇಯವರು ಅಧ್ಯಕ್ಷತೆ ವಹಿಸಿದ್ದರು. ಗೋಪರ ಬಿಡುಗಡೆಯ ಸುದ್ದಿ ಎಲ್ಲರಿಗೂ ಸಂತಸ ಸಡಗರಗಳನ್ನು ತಂದಿತ್ತು. ಆಚಾರ್ಯರು ಗೋಪರ ಕಾರ್ಯಚಟುವಟಿಕೆಗಳನ್ನು ಪ್ರಶಂಸಿಸಿ ಅವರನ್ನು 'ಉತ್ಕಲಮಣಿ' ಎಂದು ಕರೆದದ್ದು ಆಗಲೆ.

ಸೆರೆಯಿಂದ ಹೊರಬಂದ ನಂತರ ಗೋಪಬಂಧುಗಳು ಪಾನನಿರೋಧ, ಅಸ್ಪೃಶ್ಯತಾ ನಿವಾರಣೆ ಹಾಗೂ ಗ್ರಾಮ ಕೈಗಾರಿಕೆಗಳ ಬೆಳವಣಿಗೆಗಳಿಗೆ ವಿಶೇಷವಾಗಿ ಶ್ರಮಿಸಿದರು. ೧೯೨೬ ರಲ್ಲಿ ಪೂರಿಯಲ್ಲಿ 'ಜಗನ್ನಾಥ ವಿಧವಾಶ್ರಮ'ವನ್ನು ಸ್ಥಾಪಿಸಿ ವಿಧವೆಯರಿಗೆ ಕುಶಲಕಲೆ ಹಾಗೂ ಸ್ವಯಂಸೇವಿಕೆಯರಾಗಲು ತರಬೇತಿ ಕೊಡಲಾರಂಭಿಸಿದರು.

೧೯೨೮ ರ ಎಪ್ರಿಲ್‌ನಲ್ಲಿ 'ಸರ್ವಂಟ್ ಆಫ್ ದಿ ಪೀಪಲ್ಸ್ ಸೊಸೈಟಿ' ಅಧಿವೇಶನದಲ್ಲಿ ಭಾಗವಹಿಸಲು ಲಾಹೋರಿಗೆ ಪ್ರಯಾಣ ಬೆಳಸಿದರು. ಬಿಡುವಿಲ್ಲದ ಕೆಲಸದಿಂದ ಆರೋಗ್ಯ ಕೆಟ್ಟು ವಿಷಮಜ್ವರದಿಂದ ನರಳಿದರು. ಇಂತಹ ಸ್ಥಿತಿಯಲ್ಲೂ ಕಲ್ಕತ್ತದಲ್ಲಿ ಆಗ ತಾನೇ ಶುರುವಾಗಿದ್ದ ಉಡಿಯಾ ಶ್ರಮಜೀವಿಗಳ ಸಂಘದ ಕೆಲಸಕ್ಕಾಗಿ ಅಲ್ಲಿಗೆ ಹೋದರು. ಆರೋಗ್ಯ ವಿಷಮಸ್ಥಿತಿಗೆ ಮುಟ್ಟಿದಾಗ ಅವರು ತಮ್ಮ ಊರಿಗೆ ವಾಪಸಾದರು. ಆದರೂ 'ಸಮಾಜ'ಕ್ಕೆ ಪ್ರಾಸಂಗಿಕ ಲೇಖನಗಳನ್ನು ಬರೆದು ಕಳುಹಿಸುವುದನ್ನು ಅವರು ನಿಲ್ಲಿಸಲಿಲ್ಲ. ಗೋಪರು ಹಾಸಿಗೆ ಹಿಡಿದಿರುವ ಸುದ್ದಿ ತಿಳಿದ ಕೂಡಲೇ ಹಿತೈಷಿಗಳೆಲ್ಲ ಅವರು ಇಳಿದುಕೊಂಡಿದ್ದ 'ಸತ್ಯವಾದಿ ಶಾಲೆ'ಗೆ ಧಾವಿಸಿ ಬಂದರು.

ಅಂತಿಮ ಘಳಿಗೆ ಸಮೀಪಿಸುತ್ತಿದ್ದುದನ್ನು ಅರಿತಿದ್ದರೂ ವಿಚಲಿತರಾಗದೆ ಗೋಪಬಂಧುಗಳು ತಮ್ಮ ಆಸ್ತಿಪಾಸ್ತಿಯನ್ನು ಹೇಗೆ ವಿಲೇವಾರಿ ಮಾಡಬೇಕೆಂದು ನಾಲ್ಕು ಪುಟಗಳಷ್ಟು ವಿವರಣೆಯನ್ನು ಬರೆಸಿದರು. ಬಳಿಕ ಪ್ರಾರ್ಥನೆಯನ್ನಾರಂಭಿಸಿ ಸಾಯಂಕಾಲ ೭-೨೫ಕ್ಕೆ ತಮ್ಮ ಕೊನೆಯುಸಿರೆಳೆದರು (೭-೬-೧೯೨೮).

ಸಾಕ್ಷಿಗೋಪಾಲದ ಬಕುಲವನದಲ್ಲಿ ಅವರ ಅಂತ್ಯಕ್ರಿಯೆ ಆಯಿತು. ಆಧುನಿಕ ಉತ್ಕಲದ ಜ್ಯೋತಿ ಅಂದು ಸಂಜೆ ಮನೆಮನೆಯಲ್ಲೂ ಬೆಳಗುವ ಜ್ಯೋತಿಯೊಂದಿಗೆ ಬೆರೆಯಿತು. ✡



ಇದ್ದಕ್ಕಿದ್ದಂತೆ ಒಂದು ರಾತ್ರಿ ಮನೆಯಲ್ಲಿ ಟೆಲಿಫೋನ್ ಗಂಟೆ ಬಾರಿಸಲು ಡಾಕ್ಟರ್ ಫೋನ್ ಕೈಗೆತ್ತಿಕೊಂಡ. ಆಚೆ ಕಡೆಯಿಂದ ಶಬ್ದ ಬಂದಿತು. "ಕೂಡಲೆ ಬಾ... ಇಲ್ಲದಿದ್ದರೆ ನಾನು ಸತ್ತೇಹೋಗುತ್ತೇನೆ."

ಡಾಕ್ಟರ್ ಕೇಳಿದ, "ನನಗೆ ಅರ್ಥವಾಗುತ್ತಿಲ್ಲ. ತಮಗೆ ಎಂತಹ ಕಾಯಿಲೆ ?" ಎಂದು.

ಸಮೀಪದಲ್ಲಿ ನಿಂತ ಡಾಕ್ಟರ ಮಗಳು ಫೋನ್ ಕಸಿದುಕೊಂಡು ನುಡಿದಳು: "ಈ ಫೋನ್ ತಮಗಲ್ಲ, ನನಗೆ."

-ಎನ್. ಕೆ. ನರಸಿಂಹಮೂರ್ತಿ

# ಬಿಳಿ ಕೂದಲು

ಪುರಾಣಿಕ

ಸಂಡೇ ಶೇವಿಂಗ್ ಮಾಡಿಕೊಳ್ಳುತ್ತಿದ್ದೆ. ಸಂಡೇ ಶೇವಿಂಗ್ ಎಂದರೆ ನನಗೆ ಖುಶಿ... ನಿತ್ಯದ ಶೇವಿಂಗ್ ನನಗಾಗಿ ಅಲ್ಲ, ಆಫೀಸಿಗೆ ತಡವಾದೀತೆಂದು ಗಡಿಬಿಡಿಯಲ್ಲಿ ಮಾಡಬೇಕಾಗುತ್ತದೆ. ಈಗ ಎಮರ್ಜೆನ್ಸಿ ಇದೆಯಲ್ಲಾ! ಸಂಡೇ ಶೇವಿಂಗ್ ನನಗಾಗಿ ಮತ್ತು ಕೇವಲ ನನಗಾಗಿ. ಬ್ಲೇಡು ಗಲ್ಲದ ಮೇಲೆ ಓಡಾಡುತ್ತಿರುವಾಗ ಮನಸ್ಸು ಬೇರೆ ಬೇರೆ ವಿಚಾರಗಳನ್ನು ಮೆಲುಕು ಹಾಕುತ್ತಿರುತ್ತದೆ. ಹಿಂದಿನ ಘಟನೆಗಳು, ನಾನು ನನ್ನ ಮಿತ್ರರೊಡನೆ ಮಾಡಿದ ಚರ್ಚೆಗಳು ರಾಜಕೀಯ, ಆಫೀಸಿನ ರಾಜಕೀಯ ಇತ್ಯಾದಿ ಇತ್ಯಾದಿ. ಹೀಗಾಗಿ ಕೆಲವೊಮ್ಮೆ ಶೇವಿಂಗ್ ಘಂಟೆಯಿಡೀ ನಡೆದಿರುತ್ತದೆ. ಕೊನೆಗೆ ನನ್ನವಳು ಬಂದು ನಲ್ವತ್ತು ದಾಟಿದರೂ ದಾಡಿ ಮಾಡಿಕೊಳ್ಳಲಿಕ್ಕೆ ಒಂದು ಘಂಟೆ ಬೇಕೆ? ಏನು, ಇನ್ನೊಂದು ಮದಿವೆ ಆಗುವ ವಿಚಾರವಿದೆಯೇ? ನೋಡಿಟ್ಟೀರಾ ಯಾರಾದರೂ ಟೈಪಿಸ್ಟ್ ಆಫೀಸಿನಲ್ಲಿ? ಎಂದೆಲ್ಲಾ ಗೇಲಿ ಮಾಡಿಬಿಡುವಳು!

ನಾನು ಆ ದಿನ ಯೋಚಿಸುತ್ತಿದ್ದದ್ದು, ಆ ಎತ್ತರದ ಹುಡುಗಿಯ ವಿಚಾರವಾಗಿ. ನಾನು ಮತ್ತು ನನ್ನ ಮಿತ್ರ ಗೋಳೂರು ಪೆಸೆಂಜರ್ ಗಾಡಿಯಲ್ಲಿ ಪ್ರಯಾಣ ಮಾಡುತ್ತಿದ್ದೆವು. ಗಾಡಿಯಲ್ಲಿ ಅಷ್ಟು ಗದ್ದಲವಿರಲಿಲ್ಲ. ಮಧ್ಯಮ [illegible] ಆದ ನಮಗೆ ರಾಜಕೀಯ ಮಾತಾಡುವುದು ಒಂದು ಹಾಬಿಯಾಗಿತ್ತು. ಗೋಳೂರ ಅವರು ಇಂದಿರಾ ಗಾಂಧಿ, ಜೆ. ಪಿ., ಇಪ್ಪತ್ತು ಅಂಶಗಳ ಮೇಲೆಲ್ಲಾ ಅಧಿಕಾರವಾಣಿಯಿಂದ ಮಾತಾಡುತ್ತಾರೆ. ನಾನು ಮಧ್ಯೆ ಹೂಂ, ಹಾಂ ಅನ್ನುತ್ತಿರುತ್ತೇನೆ. ಕೆಲವೊಮ್ಮೆ ವಾದವಿವಾದ ವಾಗುವುದೂ ಉಂಟು. ನಿಜವಾಗಿಯೆಂದರೆ ನನಗೆ ರಾಜಕೀಯದಲ್ಲಿ ಆಸಕ್ತಿಯಿಲ್ಲ, ತಿಳಿಯುವುದೂ ಇಲ್ಲ. ಕೆಲವೊಮ್ಮೆ ಹೀಗೆ ರಾಜಕೀಯ ಮಾತಾಡುತ್ತಿರುವಾಗ ಹುಡುಗಿಯರು ಚಲುವೆಯರು ಬಂದುಬಿಟ್ಟರೆ ನಾನು ಕೇವಲ ಹೂಂ ಅನ್ನುತ್ತಿರುತ್ತೇನೆ. ನಾನು ಗೆಜೆಟೆಡ್ ಆಫೀಸರ್ (ಎರಡನೆಯ ತರಗತಿ) ಎಂದೋ, ಸಂಸಾರವಂದಿಗನೆಂದೋ, ವಯಸ್ಸಿಗೆ ಮರ್ಯಾದೆಯೆಂದೋ ಹುಡುಗಿಯರು ಬಂದಾಗ ನೋಡಿಯೂ ನೋಡದವರಂತೆ ಇರುತ್ತೇನೆ. ನಮ್ಮ ವಾದವಿವಾದಕ್ಕೆ ಭಂಗ ಬಾರದಂತೆ ನೋಡಿಕೊಂಡು ಏನೂ ಆಗದವರಂತೆ ನಟಿಸುತ್ತೇನೆ. ಆದರೆ ಆ ದಿನ ಎತ್ತರದ ಹುಡುಗಿಯನ್ನು ನೋಡಿ ನಾನು ಮೂಕನಾಗಿಬಿಟ್ಟಿದ್ದೆ. ಅವಳ ದೊಡ್ಡ ದೊಡ್ಡ ಕಣ್ಣುಗಳು, strong white teeth, ಅವಳ ಇಬ್ಬರು ಬಾಯ್ ಫ್ರೆಂಡ್ಸ್– ಅವರ ನಿಸ್ಸಂಕೋಚ ವರ್ತನೆ! ಅವರು ನೇರವಾಗಿ ನಾವು ಕೂತಲ್ಲಿಗೆ ಬಂದು ನಮ್ಮ ಸಿಟಿನ ಮೇಲೆಯೇ ಕೂತುಬಿಟ್ಟಿದ್ದರು.



ಅವರ ಪಾಲಿಗೆ ನಾವಿದ್ದರೂ ಇಲ್ಲದಂತೆಯೇ. ಆ ಹುಡುಗಿ ಸುಂದರಿಯಾಗಿರಲಿಲ್ಲ. ಆದರೆ ಈಗಿನ ಕಾಲದಲ್ಲಿ ಹುಡುಗರು ಸುಂದರಿಯರನ್ನು ಮೋಹಿಸುವುದಿಲ್ಲವಂತೆ! ಅವರಿಗೆ ಬೇಕು bold and smart girls! ಸೌಂದರ್ಯ, ಶೃಂಗಾರವೆಲ್ಲಾ ಹಳೇ ವಿಚಾರವಾಗಿದೆಯಂತೆ!

ನಾನು ಆ ಹುಡುಗಿಯನ್ನು ನೋಡಿದ ಮೇಲೆ ಕಮ್ಮಿಯೆಂದರೆ ೧೦೦೮ ಹುಡುಗಿಯರನ್ನು ನೋಡಿದ್ದೇನೆ. ನಳಿನಾಕ್ಷಿಯರನ್ನು ಓರೆ ಕಣ್ಣಿನಿಂದ ನೋಡಿದ್ದೇನೆ. ಫಣಿವೇಣಿಯರನ್ನು ಆಸೆಗಣ್ಣಿನಿಂದ ವೀಕ್ಷಿಸಿದ್ದೇನೆ. ಮದಗಜಗಮನೆಯರನ್ನು ಹಿಂಬಾಲಿಸಿ ನೋಡಿದ್ದೇನೆ. ಆದರೆ ಅವರು ಯಾರೂ ನನ್ನ ಮನಸ್ಸಿನ ಮೇಲೆ ಇಷ್ಟು ಅಚ್ಚಳಿಯದೆ ನಿಂತಿರಲಿಲ್ಲ. ನನ್ನವಳು ಯಾವಾಗಲಾದರೂ, ಇಷ್ಟು ವಯಸ್ಸಾದರೂ ಎಷ್ಟು ಹುಡುಗಿಯರನ್ನು ನೋಡುತ್ತೀರಲ್ಲಾ ಎಂದು ಚೇಷ್ಟೆ ಮಾಡಿದಾಗ ನಾನು ಹೇಳುತ್ತಿದ್ದೆ–ಹುಡುಗಿಯರನ್ನು ನೋಡುವುದೂ ಗುರುಗಳ ಪ್ರವಚನ ಕೇಳುವುದೂ ಎಷ್ಟಾದರೂ ಹೆಚ್ಚೆಂದು ತಿಳಿಯಬಾರದು: ಏಕೆಂದರೆ ಎರಡೂ ದೀರ್ಘ ಕಾಲ ಪರಿಣಾಮ ಮಾಡುವುದಿಲ್ಲ ಎಂದು.

ಹೀಗೆ ಗತಚಿಂತನ ಮಾಡಿಕೊಂಡು ಶೇವಿಂಗ್ ಮಾಡಿಕೊಳ್ಳುತ್ತಿದ್ದಾಗ ನನ್ನ ಎದೆ ಝುಲ್ ಎಂದಿತು. ನನ್ನ ಹಣೆಯ ಎಡ ಭಾಗದಲ್ಲಿ ಕೂದಲು ಖಾಲಿಯಾಗಿ ಹೊಳೆಯುವ ತಂಬಿಗೆಯಂತಾಗಿದೆ. ನನ್ನವಳು ಕೆಲವೊಮ್ಮೆ ಪ್ರೀತಿಯಿಂದ ಕೈಯಾಡಿಸಿ, ತುಂಬ ಓದಿದರೆ ಹೀಗಾಗುತ್ತದೆ ಅನ್ನುತ್ತಾಳೆ. ಕಣ್ಣುಗಳಲ್ಲಿ ಕಿಡಿಗೇಡಿತನವಿರುತ್ತದೆ. ಮಾನವನ ತಲೆ ಇಷ್ಟು ಹೊಳೆಯುಲಿಕ್ಕೆ ಸಾಧ್ಯವಿದೆಯೇ? ಎಂದು ನಾನು ಕೆಲವೊಮ್ಮೆ ಕೌತುಕಪಟ್ಟಿದ್ದೇನೆ.

ನಾನು ಕನ್ನಡಿಯಲ್ಲಿ, ಮುಖ ನೋಡಿಕೊಂಡು ಶೇವಿಂಗ್ ಮಾಡಿಕೊಳ್ಳುತ್ತಿದ್ದಾಗ ಕಂಡದ್ದು ಒಂದು ದೈತ್ಯಾಕಾರದ ಬಿಳಿ ಕೂದಲು! ಬೋಳಾದ ಹಣೆಯ ಭಾಗದಲ್ಲಿ ಒಂದೇ ಒಂದು ಬಿಳಿ ಕೂದಲು ಕೊಬ್ಬಿದ ಕೋಳಿಯಂತೆ ತಲೆಯೆತ್ತಿ ನಿಂತಿತ್ತು!

ನನಗೆ ಹೊಟ್ಟೆಯಲ್ಲಿ ತಳಮಳವಾಗಿ ಅಸಹ್ಯವೆನಿಸಿತು. ನಿನ್ನೆ ರಾತ್ರಿಯವರೆಗೆ ಇಲ್ಲದ್ದು, ದಿನ ಬೆಳಗಾದೊಡನೆ, ಸತ್ತು ಬಿದ್ದ ಹೆಬ್ಬಾವಿನಂತಿದ್ದ ಈ ದೈತ್ಯಾಕಾರದ ಬಿಳಿ ಕೂದಲು ಎಲ್ಲಿಂದ ಬಂತು! ಇಷ್ಟರಲ್ಲೇ ನನ್ನವಳು ನೋಡಿರಲಿಕ್ಕಿಲ್ಲ. ಅವಳು ನೋಡುವುದರೊಳಗಾಗಿ ಅದನ್ನು ಕಿತ್ತು ಎಸೆಯಲೇಬೇಕು. ಇಂಥ ನಾಜೂಕು ಸಂದರ್ಭದಲ್ಲಿ ಅವಳು ಎಲ್ಲಿಂದಲೋ

ಪ್ರತ್ಯಕ್ಷವಾಗಿ ಹಿಡುತ್ತಾಳೆ.

ನನ್ನ ಮದುವೆ ಸಂದರ್ಭದಲ್ಲಿ, ನನ್ನ ಮದುವೆ ಏರ್ಪಡಿಸಿದವರು, ನನ್ನ ಮೂಕ ಸಮ್ಮತಿಯಿಂದ ಒಂದು ಸುಳ್ಳು ಹೇಳಿದ್ದರು. ಅದು ನನ್ನ ವಯಸ್ಸಿನ ವಿಚಾರವಾಗಿ. ಹುಡುಗ ಸಂಭಾವಿತ, ತುಂಬ ಓದಿದವ, ವಯಸ್ಸು ಕೇವಲ ೨೬ ಎಂದಿದ್ದರು. ನನಗೆ ಆಗ ೩೩ ದಾಟಿತ್ತು. ನನ್ನವಳಿಗೆ ಅದು ಹೇಗೋ ನನ್ನ ಡೇಟ್ ಆಫ್ ಬರ್ಥ್‌ನ ಬಗ್ಗೆ ಅನುಮಾನವಿದ್ದಂತಿದೆ. ಅವಳಿಗೆ ಯಾರೋ ನನಗೆ ಮದುವೆಯಾದಾಗ ೩೩ ದಾಟಿತ್ತು. ಎಂದು ಹೇಳಿದ್ದಾರೆ. ನಾನು ಅದನ್ನು ಅಲ್ಲಗಳೆಯುತ್ತಾ ಬಂದಿದ್ದೇನೆ. ಆದರೆ ಈಗ ಈ ಬಿಳಿ ಕೂದಲು!

ಈ ದಿನ ಒಂದು ಬಿಳಿ ಕೂದಲು ಕಂಡದ್ದು ನಾಳೆ ಎರಡಾದರೆ? ಮುಂದೆ ನಾಲ್ಕು! ಎಂಟು!! ಹದಿನಾರು!!! ನಾನು ಮುದುಕನಾದೆನೇ! ಓಹ್! ಭಯ ಆತಂಕ. ಅಸಹ್ಯ ಭಾವನೆಗಳೊಡನೆ ಎರಡು ಬೆರಳುಗಳಿಂದ ಆ ಬಿಳಿ ಕೂದಲನ್ನು ಕಿತ್ತಿ ಒಗೆಯಬೇಕೆಂದಿದ್ದೆ. ಆದರೆ ಆ ಒಂದು ಬಿಳಿ ಕೂದಲನ್ನು ಕಿತ್ತಿ ಒಗೆಯುವುದು ನಾನು ಎಣಿಸಿದಷ್ಟು ಸುಲಭವಾಗಿರಲಿಲ್ಲ. ಅದು ನೀರೊಳಗಿನಿಂದ ಮೀನವನ್ನು ಕೈಯಲ್ಲಿ ಹಿಡಿಯಲು ಪ್ರಯತ್ನಿಸಿದಂತೆ ಕೈಗೆ ಸಿಕ್ಕಿದಂತಾಗುತ್ತದಷ್ಟೇ. ಕಿತ್ತು ಎಳೆದಾಗ ಕೈಯಲ್ಲಿ ಎರಡು ಕರಿ ಕೂದಲು ಬಂದಿತ್ತು. ಬಿಳಿ ಕೂದಲು ಎವರೆಸ್ಟಿನಂತೆ ಅಜೇಯವಾಗಿಯೇ ಉಳಿದಿತ್ತು!

ನಾನು ಕಸಿವಿಸಿಯಲ್ಲಿ ಬಿದ್ದಿದ್ದಾಗ ನನ್ನವಳು ಅದೆಲ್ಲಿಂದಲೋ ಬಂದೇಬಿಟ್ಟಳು. ಹಾಗೆ ಎಷ್ಟು ಬಿಳಿ ಕೂದಲು ಕೀಳುತ್ತೀರಿ? ಇಲ್ಲಿ ನೋಡಿ! ಅಲ್ಲಿ ನೋಡಿ! ಎಷ್ಟಿದೆ! ಇವೆಲ್ಲಾ ಕಿತ್ತಿ ಬಿಟ್ಟರೆ ತಲೆ ಬೋಳಾಗುವುದೇ ಸರಿ ಎಂದಳು. ಹ್ಹಾ, ಹ್ಹಾ ಮುರ್ಝೀ ಬುಡ್ಡಾ ಮಿಲ್ ಗಯಾ! ಬುಡ್ಡಾ ಮಿಲ್ ಗಯಾ! ಎಂದು ರಾಗ ಎಳೆದಳು. ನನ್ನ ಮಕ್ಕಳೂ ಬುಡ್ಡಾ ಮಿಲ್ ಗಯಾ, ಬುಡ್ಡಾ ಮಿಲ್ ಗಯಾ ಎಂದು ಕುಣಿಯಲು ಶುರು ಮಾಡಿದವು.

ನನಗೆ ಏಕೋ ವಿಪರೀತ ಸಿಟ್ಟು ಬಂದುಬಿಟ್ಟ[illegible] ಹುಡುಗರಿಗೆ ಎರಡೆರಡು ಬಾರಿಸಿಬಿಟ್ಟೆ! ನನ್ನವಳಿಗೆ ಕಣ್ಣು ಕೆಂಪಗೆ ಮಾಡಿ ಬಾಯಿಗೆ ಬಂದಂತೆ ಬೈದುಬಿಟ್ಟೆ. ರಸ ವಿರಸವಾಗಿತ್ತು. I had lost my (bald) head.

*

ಮಕ್ಕಳು ಮತ್ತು ನನ್ನ ಕೈ ಹಿಡಿದವಳು, ಹೀಗೆ ವಯಸ್ಸಿನ ಮೇಲೆ ಚೇಷ್ಟೆ ಮಾಡಿದಾಗ ಸಿಟ್ಟು ಮಾಡಿದ್ದು ಸರಿಯೆ? ಬಿಳಿ ಕೂದಲನ್ನು ತಪ್ಪಿಸಲಿಕ್ಕೆ ಯಾರಿಂದಲಾದರೂ ಸಾಧ್ಯವಿದೆಯೆ? ಹೀಗೇಕಾಯಿತು? ನಾನು ಗೆಜೆಟೆಡ್ ಆಫೀಸರ-(ಎರಡನೇ ತರಗತಿ)ನಾಗಿದ್ದರೂ ಹೀಗೇಕಾಯಿತು! ಎಂದೆಲ್ಲ ಯೋಚಿಸುತ್ತಿದ್ದೆ.

ಗಂಡಹೆಂಡಿರ ಎಲ್ಲಾ ಮನಸ್ತಾಪಗಳಿಗೂ ಪ್ರಕೃತ ಕಾರಣ ನೆಪ ಮಾತ್ರವಾಗಿದ್ದು ಮುಖ್ಯ ಕಾರಣ ಬೇರೆಯೇ ಇರುತ್ತದಷ್ಟೆ! ಈಗಲೂ ಹಾಗೆಯೇ ಆಗಿತ್ತು. ಆ ದಿನ ನಾನು ಟ್ರೇನಿನಲ್ಲಿ ನೋಡಿದ [illegible] ಹುಡುಗಿಯೂ ಅವಳ ಉದ್ದ ಕೂದಲಿನ ಬಾಯ್ ಫ್ರೆಂಡ್ಸ್ ಮತ್ತು ಅವಳ ಸ್ವಚ್ಛಂದ, ಚೆಲ್ಲಾಟಗಳೂ ನನ್ನ ತಲೆ ಕೆಡಿಸಿದ್ದವು.

ಆ ದಿನ ನಾನೂ ನನ್ನ ಮಿತ್ರ ಗೋಳೂರವರೂ ಪೆಸೆಂಜರ್ ಗಾಡಿಯಲ್ಲಿ ಪ್ರಯಾಣ ಮಾಡುತ್ತಿದ್ದೆವು. ಎರಡು ಉದ್ದ ಕೂದಲಿನ ಹುಡುಗರೂ ಆ ಹುಡುಗಿಯೂ ಒಂದು ಸ್ಟೇಶನ್‌ನಲ್ಲಿ ನಮ್ಮ ಡಬ್ಬಿಯೊಳಗೆ ಬಂದಿದ್ದರು. ಬಂದವರು ನೇರವಾಗಿ ನಮ್ಮ ಸೀಟಿನಲ್ಲಿಯೇ ತಮ್ಮದೇ ಜಾಗವೆನ್ನುವಂತೆ ನಿಸ್ಸಂಕೋಚವಾಗಿ ಕೂತುಬಿಟ್ಟರು. ನನ್ನ ಮಿತ್ರರು, ಸಂಕೋಚದಿಂದ, ಅವರಾಗಿಯೇ ಆ ಹುಡುಗರಿಗೆ ಜಾಗ ಬಿಟ್ಟು ಕೂಡಬೇಕಾಯಿತು. ಬಂದ ಹುಡುಗರಿಗೆ, ಜಾಗ ಆಕ್ರಮಣ ಮಾಡುವ ಧೂರ್ತತನವಾಗಲೀ ದರ್ಪವಾಗಲೀ ಇದ್ದಂತೆ ನನಗೆ ಅನಿಸಲಿಲ್ಲ. ಅವರ ಪಾಲಿಗೆ ನಾವು ಇದ್ದರೂ ಇಲ್ಲದಂತೆಯೇ! ಅಜುಬಾಜುವಿನಲ್ಲಿ ಕೂತವರು ಯಾರು? ಏನು? ಎಂಬ ಯಾವ ವಿಚಾರವೂ ಇಲ್ಲದೆ ಅವರು ತಮ್ಮ ಸ್ವಚ್ಛಂದ ಚೆಲ್ಲಾಟದಲ್ಲಿ ಮಗ್ನರಾದರು.

ಹುಡುಗಿ ೨೦–೨೨ರವಳು ಇರಬಹುದು. ಯಾವುದೇ ಅಳತೆಗೋಲಿನಿಂದಲೂ ಅವಳನ್ನು

ಸುಂದರಿಯೆನ್ನಲಾಗದು. ಎಣ್ಣೆ ಕಪ್ಪು ಮೈಬಣ್ಣ, ಎತ್ತರ, ದೊಡ್ಡ ದೊಡ್ಡ ಕಣ್ಣುಗಳು, ನಿರ್ಭಯ ನಿಸ್ಸಂಕೋಚ ವರ್ತನೆ; bold and smart ! ಹುಡುಗರಿಬ್ಬರೂ ಲವರ್ಸ್ ಇದ್ದಿರಬಹುದೆ ? ಏನೇನೋ ಆಡಿಕೊಂಡು ತುಂಬಾ ನಗುತ್ತಿದ್ದರು. ಹುಡುಗಿ ಒಂದು ಗುಲಾಬಿ ಹೂವನ್ನು ಕಿವಿಗೆ ತಾಗಿಸಿಕೊಂಡಿದ್ದಳು. ಹುಡುಗರಿಬ್ಬರೂ ಹೂವನ್ನೂ ಅವಳ ಕೂದಲನ್ನೂ ಮೂಸಿನೋಡಿಕೊಂಡು ತುಂಬಾ ಪರಿಮಳವೆಂಬಂತೆ ಅಭಿನಯಿಸುತ್ತಿದ್ದರು, ತುಂಬಾ ನಗುತ್ತಿದ್ದರು.

ನನಗೆ ಅವರು ಏನು ಮಾತಾಡುತ್ತಾರೆ, ಏತಕ್ಕೆ ನಗುತ್ತಾರೆ, ಅವರ ಫೇವರಿಟ್ ಟಾಪಿಕ್ ಏನು ಎಂದು ತಿಳಿದುಕೊಳ್ಳಬೇಕೆಂದು ಅನಿಸಿತು. ಇಂತಹ ಸಂದರ್ಭಗಳಲ್ಲಿ ನಾನು ಒಂದು ಪೇಪರನ್ನೋ ಪುಸ್ತಕವನ್ನೋ ಮುಖದ ಮುಂದಕ್ಕೆ ಹಿಡಿದುಕೊಂಡು ಗಂಭೀರವಾಗಿ ಓದುವಂತೆ ನಟಿಸಿ ಮುಖವೆತ್ತಿ ಬೇಸರದ ಮುಖವಾಡದಿಂದ ಹುಡುಗಿಯರನ್ನು ನೋಡುತ್ತೇನೆ. ಹುಡುಗಿಯರನ್ನು ನೋಡುವುದಕ್ಕೆ ಇದೇ ಸೂಕ್ತ ವಿಧಾನ. ನೇರವಾಗಿ ಹುಡುಗಿಯರನ್ನು ನೋಡುವುದು ಅಸಭ್ಯತನ.

ನನ್ನ ಮಿತ್ರ ಗೋಳೂರವರು ಆಗ ಪ್ರಸಕ್ತ ರಾಜಕೀಯ ವಿಚಾರವಾಗಿ ಮಾತಾಡುತ್ತಿದ್ದರು. ಪ್ರಧಾನಿಯವರ ೨೦ ಅಂಶಗಳ ಆರ್ಥಿಕ ಯೋಜನೆಗಳ ವಿಚಾರವಿರಬೇಕು. ನಾನು ಇನ್ನು ಸಾಕುಮಾಡಿರೆಂದು ಸನ್ನೆ ಮಾಡಿದೆ. ಪ್ರಧಾನಿಯವರ ೨೦ ಅಂಶಗಳ ಯೋಜನೆಗೆ ನನ್ನ ಸಂಪೂರ್ಣ ಸಹಾನುಭೂತಿ ಇದ್ದೇ ಇದೆ. ನನ್ನ ಮಿತ್ರರು ಒಳ್ಳೆಯ ಮಾತುಗಾರರು. ಕಾರ್ಯಕ್ರಮದ ಕೊನೆಗೆ ಧನ್ಯವಾದ ಹೇಳಲು ಬರುವ ಮಹಾಕಾರ್ಯದರ್ಶಿಗಳಂತೆ ಯಾರಿಗೂ ಬೇಡವಾದ ಭಾಷಣದಿಂದ ಬೋರು ಮಾಡುತ್ತಿದ್ದರು. ನನಗೆ ಗೋಳೂರು ಆ ಘಳಿಗೆಯಲ್ಲಿ ತುಂಬಾ ಅಸಹ್ಯ ಮನುಷ್ಯನಂತೆ ಕಂಡರು. ಅವರ ಮೂಗಿನ ಸೊಳ್ಳೆಗಳಲ್ಲಿ ಕೂದಲು ತುಂಬಿ ಜಾಗವಿಲ್ಲದೆ ಹೊರಗೆ ಬಂದಿದೆ. ಥೂ, ಅಸಹ್ಯ ಮನುಷ್ಯ...

ಹಾಗೆ ನೋಡಿದರೆ, ನಾನು ಗೋಳೂರವರ ಭಾಷಣಕ್ಕೂ ಅವರ ೨೦ ಅಂಶಗಳ ಆರ್ಥಿಕ ಯೋಜನೆಗಳಿಗೂ ಗೋ ಟು ಹೆಲ್ ಅನ್ನಬಹುದಾಗಿತ್ತು. ಆ ಹುಡುಗಿಯನ್ನು ನೇರವಾಗಿ ದುರುಗುಟ್ಟಿ ನೋಡಿದ್ದರೂ ಯಾರೂ ಏನೂ ಅನ್ನುತ್ತಿರಲಿಲ್ಲ. ನನ್ನ ಕೈಹಿಡಿದವಳಂತೂ ಇಲ್ಲಿರಲಿಲ್ಲ.

ಆದರೆ ನಾನು ಇಷ್ಟು ವರ್ಷಗಳಿಂದ ಹುಡುಗಿಯರನ್ನು ನೋಡುತ್ತಿದ್ದರೂ ಕೇವಲ ಓರೆಗಣ್ಣಿನಿಂದಷ್ಟೇ ನೋಡುತ್ತಾ ಬಂದಿದ್ದೇನೆ. ಹುಡುಗಿಯರನ್ನು ಕದ್ದು ಮುಚ್ಚಿ ನೋಡುವುದರಲ್ಲಿಯೇ ಸ್ವಾರಸ್ಯವಿರುತ್ತದೆ. ಹೆಂಗಸರಿಗೆ ನಾಚಿಕೆಯೇ ಭೂಷಣವೆಂದು ಯಾವನೋ ಕವಿ ಹೇಳಿದ್ದಾನಲ್ಲ. ಹಾಗೆಯೇ ಗಂಡಸರು ಕಳ್ಳ ನೋಟದಿಂದಲೇ ಹೆಂಗಸರ ಲಾವಣ್ಯವನ್ನು ಸವಿಯಬಹುದೆಂದು ನಾನು ದೃಢವಾಗಿ ನಂಬಿದ್ದೇನೆ. ವಿಶ್ವಾಮಿತ್ರ ಮೇನಕೆಯರ ನೃತ್ಯನಾಟಕವನ್ನು ನೋಡಿದ್ದೇನೆ. ನಿರ್ಜನಾರಣ್ಯದಲ್ಲಿ ಯಾರೂ ನೋಡುವವರು ಇಲ್ಲವೆಂದು ಆ ಮಹಾಮುನಿಗಳು ದಿವ್ಯಚಕ್ಷುಸ್ಸಿನಿಂದ ನೋಡಿ ತಿಳಿದಿದ್ದರೂ ಅವರು ಮೇನಕೆಯನ್ನು ನೋಡಿದ್ದು ಓರೆಗಣ್ಣಿನಿಂದ. ಕೃಷ್ಣ ಪರಮಾತ್ಮನು ರಾಧೆಯನ್ನು ಈಗಲೂ ನೋಡುತ್ತಿರುವುದು ಓರೆಗಣ್ಣಿನಿಂದಲೇ !

ಆ ಹುಡಗಿಯನ್ನು ಓರೆಗಣ್ಣಿನಿಂದ ನೋಡಿದೆ. ನೇರ ಕಣ್ಣಿನಿಂದ ನೋಡಿದೆ. ದುರುಗುಟ್ಟಿ ನೋಡಿದೆ. ಅವಳಲ್ಲಿ ನೋಡುವಂಥದ್ದು ಏನೂ ಇರಲಿಲ್ಲ, ಆದರೂ ಅವಳಲ್ಲಿ ಏನೋ ಆಕರ್ಷಣೆ ಇದ್ದಂತಿತ್ತು. ಪ್ರಾಯಶಃ ಅವಳಲ್ಲಿ ಸ್ತ್ರೀಸಹಜವಾದ ಲಜ್ಜೆ, ಸಂಕೋಚವಿಲ್ಲದೇ ಇದ್ದುದೇ ಆಕರ್ಷಣೆಯಾಗಿತ್ತೇನೊ?

ನಮ್ಮ ದೇಶದಲ್ಲಿ, ಹೆಂಗಸರನ್ನು ಅಡಿಗೆಯ ಮನೆಯಲ್ಲೋ ಪರದೆಯ ಒಳಗೋ ಬಹಳ ಕಾಲದಿಂದ ಇಟ್ಟಿದ್ದೇವೆ. ಅವರು ಈಗ ಹೊರಗೆ ಬರಬೇಕೆನ್ನುತ್ತಾರೆ. ವಿದ್ಯಾಭ್ಯಾಸಗಳಲ್ಲಿ ಕ್ರೀಡೆಗಳಲ್ಲಿ, ನೌಕರಿಗಳಲ್ಲಿ, ಮತ್ತು ರಾಜಕೀಯದಲ್ಲೂ ಹೆಂಗಸರು ಈಗ ಸಾಕಷ್ಟು ಮುಂದೆ ಬಂದಿದ್ದಾರೆ. ಈಗ ಒಳ್ಳೆಯ ಕ್ರಿಕೆಟ್ ಟೆಸ್ಟ್ ಮ್ಯಾಚ್‌ಗಳನ್ನೂ ಆಡುತ್ತಿದ್ದಾರೆ. ಒಳ್ಳೆಯ ಬ್ಯಾಟ್ಸ್ ಮನ್

ಇಲ್ಲದ ಈ ದೇಶದಲ್ಲಿ ಬ್ಯಾಟ್ಸ್‌ವಿಮೆನ್‌ಗಳಾದರೂ ಸಿಗುವಂತಾದರೆ ಅದು ಹೆಮ್ಮೆಯ ವಿಷಯವೇ.

ಎಷ್ಟರವರೆಗೆ ಹೆಂಗಸರು ಗಂಡಸರಂತೆ ಮುಂದುವರಿಯಬೇಕೆನ್ನುತ್ತಾರೋ ಅಥವಾ ಗಂಡಸರನ್ನು ಹಿಂದೆ ಹಾಕಬೇಕೆನ್ನುತಾರೋ ಅಷ್ಟರವರೆಗೆ ನಮಗೆ (ಗಂಡಸರಿಗೆ) ಯಾವ ಭಯವೂ ಇಲ್ಲ. ಕಾರಣ ಏನೇ ಆದರೂ ಹೆಂಗಸರು ಹೆಂಗಸರಾಗಿಯೇ ಉಳಿಯುತ್ತಾರೆ. ಕೇವಲ ಮುಂದೆ ಹಿಂದಿನ ಪ್ರಶ್ನೆ. ಹೆಂಗಸರು ಮುಂದಿದ್ದರೂ ಹಿಂದಿದ್ದರೂ ಒಟ್ಟಿನಲ್ಲಿ ಹೇಗಿದ್ದರೂ ಚಂದವೇ ಅನ್ನುವ ನಾನು.

ಅವರ ಆ ಎತ್ತರದ ಹುಡುಗಿ ನನ್ನ ತಲೆ ಕೆಡಿಸಿದಳು. ಅವಳಲ್ಲಿ ಹೆಂಗಸರಿಗಿರಬೇಕಾದ ಲಜ್ಜೆ, ಲಾವಣ್ಯ ಯಾವುದೂ ಇರಲಿಲ್ಲ. ಅವಳ ಬಾಯ್ ಫ್ರೆಂಡ್‌ಗಳಂತೆಯೇ ಅವಳಿಗೂ ಉದ್ದ ಕೂದಲು. ಆ ಹುಡುಗರಂತೆಯೇ ಅವಳಿಗೂ ಮದುವೆ, ಮನೆ, ಮಕ್ಕಳೆಂಬ ಯಾವ ಚಿಂತೆಯೂ ಪರಿವೆಯೂ ಇಲ್ಲ. ಅವರು ಹಿಂದೆ ಮುಂದೆ ಯಾರೂ ಇಲ್ಲದ Individualists.

ಹೆಂಗಸರಿಗೆ ಸ್ವಲ್ಪವಾದರೂ ಲಜ್ಜೆ ಬೇಕು. ಇಲ್ಲದಿದ್ದರೂ ಇದ್ದಂತೆ ನಟಿಸಬೇಕು. ಹೆಂಗಸರಿಗೆ ಲಜ್ಜೆ ಇದ್ದರಷ್ಟೇ ಗಂಡಸು ಜಾತಿಯಲ್ಲಿ, ಪೌರುಷವೆಂಬ ವಸ್ತು ಉತ್ಪನ್ನವಾಗುತ್ತದೆ. ಇಲ್ಲದಿದ್ದರೆ, ಪೌರುಷವೆಂಬ ಪದಕ್ಕೆ ಅರ್ಥವೇ ಇಲ್ಲದಂತಾಗುತ್ತದೆ. ಲಜ್ಜೆಯ ಸೌಂದರ್ಯವನ್ನೇ ಅರಿಯದ ಆ ಎತ್ತರದ ಹುಡುಗಿಯನ್ನು, ಅವರ ಜೊತೆಗಿದ್ದ ಪೌರುಷಹೀನರಾದ ಹುಡುಗರನ್ನೂ ನೋಡಿ ನಮ್ಮ ಕಾಳಿದಾಸ ಹುಟ್ಟಿದ ದೇಶದಲ್ಲಿ, ಶೃಂಗಾರ ಲಾವಣ್ಯಗಳೆಲ್ಲ ಮಾಯವಾಗಿ. ಕೇವಲ ಬ್ಲ್ಯಾಕ್ ಅಂಡ್ ವೈಟ್ ಚಿತ್ರಗಳಂತಾಗುವುದನ್ನು ನೆನೆಸಿಕೊಂಡೆ, ಅಯ್ಯೋ ಅನಿಸಿತು.

*

ಈಗ ನಾನು ಹುಡುಗಿಯರ ಕಡೆಗೆ ನೋಡುವುದನ್ನು ನಿಲ್ಲಿಸಿಬಿಟ್ಟಿದ್ದೇನೆ. ✡

---

**ಕಳೆದ ಅಕ್ಟೋಬರಿನಲ್ಲಿ ಕಾಲೇಜಿಗೆ ಬಿಡುವಿದ್ದಾಗ ನಾನು ಮೈಸೂರಿನಲ್ಲಿರುವ ನನ್ನ ಅಕ್ಕನ ಮನೆಗೆ ಹೋಗಿದ್ದೆ. ಅಲ್ಲಿ ಒಂದು ಸ್ವಾರಸ್ಯಕರ ಘಟನೆ ನಡೆಯಿತು.**

**ಜೀವಶಾಸ್ತ್ರದ ವಿದ್ಯಾರ್ಥಿಯಾದ ನಾನು ಒಂದು ದಿನ ಕಪ್ಪೆಯ ಬಗೆಗೆ ಓದಿಕೊಳ್ಳುತ್ತಿದ್ದಾಗ ನನ್ನ ಭಾವನವರು ತಮ್ಮ ಮಿತ್ರರೊಡನೆ ಹೊರಗಿನಿಂದ ಬಂದರು. ಅದೂ ಇದೂ ಮಾತಾಡುತ್ತಿರುವಾಗ ಅಕಸ್ಮಾತ್ತಾಗಿ ಮನೆಗೆ ಬಂದ ಮಿತ್ರರ ಕಣ್ಣಿಗೆ ಮಕ್ಕಳಾಡುವ ಒಂದು ಆಟಿಕೆ ಬಿದ್ದು ಅವರು ತಮಾಷೆಗಾಗಿ ಅದರಿಂದ ಗೊಟರ್ ಗೊಟರ್ ಎಂಬ ಶಬ್ದ ಹೊರಡಿಸತೊಡಗಿದರು. ಅದನ್ನು ಕೇಳಿ ಕೇಳಿ ಬೇಸರಗೊಂಡ ನಮ್ಮನೆಯ ಹುಡುಗಿ, "ಅದೇನು ಸಾರ್, ಕಪ್ಪೆಯ ಹಾಗೆ ಗೊಟರ್ ಗೊಟರ್ ಎಂದು ಸದ್ದು ಹೊರಡಿಸುತ್ತೀದ್ದೀರಲ್ಲಾ? ಬೇಸರವಾಗುವುದಿಲ್ಲವೇ?" ಎಂದು ಕೇಳಿದ. ಆಗ ನಾನು ತಮಾಷೆಗಾಗಿ, ಗಂಡು ಕಪ್ಪೆ ಮಾತ್ರ ಹಾಗೆ ಸದ್ದು ಮಾಡುತ್ತದೆ. ಏಕೆಂದು ಗೊತ್ತೆ? ಹೆಣ್ಣು ಕಪ್ಪೆಯನ್ನು ಕರೆದು ವಂಶವನ್ನು ಬೆಳೆಸಿಕೊಳ್ಳಲು" ಎಂದು ವಿವರಿಸಿದೆ.**

**ಭಾವನವರ ಆ ಮಿತ್ರರ ಸ್ವಭಾವವೂ ವಿಚಿತ್ರ. ಹುಡುಗಿಯ ಆಕ್ಷೇಪದಿಂದ ಸ್ವಲ್ಪವೂ ವಿಚಲಿತರಾಗದೆ ಗೊಟರ್ ಗೊಟರ್ ಶಬ್ದವನ್ನು ಮುಂದುವರಿಸಿಯೇ ಬಿಟ್ಟರು ಆದರೆ ಅದೇ ಕಾಲಕ್ಕೆ ಯಾವುದೋ ಕೆಲಸದ ನಿಮಿತ್ತದಿಂದ ಪಕ್ಕದ ಮನೆಯ ಯುವತಿ ಬಂದುಬಿಡುವುದೇ? ಎಲ್ಲರೂ ಗೊಳ್ಳೆಂದು ನಕ್ಕರು. ಈ ಘಟನೆಯ ನಂತರ ಆ ಮಿತ್ರರು ನಮ್ಮ ಮನೆಗೆ ಅನೇಕ ಸಲ ಬಂದಿದ್ದಾರೆ. ಆದರೆ ಆ ಆಟಿಕೆ ಆ ರೂಮಿನಲ್ಲಿ ಎಲ್ಲರಿಗೂ ಕಾಣುವಹಾಗೆ ಬಿದ್ದುಕೊಂಡಿದ್ದರೂ ಒಮ್ಮೆಯೂ ಅವರು ಅದನ್ನು ಕೈಗೆತ್ತಿಕೊಂಡಿದ್ದನ್ನು ನೋಡಿಲ್ಲ.**

**- ಜಿ. ಶ್ರೀಧರ**

ಹಾಸಿನಿಯ ಶಾಪದಿಂದ ಹೊಯ್ಸಳ ರಾಜ್ಯ ನಷ್ಟವಾಯಿತೆ? ಇದೊಂದು ಐತಿಹಾಸಿಕ ಆಯಿಖ್ಯಾಕೆ



ಕೇಶವ ಪಟಿ



# ಸೂರ್ಯಾಸ್ತ

ರಾಜಾ ವಿಷ್ಣುವರ್ಧನನ ಕಾಲದಲ್ಲಿ ದಕ್ಷಿಣ ಭಾರತದ ರಾಜ್ಯಗಳಲ್ಲೆಲ್ಲ ಹೊಯ್ಸಳರ ರಾಜ್ಯ ಪ್ರಸಿದ್ಧವಾಗಿತ್ತು. ಆದರೆ ವಿಷ್ಣುವರ್ಧನನ ತರುವಾಯ ಹೊಯ್ಸಳ ರಾಜ್ಯದ ವೈಭವ ಕ್ಷೀಣಿಸುತ್ತಾ ಮೂರನೇ ಬಲ್ಲಾಳನ ಕಾಲಕ್ಕೆ ಸಂಪೂರ್ಣವಾಗಿ ನಾಶವಾಯಿತು.

ಮೂರನೆಯ ಬಲ್ಲಾಳನು ಪ್ರಸಿದ್ಧ ಹೊಯ್ಸಳ ವಂಶದವನೇ ಆಗಿದ್ದರೂ ಅವನ ಪೂರ್ವಿಕರಲ್ಲಿನ ದೂರದರ್ಶಿತ್ವ, ಸಹಿಷ್ಣುತೆ, ಔದಾರ್ಯಗಳಿಗೆ ಬದಲಾಗಿ ಈರ್ಷ್ಯೆ, ಅಸೂಯೆ, ಸ್ತ್ರೀ ವ್ಯಾಮೋಹ, ಹಟಮಾರಿತನಗಳು ಮನೆಮಾಡಿ ಕೊಂಡಿದ್ದವು. ಅವನಿಗೆ ವಜ್ರಬಲ್ಲಾಳನೆಂಬ ಸೋದರನೂ ಬಲ್ಲಾಳದೇವಿಯೆಂಬ ಸೋದರಿಯೂ ಇದ್ದರು.

ಹೊಯ್ಸಳ ರಾಜರಿಗೂ ಚಂದ್ರಗಿರಿಯ ರಾಜರಿಗೂ ಯಾವುದೋ ಕಾರಣದಿಂದ ಮನಸ್ತಾಪವಿತ್ತು. ಹೀಗಿರುವಾಗ ಒಂದು ದಿನ ಅಕಸ್ಮಾತ್ತಾಗಿ ಬಲ್ಲಾಳದೇವಿಯು ಚಂದ್ರಗಿರಿಯ ರಾಜಕುಮಾರನನ್ನು ಸಂಧಿಸಿದಳು. ಚಂದ್ರಗಿರಿಯ ರಾಜಕುಮಾರನೂ ಬಲ್ಲಾಳದೇವಿಯ ಹಾಗೆ ಬಹು ಸುಂದರ. ಹೀಗಾಗಿ ಮೊದಲ ನೋಟದಲ್ಲೇ ಅವರಲ್ಲಿ ಪ್ರೇಮದ ಕುಡಿಯೊಡೆಯಿತು. ಇದು ಅವಳ ಅಣ್ಣಂದಿರಿಗೆ ಗೊತ್ತಾದ ಕೂಡಲೇ ಅವರೆಲ್ಲ ಕೋಪದಿಂದ ಕಿಡಿಕಿಡಿಯಾದರು. ಹೇಗಾದರೂ ಮಾಡಿ ಈ ಸಂಬಂಧವನ್ನು ಮುರಿಯಬೇಕೆಂದು ನಿರ್ಧರಿಸಿದರು. ಆದರೆ ಮನ್ಮಥನ ಬಾಣ ಒಮ್ಮೆ ಹೃದಯದಲ್ಲಿ ನೆಟ್ಟಿತೆಂದರೆ ಯಾರಿಂದಾದರೂ ಅದನ್ನು ಹೊರ ತೆಗೆಯಲು ಸಾಧ್ಯವೆ? ಬಲ್ಲಾಳದೇವಿ ತನ್ನ ಅಣ್ಣಂದಿರ ಇಚ್ಛೆಗೆ ವಿರೋಧವಾಗಿ ಅವನನ್ನು ವರಿಸಿಯೇಬಿಟ್ಟಳು. ಇದರಿಂದಾಗಿ ಬಲ್ಲಾಳ ಸೋದರರಿಗೂ ಚಂದ್ರಗಿರಿಯ ರಾಜ ಮನೆತನದವರಿಗೂ ಇದ್ದ ದ್ವೇಷ ಇಮ್ಮಡಿಸಿತು.

ಒಮ್ಮೆ ದಿಲ್ಲಿಯ ಬಾದಶಹ ಅಲ್ಲಾವುದ್ದೀನ್ ದಕ್ಷಿಣದ ವಿಜಯಕ್ಕಾಗಿ ತನ್ನ ದಳಪತಿ ಮಲ್ಲಿಕ್ ಕಾಫರನನ್ನು ಕಳುಹಿಸಿದ್ದನು. ಆತ ದೇವಗಿರಿಯ ಯಾದವರನ್ನು ಓರಂಗಲ್ಲಿನ ಕಾಕತೀಯರನ್ನೂ ಗೆದ್ದು ದಕ್ಷಿಣದಲ್ಲಿ ರಾಮೇಶ್ವರದ ವರೆಗೂ ದಂಡ ಯಾತ್ರೆ ಮಾಡಿದ್ದ. ದ್ವಾರಸಮುದ್ರದ ಐಶ್ವರ್ಯ ಅಗಾಧವಾದದ್ದನ್ನು ಕೇಳಿ ಅವನಿಗೆ. ಬಾಯಲ್ಲಿ ನೀರು ಬಂತು. ಆದರೆ ಮಾಡುವುದೇನು? ಪರಾಕ್ರಮಿಗಳಾದ ಹೊಯ್ಸಳರನ್ನು ಸೋಲಿಸುವುದು ತನ್ನಿಂದಾಗದ ಕೆಲಸವೆಂಬುದೂ ಅವನಿಗೆ ಗೊತ್ತಿತ್ತು. ಆದ್ದರಿಂದ ಪ್ರತ್ಯಕ್ಷ ಯುದ್ಧ ಮಾಡುವುದಕ್ಕಿಂತ ಕುಟಿಲೋಪಾಯದಿಂದ ದ್ವಾರಸಮುದ್ರವನ್ನು ಜಯಿಸಬೇಕೆಂದು ಯೋಚಿಸಿ ತನ್ನ ಹಸ್ತಕಳಾದ ಸುಂದರ ನರ್ತಕಿಯೋರ್ವಳನ್ನು ದ್ವಾರಸಮುದ್ರಕ್ಕೆ ಕಳುಹಿಸಿದ. ಅವಳು ತಿರುಮಲಾಂಬೆ ಎಂಬ ಹೆಸರಿನಿಂದ ದ್ವಾರಸಮುದ್ರಕ್ಕೆ ಬಂದು ತನ್ನ ರೂಪ, ಯೌವನ, ಹಾವಭಾವಗಳಿಂದ ರಾಜನ ಮನಸ್ಸನ್ನು ಆಕರ್ಷಿಸಿ ಅವನ ರಾಣಿಯಾದಳು.

ಅನಂತರ ಮಲ್ಲಿಕ್‌ಕಾಫರನ ಕಾರ್ಯ ಸುಲಭವಾಯಿತು. ರಾಜ್ಯದ ರಹಸ್ಯಗಳೆಲ್ಲ ತಿರುಮಲಾಂಬೆಯ ಮೂಲಕ ಅವನಿಗೆ ಅವಗತವಾಗತೊಡಗಿದವು.

ಇತ್ತ ಚಂದ್ರಗಿರಿಯಲ್ಲಿ ಬಲ್ಲಾಳದೇವಿಯ ಹೊಟ್ಟೆಯಲ್ಲಿ ಅವಳ ಮಕ್ಕಳು ಹುಟ್ಟಿದರು. ಅವರಿಗೆ ಲಕ್ಕಣ್ಣ–ಈರಣ್ಣರೆಂದು ಹೆಸರಿಡಲಾಯಿತು. ತಾಯಿಯ ಹೊಟ್ಟೆಯಿಂದ ಪ್ರಾಣಕ್ಕೆ ಸಂಚಕಾರವೇ? ಬಲ್ಲಾಳ ಸೋದರರಿಗೆ ಈ ಸುದ್ದಿಯನ್ನು ಸಹಿಸಲಾಗಲಿಲ್ಲ. ಅವರು ಮೋಸದಿಂದ ಬಲ್ಲಾಳದೇವಿಯ ಗಂಡನನ್ನು ಕೊಲ್ಲಿಸಿ ತಮ್ಮ ಹಗೆತನವನ್ನು ತೀರಿಸಿಕೊಂಡರು. ತನ್ನ ಮಕ್ಕಳಿಗೂ ಅಣ್ಣಂದಿರಿಂದ ಅಪಾಯ ಸಂಭವಿಸಬಹುದೆಂದು ಬಲ್ಲಾಳದೇವಿ ಅವರನ್ನು ರಹಸ್ಯವಾಗಿ ಸಲಹತೊಡಗಿದಳು. ಕಾಲಕ್ರಮದಲ್ಲಿ ಆ ಮಕ್ಕಳು ಬೆಳೆದು ದೊಡ್ಡವರಾದರು.

ದ್ವಾರಸಮುದ್ರದ ವೈಭವ ಮತ್ತು ಅಲ್ಲಿಯ ಪ್ರಸಿದ್ಧ ದೇವಾಲಯಗಳ ಶಿಲ್ಪಕಲೆಯ ಬಗೆಗೆ ಕೇಳಿದ್ದ ಲಕ್ಕಣ್ಣ–ಈರಣ್ಣರು ಒಮ್ಮೆ ಅದನ್ನು ಕಣ್ಣಾರೆ ನೋಡುವ ಬಯಕೆಯನ್ನು ವ್ಯಕ್ತಪಡಿಸಿದಾಗ ಬಲ್ಲಾಳದೇವಿಯು ಯಾವುದೋ ಅವ್ಯಕ್ತ ಭೀತಿಯಿಂದ ಮಕ್ಕಳನ್ನು ಬೇಡವೆಂದು ತಡೆದಳು. ದ್ವಾರಸಮುದ್ರವನ್ನು ನೋಡುವ ಆಶೆ ಅವರಲ್ಲಿ ಎಷ್ಟು ಅದಮ್ಯವಾಗಿತ್ತೆಂದರೆ ಅವರಿಬ್ಬರೂ ತಾಯಿಯ ಮಾತನ್ನು ಕೇಳದೆ ಅಶ್ವಾರೂಢರಾಗಿ ದ್ವಾರಸಮುದ್ರದತ್ತ ಪ್ರಯಾಣ ಬೆಳೆಸಿದರು.

ಅವರು ಅಲ್ಲಿನ ವೈಭವವನ್ನು ಮನಸಾರೆ ನೋಡಿ ಕೆರೆಯ ದಂಡೆಯ ಮೇಲೆ ವಿಶ್ರಮಿಸುತ್ತಿದ್ದಾಗ ತಿರುಮಲಾಂಬೆಯು ಅವರಿಬ್ಬರನ್ನೂ ನೋಡಿದಳು. ಅವರ ರೂಪ, ಯೌವನಗಳಿಂದ ಮೋಹಿತಳಾಗಿ ಅವರ ಬಳಿ ಹೋಗಿ ಲಜ್ಜೆ ತೊರೆದು ಪ್ರೇಮಯಾಚನೆ ಮಾಡಿದಳು. ಲಕ್ಕಣ್ಣ–ಈರಣ್ಣರಿಗೆ ಅವಳ ನಡತೆ ಸರಿ ಬರಲಿಲ್ಲ. ಅವರು ಅವಳ ಕೋರಿಕೆಯನ್ನು ನಿರಾಕರಿಸಿದರು.

ತಿರುಮಲಾಂಬೆಗೆ ಅವಮಾನವಾದಂತಾಯಿತು. ಆಕೆ ಕೂಡಲೇ ಅರಮನೆಗೆ ಹಿಂತಿರುಗಿ ಬಂದು ರಾಜನಿಗೆ ಆ ಯುವಕರು ನನ್ನ ಮಾನಭಂಗ ಮಾಡುವ ಪ್ರಯತ್ನ ಮಾಡಿದರೆಂದು ದೂರಿಕೊಂಡಳು. ರಾಜ ಅವರನ್ನು ಹಿಡಿತರಿಸಿದನು. ಆ ಯುವಕರು ತಮ್ಮ ಪರಿಚಯವನ್ನು ಹೇಳಿ ತಿರುಮಲಾಂಬೆಯ ಅನುಚಿತವಾದ ವರ್ತನೆಯನ್ನು ವಿವರಿಸಿದರು. ಚಂದ್ರಗಿರಿಯ ರಾಜವಂಶ



ವನ್ನು ನಿರ್ಮೂಲಗೊಳಿಸುವ ಸುಸಂಧಿ ಬಲ್ಲಾಳ ಸೋದರರಿಗೆ ದೊರೆತಿತ್ತು. ತಿರುಮಲಾಂಬಿ ಆಡಿಸಿದಂತೆ ಆಡುವ ಸೂತ್ರದ ಗೊಂಬೆಯಾಗಿದ್ದ ಬಲ್ಲಾಳರಾಜ ವಿಚಾರಣೆಯಿಲ್ಲದೆ ಲಕ್ಕಣ್ಣ-ಈರಣ್ಣರಿಗೆ ಶೂಲದ ಶಿಕ್ಷೆಯನ್ನು ವಿಧಿಸಿದ.

ಈ ಸುದ್ದಿ ಬಲ್ಲಾಳದೇವಿಗೆ ತಿಳಿಯುವುದೇ ತಡ, ಒಂಟಿಯಾಗಿ, ಕುದುರೆಯೇರಿ ದ್ವಾರಸಮುದ್ರಕ್ಕೆ ಧಾವಿಸಿದಳು.

ಇದನ್ನರಿತ ರಾಜನು, ಅವಳನ್ನು ಯಾರೂ ಮಾತನಾಡಿಸಬಾರದೆಂದೂ ನೀರನ್ನು ಸಹ ಕೊಡಬಾರದೆಂದೂ ಹಾಗೆ ಯಾರಾದರೂ ಮಾಡಿದರೆ ಅವರನ್ನು ರಾಜದ್ರೋಹಿಗಳೆಂದು ಪರಿಗಣಿಸಿ ಮರಣದಂಡನೆ ನೀಡಲಾಗುವುದೆಂದೂ ರಾಜ್ಯದಲ್ಲೆಲ್ಲ ಡಂಗುರ ಹೊಡೆಸಿದ. ಹೀಗಾಗಿ ಬಲ್ಲಾಳದೇವಿಯನ್ನು ಮಾತನಾಡಿಸುವ ಧೈರ್ಯ ದ್ವಾರಸಮುದ್ರದಲ್ಲಿ ಯಾರಿಗೂ ಬರಲಿಲ್ಲ. ಬಾಯಾರಿಕೆಯಿಂದ ಪರಿತಪಿಸುತ್ತಿದ್ದ ಅವಳಿಗೆ ಆ ಮಹಾನಗರದಲ್ಲಿ ಒಂದು ತೊಟ್ಟು ನೀರು ದೊರೆಯುವುದೂ ಕಠಿಣವಾಯಿತು. ಕೊನೆಗೆ ಕುಂಬಾರನೊಬ್ಬ ಕನಿಕರದಿಂದ ಅವಳಿಗೆ ಮಡಕೆಯಲ್ಲಿ ನೀರು ಕೊಟ್ಟ. ಅವಳು ನೀರು ಕುಡಿದು ಶೂಲದ ಬನದ ಬಳಿಗೆ ಧಾವಿಸಿದಳು. ಆ ವೇಳೆಗಾಗಲೇ ಅಲ್ಲಿನ ದ್ವಾರ ಮುಚ್ಚಿತ್ತು.

ಶೂಲದ ಬನವನ್ನು ಸೇರಲು ವಿಶಾಲವಾದ ಕೆರೆಯನ್ನು ಸುತ್ತುವರಿದು ಹೋಗಬೇಕಾಗಿತ್ತು. ತಡ ಮಾಡುವಂತಿರಲಿಲ್ಲ. ಒಂದು ನಿಮಿಷ ತಡವಾದರೂ ತನ್ನ ಮಕ್ಕಳನ್ನು ನೋಡುವ, ಅವರನ್ನು ರಕ್ಷಿಸಲು ಯತ್ನಿಸುವ ಅವಕಾಶ ತಪ್ಪಿ ಹೋಗುತ್ತಿತ್ತು. ಕೊನೆಗೆ ಆಕೆ ಉಪಾಯಗಾಣದೆ ದಾರಿ ಮಾಡಿ ಕೊಡೆಂದು ಗಂಗಾಮಾತೆಯನ್ನು ಪ್ರಾರ್ಥಿಸಿ ಕೆರೆಯೊಳಗೆ ಇಳಿದಳು. ಆಶ್ಚರ್ಯವೆಂಬಂತೆ ಅವಳು ಮುಂದುವರೆದಂತೆಲ್ಲಾ ಕೆರೆಯ ನೀರು ಇಬ್ಭಾಗವಾಗಿ ಹಾದಿ ಕೊಟ್ಟಿತು ಎಂಬ ಆಖ್ಯಾಯಿಕೆಯಿದೆ.

ಬಲ್ಲಾಳದೇವಿ ಶೂಲದ ಬನವನ್ನು ಸೇರುವ ವೇಳೆಗಾಗಲೇ ಲಕ್ಕಣ್ಣ-ಈರಣ್ಣರನ್ನು ಶೂಲ ಸ್ತಂಭದ ಬಳಿ ನಿಲ್ಲಿಸಲಾಗಿತ್ತು. ಬಲ್ಲಾಳದೇವಿ ಅಣ್ಣನಾದ ರಾಜನ ಪಾದಗಳ ಮೇಲೆ ಬಿದ್ದು ನಿರಪರಾಧಿಗಳಾದ ತನ್ನ ಮಕ್ಕಳನ್ನು ಶೂಲಕ್ಕೇರಿಸಬಾರದೆಂದು ಪರಿಪರಿಯಾಗಿ ಬೇಡಿಕೊಂಡಳು. ಆದರೆ ಈ ವ್ಯಥೆಯಿಂದ ಕೂಡಿದ ರಾಜ ತಂಗಿಯ ಮಾತನ್ನು ಕಿವಿಗೆ ಹಾಕಿಕೊಳ್ಳಲಿಲ್ಲ. ಬದಲು, ಮಕ್ಕಳೊಂದಿಗೆ ಅವಳನ್ನು ಶೂಲಕ್ಕೇರಿಸುವಂತೆ ಆಜ್ಞೆಯಿತ್ತ. ಸಾಯುವ ಮುನ್ನ ಬಲ್ಲಾಳದೇವಿಯು ರಾಜನಿಗೆ, "ನಿನ್ನ ವಂಶ ನಾಶವಾಗಲಿ; ಈ ನಗರ ಹಾಳಾಗಲಿ; ನೀರಿತ್ತು ಉಪಕಾರ ಮಾಡಿದ ಕುಂಬಾರಗೇರಿ ಅಭಿವೃದ್ಧಿಯಾಗಲಿ." ಎಂದು ಶಾಪವಿತ್ತಳಂತೆ.

ರಾಜಾಜ್ಞೆ ನೆರವೇರಿಸಲ್ಪಟ್ಟಿತು. ಚಂದ್ರಗಿರಿಯ ರಾಜವಂಶ ನಿರ್ನಾಮವಾಯಿತೆಂದೂ ತನ್ನ ಪ್ರೇಯಸಿಯ ಮನಸ್ಸು ಸಮಾಧಾನವಾಯಿತೆಂದೂ ಹೊಯ್ಸಳ ರಾಜ ಸಂತಸಪಟ್ಟ. ಆದರೆ ಆ ಸಂತೋಷ ಹೆಚ್ಚುಕಾಲ ಉಳಿಯಲಿಲ್ಲ. ತಿರುಮಲಾಂಬೆಯಿಂದ ರಹಸ್ಯಗಳನ್ನೂ ರಾಜನ ಅವಿವೇಕವನ್ನೂ ಅರಿತ ಮಲ್ಲಿಕ್‌ಕಾಫರನು ಇದ್ದಕ್ಕಿದ್ದಂತೆ ಮುತ್ತಿಗೆ ಹಾಕಿದ. ಅವನಿಗೆ ತಿರುಮಲಾಂಬೆಯ ಕುತಂತ್ರಗಳೂ ಅವಳು ಗೂಢಚಾರಿಣಿಯೆಂಬುದೂ ಗೊತ್ತಾದಾಗ ಕಾಲ ಮೀರಿ ಹೋಗಿತ್ತು. ಆತ ಸಿಕ್ಕಷ್ಟು ಐಶ್ವರ್ಯವನ್ನು ಎತ್ತಿಕೊಂಡು ಓಡಿಹೋಗಲು ಪ್ರಯತ್ನಿಸಿದ. ಆದರೆ ದಾರಿಯಲ್ಲೇ ಮಲ್ಲಿಕ್‌ಕಾಫರನ ಸೈನಿಕರ ಕೈಲಿ ಸಿಕ್ಕುಬಿದ್ದ.

ಇಲ್ಲಿಗೆ ಹೊಯ್ಸಳರ ರಾಜ್ಯ ವೈಭವ ಕೊನೆಗೊಂಡಿತು. ಆ ಸಾಧ್ವಿಯ ಶಾಪವೋ ಎಂಬಂತೆ ದ್ವಾರಸಮುದ್ರವು ಹಾಳುಕೊಂಪೆಯಾಗಿ ಕಾಲಾಂತರದಲ್ಲಿ ಹಳೆಯಬೀಡೆಂದು ಹೆಸರಾಯಿತು. ಈಗಿನ ಹಳೆಯಬೀಡು ಗ್ರಾಮ ಅಂದಿನ ಕುಂಬಾರಗೇರಿಯಾಗಿತ್ತೆಂದು ಹೇಳುತ್ತಾರೆ. ✡





# ಸತ್ಯದ ಶಕ್ತಿ

ಮೂಲ ತಮಿಳು: ಮಧುರಂ ರಾಮಮೂರ್ತಿ
ಅನುವಾದ : ಪ್ರಮೀಳಾ ಪ್ರಹ್ಲಾದ್

"ಪಳನಿ ! ಪಳನಿ ! ಪಳನಿ ಟಿಕೆಟ್–"

"ಪಾಂ, ಪಾಂ; ಪಾಂ, ಪಾಂ."

"ಪಳನಿ, ತಿರುಚೂರ್, ನೆಮ್ಮಾರ, ಪೊಳ್ಳಾಚಿ..."

"ಪಾಂ ಪಾಂ."

ಬಸ್ ನಿಲ್ದಾಣದಿಂದ ಒಂದು ಫರ್ಲಾಂಗು ದೂರದವರೆಗೂ ಕೇಳಿಸುವಂತೆ ಆ ಹೆಳವನ ಕೊರಳೂ ಬಸ್ಸಿನ ಹಾರನ್ ಶಬ್ದವೂ ಒಂದನ್ನೊಂದು ಹಿಂಬಾಲಿಸುತ್ತಿದ್ದವು. ಹೇಳವ ಕೊನೆಗೆ 'ರೈಟ್' ಕೊಟ್ಟುಬಿಟ್ಟ. ಎದುರಿನ ಷೆಡ್ಡಿನಲ್ಲಿ ಕುಳಿತುಕೊಂಡು ಅಂದಿನ ದಿನಪತ್ರಿಕೆಯಲ್ಲಿ ಮುಳುಗಿದ್ದ ಕಂಡಕ್ಟರ್ ಪತ್ರಿಕೆಯನ್ನು ಮಡಿಸಿ ಕೈಯಲ್ಲಿ ತೆಗೆದುಕೊಂಡು, ಚರ್ಮದ ಚೀಲವನ್ನು ತೋಳಿಗೇರಿಸಿ ಬಸ್ಸಿನ ಕಡೆಗೆ ನಡೆದ. ಮರದಡಿಯಲ್ಲಿ ನಿಂತಿದ್ದ ಡ್ರೈವರ್ ಬೀಡಿಯನ್ನು, ಕೊನೆಯದಾಗಿ ಒಂದು ದಂ ಎಳೆದು ಎಸೆದುಬಿಟ್ಟು ಬಸ್ಸನ್ನು ಹತ್ತಿ ತನ್ನ ಸೀಟಿನಲ್ಲಿ ಕುಳಿತು ಬಲಿಷ್ಠವಾದ ಕೈಯಿಂದ ಹಾರನ್ನನ್ನು ಮತ್ತೊಮ್ಮೆ ಅಮುಕಿದ. ಏನೇ ಆದರೂ ಕೆಳಗೆ ನಿಂತು ಆ ಹೆಳವ ಎಬ್ಬಿಸಿದ ಹಾರನ್ ಶಬ್ದಕ್ಕೂ, ಡ್ರೈವರ್ ತನ್ನ ಅನುಭವಿ ಕರಗಳಿಂದ ಹೊರಡಿಸಿದ ಶಬ್ದಕ್ಕೂ ವ್ಯತ್ಯಾಸ ಎದ್ದೇ ಇತ್ತು. ಆ ಹೆಳವನೇನು ಡ್ರೈವರನೇ, ಕಂಡಕ್ಟರನೇ? ಇಲ್ಲ, ಅವನಿಗೆ ಯಾರಾದರೂ ಸಂಬಳವನ್ನಾದರೂ ಕೊಡುತ್ತಾರೋ? ದಿನವಿಡೀ ಬಸ್ ನಿಲ್ದಾಣದಲ್ಲಿ ನಿಂತುಕೊಂಡು ಬರುವ ಬಸ್ಸುಗಳನ್ನು ಸ್ವಾಗತಿಸಿ, ಹೋಗುವ ಬಸ್ಸುಗಳನ್ನು ಬೀಳ್ಕೊಡುವುದು ತಾನೇ ಅವನ ಕೆಲಸ? ಹುಟ್ಟು ಹೆಳವನಿಂದ ಬೇರೇನು ಕೆಲಸ ತಾನೇ ಸಾಧ್ಯ? ಹೇಗೋ ಅವನೇ ನನಗೆ ಗುಂಪಿನಲ್ಲಿ ನಿಲ್ಲುವ ಶ್ರಮ ತಪ್ಪಿಸಿ ಟಿಕೆಟ್ ತೆಗೆದುಕೊಟ್ಟು, ಮುಂದುಗಡೆ ಸೀಟಿನಲ್ಲಿ ಜಾಗವನ್ನೂ ಹಿಡಿದುಕೊಟ್ಟುಬಿಟ್ಟನು. ನಾನು ಅವನಿಗೆ ಅದಕ್ಕಾಗಿ ಕೊಟ್ಟ ಎಂಟಾಣೆ ದೊಡ್ಡ ಅವನ ಮಟ್ಟಿಗೆ ಐಶ್ವರ್ಯವೇ ಸರಿ.

ಅಂದು ಬೆಳಿಗ್ಗೆ ಗುರುವಾಯೂರಪ್ಪನನ್ನು ವಿಶ್ವರೂಪದಲ್ಲಿ ಕಣ್ತುಂಬ ನೋಡಿ, ಮಧ್ಯಾಹ್ನದ ಪೂಜೆಯನ್ನೂ ಆನಂದದಿಂದ ವೀಕ್ಷಿಸಿದ ತೃಪ್ತಿ ನನ್ನ ಹೃದಯವನ್ನು ತುಂಬಿತ್ತು. ಹಿಂದಿನ ದಿನ ಸಂಜೆಯಿಂದ ಇಂದು ಮಧ್ಯಾಹ್ನದವರೆಗೆ ಗುರುವಾಯೂರಪ್ಪನನ್ನು ಎಷ್ಟು ಬಾರಿ ದರ್ಶನ ಮಾಡಿದ್ದೇನೋ ನನಗೇ ತಿಳಿಯದು. ಗುಂಪಿನ ಜೊತೆ ಜೊತೆಯಲ್ಲೂ ಸ್ವಾಮಿ ಸನ್ನಿಧಿಯನ್ನು ಸುತ್ತಿ ಸುತ್ತಿ ಬಂದಿದ್ದೆ.

ಅವನ ಕೃಪಾದೃಷ್ಟಿ, ಜೀರುಪ ಅವನ ನಗುಮೊಗ ಮಗುವಿನ ನಗೆ ಹಾಗೆ ನನ್ನನ್ನು ಆಕರ್ಷಿಸುತ್ತಿತ್ತು. ಆದರೂ ಹತ್ತು ದಿನಗಳ ತೀರ್ಥಯಾತ್ರೆಯಲ್ಲಿ ಇನ್ನೂ ಹೋಗಬೇಕಾದ ಸ್ಥಳಗಳು ಸಾಕಷ್ಟಿದ್ದುವಲ್ಲ ! ಅಂತೆಯೇ ಎರಡು ಘಂಟೆಯ ಬಸ್ಸಿನಲ್ಲಿ ಪಳನಿಗೆ ಹೊರಟುಬಿಟ್ಟೆ. ಅಂದು ರಾತ್ರಿ ಪಳನಿಯಾಂಡವನನ್ನು ರಾತ್ರಿ ಪೂಜೆಯಲ್ಲಿ ನೋಡಿಬಿಡಬೇಕೆಂಬುದು ನನ್ನ ಯೋಜನೆ.

ಹೇಗೋ ಬಸ್ ಹೊರಟುಬಿಟ್ಟಿತು. ಕಂಡಕ್ಟರ್ ಬಸ್ಸಿನಲ್ಲಿದ್ದ ಪ್ರಯಾಣಿಕರ ಕಡೆಗೆ ಒಮ್ಮೆ ದೃಷ್ಟಿ ಹರಿಸಿದನು. ತನ್ನ ಬಳಿ ಇದ್ದ ಚಾರ್ಟನ್ನು ಒಮ್ಮೆ ನೋಡಿಕೊಂಡ.

"ಎಲ್ಲರೂ ಟಿಕೆಟ್ ತೆಗೆದುಕೊಂಡಾಯಿತಾ ?" ಎಂದು ಒಮ್ಮೆ ಕೇಳಿ ಮತ್ತೊಮ್ಮೆ ತಲೆ ಎಣಿಸಿದ. ಮುಂದಿನ ಸೀಟಿನಲ್ಲಿ, ಅಂದರೆ ಡ್ರೈವರನ ಹಿಂದಿನ ಸೀಟಿನಲ್ಲಿ ಕುಳಿತಿದ್ದ ಓರ್ವ ಸುಂದರ ಯುವತಿಯ ಮೇಲೆ ಅವನ ದೃಷ್ಟಿ ಒಂದು ಕ್ಷಣ ನಿಂತಿತು.

ತುಸು ತಡೆದು, "ನೀನು ವೇಲು ನಾಯರಿನ ಪತ್ನಿಯಲ್ಲವೇ ?" ಎಂದು ಮಲೆಯಾಳದಲ್ಲಿ ಕೇಳಿದ. ತುಸು ಚಿಂತೆಗೀಡಾದ ಮುಖದಿಂದ ಆ ಹೆಣ್ಣು ಹೌದೆಂದು ತಲೆಯಾಡಿಸಿದಳು.

"ನಾಯರ್ ಎವ್ವಿಡಿಯಾ ?"

"ಅವರು ಬರಲಿಲ್ಲ. ತುಂಬ ಕೆಲಸವಿತ್ತು."

"ನೀವು ಎಲ್ಲಿಗೆ ಹೋಗಬೇಕು ?"

"ನಾನು... ನಾನು ಪಳನಿಗೆ ಹೋಗಬೇಕು," ಎಂದು ಹೇಳಿ ಅದಕ್ಕೂ ಹೆಚ್ಚು ಮಾತನಾಡಲಿಚ್ಛಿಸದವಳಂತೆ ಕಿಟಕಿಯ ಕಡೆಗೆ ತಲೆ ತಿರುಗಿಸಿಕೊಂಡಳು.

ಕಂಡಕ್ಟರ್ ಅಷ್ಟಕ್ಕೆ ಬಿಡಲಿಲ್ಲ. "ಟಿಕೆಟ್ ಆಯಿತೇ ?" ಎಂದು ಕೇಳಿದ.

"ಆಯಿತು."

"ಟಿಕೆಟ್ ತೋರಿಸಿ, ನಾನು ನೋಡಬೇಕು."

ಇಷ್ಟರಲ್ಲಿ ಬಸ್ಸಿನ ಹಿಂದುಗಡೆ ಸೀಟಿನಲ್ಲಿದ್ದ ಒಬ್ಬ ಯುವಕ ಹೇಳಿದ: "ಆ ಹುಡುಗಿಯ ಟಿಕೆಟ್ ಇಲ್ಲಿದೆ."

ಹನೆರಡೆ ನಂಬರ್ ಸೀಟಿನಲ್ಲಿದ್ದ ಆ ಯುವಕ ಸ್ವಲ್ಪ ಕಡಿಮೆ ದರ್ಜೆಯ ಟೆರಿಲಿನ್ ಪ್ಯಾಂಟು, ಅದಕ್ಕೂ ಕಡಿಮೆ ದರ್ಜೆಯ ಹಳದಿ ಬಣ್ಣದ ನೈಲಾನ್ ಶರ್ಟನ್ನು ಧರಿಸಿದ್ದನಾದರೂ, ನೋಡುವುದಕ್ಕೆ ಸ್ವಲ್ಪ ಸ್ಟೈಲಾಗೇ ಇದ್ದ. ಕಂಡಕ್ಟರ್ ಇಬ್ಬರನ್ನೂ ಪುನಃ ಪುನಃ ದಿಟ್ಟಿಸಿ ನೋಡಿ, "ಯಾರು ಆ ಮನುಷ್ಯ ?" ಎಂದು ಹುಡುಗಿಯನ್ನು ಕೇಳಿದ. ಆ ಹುಡುಗಿಯ ಮುಖವೆಲ್ಲ ಕೆಂಪಗಾಯಿತು. ಒಂದು ನಿಮಿಷ ಸುಮ್ಮನಿದ್ದು "ಅಣ್ಣ" ಎಂದು ಹೇಳಿ ಮತ್ತೆ ತಲೆಯನ್ನು ತಿರುಗಿಸಿಕೊಂಡಳು. ಕಂಡಕ್ಟರ್ ಮತ್ತೆ ಅವರಿಬ್ಬರನ್ನೂ ಒಂದು ಬಗೆಯಾಗಿ ನೋಡಿ ನಾನಿದ್ದ ಎಡ ಭಾಗದ ಮುಂದಿನ ಸೀಟಿಗೆ ಎದುರಾಗಿದ್ದ ತನ್ನ ಸೀಟಿನಲ್ಲಿ ಕುಳಿತ.

ನಿಲ್ದಾಣವನ್ನು ಬಿಟ್ಟು ಹೊರಗೆ ಬಂದು ಆ ಇಕ್ಕಟ್ಟಾದ ದಾರಿಯಲ್ಲಿ ಬಸ್ಸನ್ನು ಬಲಕ್ಕೆ ತಿರುಗಿಸಿ ಡ್ರೈವರ್ "ಹೋಗೋಣ ?" ಎಂದು ಒಂದು ಬಾರಿ ಕಂಡಕ್ಟರನನ್ನು ಕೇಳಿದ. "ರೈಟ್, ಹೋಗೋಣ," ಎಂದು ಉತ್ತರ ಬಂದದ್ದೇ ತಡ ಬಸ್ ವೇಗವಾಗಿ ಓಡತೊಡಗಿತು. ಸುಮಾರು ಎರಡು ಫರ್ಲಾಂಗ್ ಹೋಗಿರಬಹುದು. "ಹೋಲ್ಡಾನ್, ಹೋಲ್ಡಾನ್," ಎಂದು ಹಿಂದುಗಡೆಯಿಂದ ಧ್ವನಿ ಕೇಳಿಸಿತು. ಬ್ರೇಕ್ ಹಾಕಿ, ಕಿಟಕಿಯಿಂದ ತಲೆಯನ್ನು ಹೊರಹಾಕಿ ನೋಡಿದ ಡ್ರೈವರ್, "ಎರಡು ಸೀಟ್ ಇದೆಯೇ ?" ಎಂದು ಕೇಳಿದ. "ಇದೆ" ಎಂದು ಕಂಡಕ್ಟರ್ ತಲೆಯಾಡಿಸಿದ. ಬಸ್ಸಿನಲ್ಲಿದ್ದ ಎಲ್ಲರೂ ಹಿಂತಿರುಗಿ ನೋಡಿದರು. ಎಳೆಯ ದಂಪತಿಗಳಿಬ್ಬರು ಮೇಲುಸಿರು ಬಿಡುತ್ತಾ ಓಡಿ ಬರುತ್ತಿದ್ದರು. ಗಂಡ ಕೈಯಲ್ಲೊಂದು ಕೊಡೆ ಹಿಡಿದು ಮುಂದೆ ಓಡಿ ಬರುತ್ತಿದ್ದನು. ಹೆಂಡತಿ ಒಂದು ಚಿಕ್ಕ ಪೆಟ್ಟಿಗೆಯೊಡನೆ ಇಪ್ಪತ್ತು ಗಜ ದೂರದಲ್ಲಿ ಬರುತ್ತಿದ್ದಳು.

"ಎಲ್ಲಿಗೆ ಹೋಗಬೇಕು?"

"ಪಳನಿ."

ಕಂಡಕ್ಟರ್ ಬಾಗಿಲನ್ನು ತೆಗೆದ. ಆ ಹುಡುಗಿಯ ಕತ್ತಿನಲ್ಲಿ ಮಿಂಚಿದ ಹೊಚ್ಚ ಹೊಸ ಮಾಂಗಲ್ಯ, ಹೊಳೆಯುತ್ತಿದ್ದ ಬಳೆಗಳು, ಸರಸರಗುಟ್ಟುತ್ತಿದ್ದ ಹೊಸ ಸೀರೆ, ಹೊಸ

ಪಂಜಿ ಎಲ್ಲವೂ ಇವರು ಹೊಸದಾಗಿ ಮದುವೆಯಾದವರೆಂಬುದನ್ನು ಸಾರುತ್ತಿತ್ತು. ಸಂಕೋಚ, ಭಯ ತುಂಬಿದ ದೃಷ್ಟಿಯಿಂದ ಆ ಜೋಡಿ ಕೂಡಲು ಸ್ಥಳಕ್ಕಾಗಿ ಅತ್ತ ಇತ್ತ ಕಣ್ಣು ಹಾಯಿಸಿತು. ಬಸ್ಸಿನಲ್ಲಿ ಸುಮಾರು ಎಲ್ಲ ಸೀಟುಗಳೂ ಭರ್ತಿಯಾಗಿದ್ದುವು. ಕೊನೆಗೆ ಆ ಹುಡುಗಿಯನ್ನು ಡ್ರೈವರ್ ಸೀಟಿನ ಹಿಂದಿನ ಸೀಟಿನಲ್ಲಿ ಅಂದರೆ ವೇಲು ನಾಯರಿನ ಹೆಂಡತಿಯ ಪಕ್ಕದಲ್ಲಿ ಕೂಡಲು ಹೇಳಿ ಅವಳ ಗಂಡನನ್ನು ಎಡ ಭಾಗದ ಮುಂದಿನ ಸೀಟಿನಲ್ಲಿ ಅಂದರೆ ನನ್ನ ಪಕ್ಕದಲ್ಲಿ ಕೂಡಿಸಿ ಕಂಡಕ್ಟರ್ 'ರೈಟ್' ಕೊಟ್ಟರು. ಹೆಂಡತಿಯ ಪಕ್ಕದಲ್ಲಿ ಕುಳಿತುಕೊಳ್ಳಲಾಗದುದಕ್ಕೆ ಉಂಟಾದ ನಿರಾಶೆ ಹೊಸ ಅಳಿಯನ ಮುಖದಲ್ಲಿ ಚೆನ್ನಾಗಿ ಕಂಡುಬರುತ್ತಿದ್ದುದನ್ನು ನಾನೂ ಕಂಡಕ್ಟರೂ ಗಮನಿಸದೆ ಇರಲಿಲ್ಲ.

ಓಡುತ್ತಿದ್ದ ಬಸ್ ಮತ್ತೆ ನಿಂತಿತು. ವಯಸ್ಸಾದ ಒಬ್ಬರು ರಸ್ತೆಗೆ ಅಡ್ಡವಾಗಿ ಕೊಡೆಯನ್ನು ಹಿಡಿದುಕೊಂಡಿದ್ದರು. ಕಿಟಕಿಯಾಚೆ ಮುಖ ಹಾಕಿ ಕಂಡಕ್ಟರ್ "ಎಲ್ಲಿಗೆ?" ಎಂದನು. "ತಿರಚೂರು, ಎರಡು ಟಿಕೆಟ್." ಆಗಲೇ ಆತನೊಡನೆಯೂ ಒಬ್ಬಾಕೆ ಇರುವುದು ಕಂಡು ಬಂತು. ಕಂಡಕ್ಟರ್ ಬಾಗಿಲು ತೆಗೆಯುತ್ತಲೂ ಅವರಿಬ್ಬರೂ ಒಳಗೆ ಹತ್ತಿದರು. ಹನ್ನೆರಡನೇ ನಂಬರ್ ಸೀಟಿನಲ್ಲಿ ಅಂದರೆ ಆ ಸ್ಟೈಲ್ ಆಸಾಮಿಯ ಪಕ್ಕದಲ್ಲಿ ಒಂದು ಸೀಟ್ ಖಾಲಿ ಇತ್ತು. ಕೊಡೆಯಾತನನ್ನು ಅಲ್ಲಿ ಕೂಡಲು ಹೇಳಿದ ಕಂಡಕ್ಟರ್. ತಕ್ಷಣ ಏನೋ ಯೋಚಿಸಿದವನಂತೆ ಹೊಸ ದಂಪತಿಗಳನ್ನು ಹನ್ನೆರಡನೇ ನಂಬರ್ ಸೀಟಿಗೆ ಕಳುಹಿಸಿಬಿಟ್ಟು ಸ್ಟೈಲ್ ಆಸಾಮಿಯನ್ನು ನನ್ನ ಪಕ್ಕದಲ್ಲಿ ಕೂಡಿಸಿದ. ಕೊಡೆಯಾತನನ್ನು ಹಿಂದಿನ ಖಾಲಿಯಾದ ಸೀಟಿಗೆ ಕಳಿಸಿಬಿಟ್ಟು ಅವನೊಡನೆ ಬಂದ ಹೆಂಗಸನ್ನು ವೇಲು ನಾಯರಿನ ಪತ್ನಿ ಒಂದು ಹೇಳಲ್ಪಟ್ಟ ಹುಡುಗಿಯ ಪಕ್ಕದಲ್ಲಿ ಕೂಡಿಸಿದ.

ಬಸ್ ಈಗ ಇಕ್ಕಟ್ಟಾದ ರಸ್ತೆಗಳನ್ನು ಬಿಟ್ಟು ರಾಜಮಾರ್ಗದಲ್ಲಿ ಹೋಗುತ್ತಿತ್ತು. ತಣ್ಣಗೆ ಬೀಸುತ್ತಿದ್ದ ಎದುರುಗಾಳಿ ಆ ಬಿಸಿಲಿಗೆ ಹಿತವಾಗಿತ್ತು. ಮೂರನೆಯ ಸೀಟಿನಲ್ಲಿ ಕುಳಿತಿದ್ದ ಇಬ್ಬರು ಯುವಕರು, ಆ ವರೆಗೆ ಯಾವುದೋ ಆಂಗ್ಲ ಪತ್ರಿಕೆಯಲ್ಲಿ ಮುಳುಗಿದ್ದವರು ಈಗ ಮಾತಿಗೆ ತೊಡಗಿದರು.

"ಈ ಬಸ್ ಯಾವಾಗ ಉಡುಮಲ್ಪೈ ಪೇಟೆ ಸೇರುತ್ತದೆ?"

"ಪಳನಿಗೆ ಏಳು ಘಂಟೆಗೆ ಹೋಗಬೇಕು."

"ಅಂದರೆ ಉಡುಮಲ್ಪೈ ಪೇಟೆಗೆ ಆರು ಘಂಟೆಗೆಲ್ಲ ಹೋಗಬೇಕು."

"ಹುಂ. ಎಲ್ಲಿ ಹೋಗುತ್ತೆ? ಸರಕಾರಿ ಬಸ್ ಯಾವುದು ತಾನೇ ಸರಿಯಾದ ಸಮಯಕ್ಕೆ ಹೋಗಿ ಸೇರುತ್ತದೆ.?"

"ಇದು ತಮಿಳು ಸರ್ಕಾರದ ಬಸ್ಸೋ, ಕೇರಳ ಸರ್ಕಾರದ್ದೋ?"

"ಯಾವುದಾದರೇನು? ಸರ್ಕಾರಿ ಬಸ್ ಸರ್ಕಾರಿ ಬಸ್ಸೇ. ಅದರಲ್ಲಿ ಯಾವ ಸರ್ಕಾರ ಮೇಲು?"

ಇದನ್ನು ಕೇಳಿದೊಡನೆಯೇ ಬಸ್ಸಿನಲ್ಲಿದ್ದ ಹಲವರು ನಕ್ಕುಬಿಟ್ಟರು. ಮಾತನಾಡಿದ ಯುವಕನಿಗೆ ಬಲು ಖುಷಿಯಾಯಿತು.

"ಹೌದು ಸಾರ್, ಈ ಬಸ್ ಇನ್ನು ಸ್ವಲ್ಪ ದೂರ ಹೋದೊಡನೆ ಬ್ರೇಕ್‌ಡೌನ್ ಆಗಿ ಬಿಡುತ್ತದೆ."

ಹೀಗೆ ಹೇಳುತ್ತಲೇ ಡ್ರೈವರ್ ಹಿಂತಿರುಗಿ ಅವನನ್ನು ಒಮ್ಮೆ ದುರುಗುಟ್ಟಿ ನೋಡಿದ. ಕಂಡಕ್ಟರನ ಮುಖವೂ ಕೋಪದಿಂದ ದುಮುಗುಡುತ್ತಿತ್ತು . ಅಷ್ಟರಲ್ಲಿ ಒಬ್ಬರು ಕೇಳಿದರು.

"ಬ್ರೇಕ್‌ಡೌನ್ ಅಂತ ನಿಮಗೆ ಹೇಗೆ ಸಾರ್ ಗೊತ್ತು?"

"ಹೇಗೆ ಅಂದಿರಾ? ಈ ಬಸ್ಸನ್ನು ನೋಡಿದರೇ ಗೊತ್ತಾಗೊಲ್ವ?"

ಮತ್ತೆ ಘೊಳ್ಳನೆ ನಗೆ.

ಡ್ರೈವರ್ ಮತ್ತೊಮ್ಮೆ ಹಿಂತಿರುಗಿ ಕಂಡಕ್ಟರನ್ನು ನೋಡಿದ. ತನ್ನ ಅಸಮಾಧಾನವನ್ನು ಅಡಗಿಸಿಕೊಂಡು ಕಂಡಕ್ಟರ್ ಆ ಯುವಕನನ್ನು ಕುರಿತು, "ಸಾರ್ ಅಷ್ಟು ಖಂಡಿತವಾಗಿ ತಿಳಿದಿದ್ದವರು ಈ ಬಸ್ಸಿನಲ್ಲೇಕೆ ಹತ್ತಿದ್ದೀರಿ?" ಎಂದು ನಿಧಾನವಾಗಿಯಾದರೂ ಅಷ್ಟೇ ತೀಕ್ಷ್ಣ-

ವಾಗಿ ಕೇಳಿದ.

"ಇದೇ ತಾನೇ ಕೊನೆಯ ಬಸ್. ಇದನ್ನು ಬಿಟ್ಟರೆ ಬೇರೆ ದಾರಿಯೇ ಇಲ್ಲವಲ್ಲ? ಅದರಿಂದಲೇ ಹತ್ತಿದೆ. ದಾರಿಯಲ್ಲಿ ನಿಂತುಹೋದರೆ ತಾನೇ ಏನು? ಎಲ್ಲರಿಗೂ ಆಗುವುದೇ ನನಗೂ ಆಗುತ್ತದೆ." ಇಷ್ಟರಲ್ಲಿ ನಾಲ್ಕನೆಯ ಸೀಟಿನಲ್ಲಿದ್ದ ಒಬ್ಬ ಹಿರಿಯರು ಮಾತನಾಡಿದರು: "ತಮ್ಮ, ಹೀಗೆ ಏನಾದರೊಂದು ಹೇಳಬೇಡ. ಬಸ್ ನಿಂತುಹೋದರೆ ನಿನಗೇನೂ ತೊಂದರೆ ಇಲ್ಲದಿರಬಹುದು, ನನಗೆ ಹಾಗಲ್ಲ. ಸಂಜೆಯೊಳಗೆ ನಾನು ಪೊಳ್ಳಾಚಿಗೆ ಸೇರಲೇಬೇಕು. ಇಲ್ಲವಾದರೆ..." ಅವರ ಧ್ವನಿ ನಡುಗಿತು.

"ಇಲ್ಲದಿದ್ದರೆ?" ಪಕ್ಕದ ಸೀಟಿನವ ಪ್ರಶ್ನಿಸಿದ.

ಪ್ರಶ್ನೆಗೆ ಹಿರಿಯರು ಹೇಳತೊಡಗಿದರು: "ನನ್ನ ಮೊಮ್ಮಗ ಕಾಲೇಜಿನಲ್ಲಿ ಓದುತ್ತಿದ್ದ. ಮೊದಲ ವರ್ಗದಲ್ಲೇ ಪಾಸಾಗಿದ್ದರೂ ಮುಂದೆ ಓದಲು ಅವನು ಇಷ್ಟಪಟ್ಟ ವಿಷಯದಲ್ಲಿ ಸೀಟು ಸಿಗಲಿಲ್ಲವೆಂಬ ಬೇಸರದಲ್ಲಿ ಏನೋ ಔಷಧ ಕುಡಿದುಬಿಟ್ಟಿದ್ದಾನೆ. ಜೀವ ತೂಗಾಡುತ್ತಿದೆ." ಸ್ವಲ್ಪ ನಿಲ್ಲಿಸಿ ಕಣ್ಣೊರೆಸಿಕೊಂಡರು ಅವರು.

ಈಗ ಎಲ್ಲರ ಗಮನವೂ ಹಿರಿಯರ ಕಡೆಗೆ ತಿರುಗಿತ್ತು.

"ಆದರೆ ನನಗೊಂದು ನಂಬಿಕೆ. ಗುರುವಾಯೂರಪ್ಪನ ಸನ್ನಿಧಿಯಲ್ಲಿ ಅವನ ಕಾಲಡಿಯಲ್ಲಿ ಬಿದ್ದು ಕಣ್ಣೀರಿಟ್ಟರೆ ಖಂಡಿತ ಅವನು ಕೃಪೆ ತೋರುತ್ತಾನೆ ಎಂದು. ನಿನ್ನೆ ಇಡೀ ರಾತ್ರಿ ಅವನ ಬಳಿಯೇ ಇದ್ದೆ. ಒಂದು ತೊಟ್ಟು ನೀರನ್ನೂ ಬಾಯಿಗೆ ಹಾಕದೆ ಮೊಮ್ಮಗನಿಗಾಗಿ ಪ್ರಾರ್ಥನೆ ಮಾಡುತ್ತಲೇ ಇದ್ದೆ. ಇವತ್ತು ಮಧ್ಯಾಹ್ನ ನನಗೆ ಇದ್ದಕ್ಕಿದ್ದಂತೆ ಒಂದು ನಂಬಿಕೆಯುಂಟಾಯಿತು. ದೇವರೇ ಅಪ್ಪಣೆ ಕೊಡಿಸಿದಂತೆ ಒಂದು ಭಾವನೆ. 'ಪ್ರಸಾದವನ್ನು ತೆಗೆದುಕೊಂಡು ತಕ್ಷಣ ಊರಿಗೆ ಹೋಗು!' ಎಂದು ಯಾರೋ ಹೇಳಿದ ಹಾಗೆ ಆಯಿತು. ತಕ್ಷಣವೇ ಬಸ್ ಹತ್ತಿಬಿಟ್ಟೆ. ಹೇಗೋ ಇಂದು ಸಂಜೆಯೊಳಗೆ ಈ ಪ್ರಸಾದವನ್ನು ನನ್ನ ಮೊಮ್ಮಗನಿಗೆ ತಲುಪಿಸಿಬಿಟ್ಟರೆ



ಅವನು ಉಳಿಯುತ್ತಾನೆಂದು ನನ್ನ ನಂಬಿಕೆ. ಗುರುವಾಯೂರಪ್ಪನ ಇಚ್ಛೆ ಹೇಗೋ!" ಹಿರಿಯರ ಧ್ವನಿ ಗದ್ಗದಿತವಾಯಿತು. ಬಸ್ಸಿನಲ್ಲಿದ್ದ ಎಲ್ಲರೂ ಅವರಿಗೆ "ತ್ಸೊ, ತ್ಸೊ" ಎಂದು ಅನುತಾಪ ತೋರಿದರು. ಒಂಭತ್ತನೇ ಸೀಟಿನಲ್ಲಿದ್ದ ನಂಬೂದಿರಿ ಒಬ್ಬರು (ಅವರಿಗೆ ತಮಿಳು ಗೊತ್ತಿಲ್ಲ) ಪಕ್ಕದಲ್ಲಿದ್ದವರನ್ನು ಕೇಳಿ ವಿಷಯ ತಿಳಿದುಕೊಂಡರು. ತಕ್ಷಣವೇ, "ಓ, ಅದೇನು ಭಯ ಪಡುವ ವಿಷಯವಲ್ಲ. ಗುರುವಾಯೂರಪ್ಪನ ಮಹಿಮೆ ಬಲು ದೊಡ್ಡದು. ಈ ಪ್ರಸಾದವನ್ನು ಕೊಡಿ, ಮಗು ಉಳಿಯುತ್ತಾನೆ. ಅವನಿಗೆ ದೀರ್ಘ ಆಯುಸ್ಸು," ಎಂದು ಹೇಳುತ್ತಲೇ ತನ್ನ ಮಡಿಲಲ್ಲಿದ್ದ ಪುಟ್ಟ ಚೀಲವನ್ನು ಬಿಚ್ಚಿ ಒಂದು ಪುಟ್ಟ ಗಂಧದ ಉಂಡೆಯನ್ನೂ, ಸ್ವಲ್ಪ ಹೂವನ್ನು ಆ ಹಿರಿಯರಿಗೆ ಕೊಟ್ಟರು. ಅವರು ಅದನ್ನು ಭಯ ಭಕ್ತಿಯಿಂದ ಸ್ವೀಕರಿಸಿ ಕಣ್ಣಿಗೆ ಒತ್ತಿಕೊಂಡು ಅಂಗಿಯ ಜೇಬಿನಲ್ಲಿಟ್ಟುಕೊಂಡರು. ನಂಬೂದಿರಿ ಏನೋ ಮಂತ್ರ

ಗಳನ್ನು ಗುಣುಗುಣಿಸುತ್ತಲೇ ಇದ್ದು ಇದ್ದಕ್ಕಿದ್ದಂತೆ "ಗುರುವಾಯೂರಪ್ಪಾ" ಎಂದು ಜೋರಾಗಿ ಹೇಳಿದಾಗ ಕೆಲವರಿಗೆ ರೋಮಾಂಚನವಾಯಿತು; ಕೆಲವರಿಗೆ ನಗು ಬಂತು. ಆತ ಮತ್ತೆ ಗುರುವಾಯೂರಪ್ಪನ ಮಹಿಮೆಯ ಬಗ್ಗೆ ಮಾತನಾಡಲಾರಂಭಿಸಿಬಿಟ್ಟರು. ಮಲೆಯಾಳಂ ಭಾಷೆ ತಿಳಿದವರು ಸ್ವಲ್ಪ ಹೊತ್ತು ಕೇಳುತ್ತಿದ್ದರು. ನಂತರ ಅವರುಗಳಿಗೂ ಬೇಸರ ಬರ ಹತ್ತಿತು. ಆತ ಮಾತನ್ನು ನಿಲ್ಲಿಸಲೇ ಇಲ್ಲ. ಕೊನೆಗೆ ಅವರ ಪಕ್ಕದಲ್ಲಿ ನಿದ್ರಿಸುತ್ತಿದ್ದ ಅವರ ಹೆಂಡತಿ ಕಣ್ಣು ಬಿಟ್ಟು "ಏಯನ್" ಎಂದು ಸಣ್ಣದಾಗಿ ಗದರಿಕೊಂಡರು. ನಂಬೂದಿರಿಯ ಪ್ರವಚನ ನಿಂತುಹೋಯಿತು. ನಾನೂ ಕಂಡಕ್ಟರೂ ಪರಸ್ಪರ ನೋಡಿಕೊಂಡು ನಕ್ಕೆವು. ಬಸ್ ಓಡುತ್ತಲೇ ಇತ್ತು.

ಅದು ಭಾದ್ರಪದ ಮಾಸ. ಮುಂಗಾರು ಮಳೆ ಮುಗಿದೂ ಮುಗಿಯದೆಯೂ ಕಣ್ಣುಮುಚ್ಚಾಲೆಯಾಡುವ ತಿಂಗಳು ಅದು. ಹೊರಗೆಲ್ಲಿ ನೋಡಿದರೂ ಹಸಿರು. ಹಚ್ಚಹಸಿರು ಹೊಲ ಗದ್ದೆಗಳೂ ಆಕಾಶವನ್ನು ಮುಚ್ಚುವ ತೇಗು, ಹಲಸು, ಅಡಿಕೆ ಮರಗಳು—ಇವುಗಳಿಂದ ತುಂಬಿದ ಆ ಸುಂದರ ನೈಸರ್ಗಿಕ ದೃಶ್ಯಗಳಲ್ಲಿ ನನ್ನ ಮನಸ್ಸು ಲೀನವಾಯಿತು. ತುಸು ಮುನ್ನವೇ ಬಿದ್ದ ಸಣ್ಣ ಮಳೆಯಲ್ಲಿ ಮಿಂದು ನವನವೀನವಾಗಿ ಕಾಣುತ್ತಿದ್ದ ಕೇರಳ ನಾಡಿನ ಗಳ ಸೌಂದರ್ಯದಲ್ಲಿ ನಾನು ನನ್ನನ್ನೇ ಮರೆತು ಬಿಟ್ಟೆ. ನಡುನಡುವೆ ಕಾಣುತ್ತಿದ್ದ ಗುಡಿಸಲುಗಳು ಅಲ್ಲಲ್ಲಿ ಗುಂಪು ಗುಂಪಾಗಿ ಹೆಂಗಸರೂ ಗಂಡಸರೂ ಕೆಲಸ ಮಾಡುತ್ತಿದ್ದುದನ್ನು ಕಂಡಾಗ, ಈ ಹಸಿರೂ ಸೌಂದರ್ಯವೂ ಪ್ರಕೃತಿಯ ಕೈವಾಡ ಮಾತ್ರವಲ್ಲ, ಮನುಷ್ಯನ ಪ್ರಯತ್ನಗಳಿಗೂ ಅದರಲ್ಲಿ ಭಾಗವಿದೆ ಎಂಬುದರ ನೆನಪಾಗುತ್ತಿತ್ತು. ಹಾಗೆ ನೋಡಿದರೆ ಆ ಜನಗಳಾದರೂ ಯಾರು? ಪ್ರಕೃತಿಯೊಡನೆ ಪ್ರಕೃತಿಯಾಗಿ ಒಂದಾಗಿಹೋದವರಲ್ಲವೇ? ಇದನ್ನು ಸ್ಪಷ್ಟೀಕರಿಸುವಂತೆ ಕಿಲಕಿಲ ನಗು ಕೇಳಿಬಂತು. ಹಿಂತಿರುಗಿ ನೋಡಿದೆ. ಒಂದು ಸಣ್ಣ ಕಾಲುವೆಯಲ್ಲಿ ತಮ್ಮನ್ನೇ ಮರೆತು ಈಜಾಡುತ್ತಿದ್ದರು. ಕೆಲ ಯುವತಿಯರು ಆ ಕ್ಷಣಕ್ಕೆ ಅದು ಒಂದು ಇನಿದಾದ ಆಟವೇಬಂತೆ ಕಾಣುತ್ತಿತ್ತು. ಆದರೆ ಮರುಕ್ಷಣವೇ ನನ್ನ ಯೋಚನೆ ಬದಲಿಸಿತು. ಭಯಂಕರವಾದ ಮಳೆಗಾಳಿಯಲ್ಲೂ ಗುಂಪು ಗುಂಪಾಗಿ ಸಮುದ್ರದಲ್ಲಿ ಮೀನು ಹಿಡಿಯಲು ಹೋಗುವ ಗಂಡಸರೂ, ಅವರ ಬಗ್ಗೆ ಯೋಚಿಸಲೂ ಅವಕಾಶವಿಲ್ಲದೆ ಹೊಲಗದ್ದೆಗಳಲ್ಲೂ ತೋಟಗಳಲ್ಲೂ ದುಡಿಯುವ ಹೆಣ್ಣುಮಕ್ಕಳು, ಕಡಲ ನಡುವೆ ಆಕಾಶವನ್ನು ಮುಟ್ಟುವ ತೆಂಗಿನ ಮರದ ತುದಿಯಲ್ಲಿ ಒಂದು ಹೊತ್ತಿನ ಕೂಳಿಗಾಗಿ ಪ್ರಾಣವನ್ನೇ ಪಣವಾಗಿಡುವ ಜನ, ನೆತ್ತಿಯಲ್ಲಿ ಬೆವರು ಹರಿಸುತ್ತಲೇ ಬೆಟ್ಟದಂತಹ ತೇಗದ ಮರವನ್ನು ಬೆಳಗಿನಿಂದ ಬೈಗಿನವರೆಗೆ ಕೊಯ್ಯುತ್ತಲೇ ಇರುವ ಕಪ್ಪು ಆಕಾರಗಳು, ಹೊಟ್ಟೆ ಪಾಡಿಗಾಗಿ ದೇಶಾಂತರ ಅಲೆಯುವ ಹೆಂಗಸರೂ ಗಂಡಸರೂ ನನ್ನ ಮನಃಪಟಲದಲ್ಲಿ ಕಾಣಿಸ ತೊಡಗಿದರು. ನಾನು ಕಂಡಕ್ಟರೊಡನೆ ಮಾತಿಗಾರಂಭಿಸಿದೆ.

"ಇಷ್ಟು ಫಲವತ್ತಾದ ಕೇರಳದಲ್ಲಿ ಏಕಿಷ್ಟು ಬಡತನ?" ಕಂಡಕ್ಟರ್ ನನ್ನ ಈ ಪ್ರಶ್ನೆ ಕೇಳಿ ಒಂದು ತೆರನಾಗಿ ನಕ್ಕ. ನಂತರವೇ ನನಗೆ ತಿಳಿದದ್ದು ಅವನೂ ಓರ್ವ ಪದವೀಧರನೆಂದು, ಸಮಾಜವಾದದಲ್ಲಿ ತೀವ್ರ ಆಸಕ್ತಿಯುಳ್ಳವನೆಂದು. ನಡುನಡುವೆ ಅವನ ಮಾತಿನಲ್ಲಿ ನಾಸ್ತಿಕತೆಯ ಛಾಯೆ ಕಂಡು ಬರುತ್ತಿತ್ತು. ನಾನು ಬೇಕೆಂದೇ, "ನಿಮಗೇನಪ್ಪ ಗುರುವಾಯೂರಪ್ಪನ ದರ್ಶನವೂ, ಪಳನಿಯಾಂಡವನ ದರ್ಶನವೂ ಮೇಲಿಂದ ಮೇಲೆ ಲಭಿಸುತ್ತಲೇ ಇರುತ್ತದೆ. ಪುಣ್ಯಶಾಲಿಗಳು ನೀವು"— ಎಂದೆ.

"ಕ್ಷಮಿಸಿ ಸಾರ್, ನಾನು ಯಾವ ದೇವಸ್ಥಾನಕ್ಕೂ ಹೋಗುವುದಿಲ್ಲ."

ಇದನ್ನು ಕೇಳಿದೊಡನೆಯೇ ಡ್ರೈವರ್ ಒಮ್ಮೆ ತಿರುಗಿ ಕಂಡಕ್ಟರನ್ನು ನೋಡಿದ. ಆ ನೋಟದ ಅರ್ಥ, ಅವನ ಹಣೆಯಲ್ಲಿದ್ದ ಗಂಧ ಕುಂಕುಮಗಳಲ್ಲಿಯೇ ಅಡಗಿತ್ತು.

ಕಂಡಕ್ಟರ್ ನಕ್ಕುಬಿಟ್ಟ. "ಡ್ರೈವರ್‌ಗೆ ಭಕ್ತಿ ತುಂಬಾ ಜಾಸ್ತಿ. ನಾನು ದೇವಸ್ಥಾನಕ್ಕೆ ಹೋಗುವುದಿಲ್ಲವೆಂದು ಅವರಿಗೆ ತುಂಬಾ

ಅಸಮಾಧಾನ. ನನಗೆ ಅದರಲ್ಲೆಲ್ಲ ನಂಬಿಕೆ ಇಲ್ಲ."

"ನೀವು ನಾಸ್ತಿಕರೆಂದು ಕಾಣುತ್ತದೆ."

"ಹಾಗೇ ಅಂದುಕೊಳ್ಳಿ."

"ಹಾಗಾದರೆ ಆ ಯುವಕ ಬಸ್ ಸರಿಯಾದ ಹೊತ್ತಿಗೆ ಹೋಗಿ ಸೇರುವುದಿಲ್ಲ ಎಂದಾಗ ನಿಮಗೇಕೆ ಅಷ್ಟು ಸಿಟ್ಟು ಬಂತು? ಬೇಕಿ ಎಂದಾಕ್ಷಣ ಬಾಯಿ ಸುಟ್ಟು ಹೋಗುವುದೇ?"

ಈ ಪ್ರಶ್ನೆಯಿಂದ ಅವನು ಕಕ್ಕಾಬಿಕ್ಕಿಯಾಗ ಬಹುದೆಂದು ನಾನು ಭಾವಿಸಿದೆ. ತದ್ವಿರುದ್ಧ ವಾಗಿ ಅವನು ತಕ್ಷಣ, "ಸಾರ್ ಅದು ಮೂಢ ನಂಬಿಕೆ ಎಂದು ನೀವು ಭಾವಿಸುತ್ತೀರಿ, ಆದರೆ ಅದು ಹಾಗಲ್ಲ. ನಾನು ನನ್ನ ಅನುಭವ ರೀತ್ಯಾ ನನಗೆಂದೇ ರೂಢಿಸಿಕೊಂಡಿರುವ ಒಂದು ನಂಬಿಕೆ ಅಷ್ಟೆ."

"ಹೇಗೆ?"

"ಈ ಓಡುತ್ತಿರುವ ಬಸ್ ಹಲವು ತತ್ತ್ವಗಳ ಒತ್ತಾಸೆಯ ಬಲದಿಂದ ಓಡುತ್ತಿದೆ. ಅದೂ ಈ ಬಸ್ಸಿನ ಎಂಜಿನ್ ಸ್ವಲ್ಪ ಕೆಟ್ಟು ಹೋದ ಯಂತ್ರವೇ. ಆದರೂ ಅದು ಓಡುತ್ತಲೇ ಇದೆ. ಯಾಕೆ? ಅದು ಸತ್ಯಕ್ಕೆ ಕಟ್ಟುಬಿದ್ದು ಓಡುತ್ತದೆ. ಯಂತ್ರ ಶಕ್ತಿ ಕೈಕೊಟ್ಟರೂ, ನಮ್ಮ ಮನೋಬಲ, ನಾವು ನಂಬಿದ ಸತ್ಯ ಶಕ್ತಿ ಇದರಿಂದ ಬಸ್ ಓಡುತ್ತದೆ— ಇದು ನನ್ನ ನಂಬಿಕೆ ನಮ್ಮ ನಂಬಿಕೆ ಸಡಿಲಾದಾಗ, ನಾವು ಆ ಸತ್ಯವನ್ನು ಅವಮಾನಿಸಿದಾಗ ಅವೂ ನಮ್ಮ ಕೈ ಬಿಟ್ಟು ಬಿಡುತ್ತವೆ ಎಂದು ನನಗನಿಸು ತ್ತದೆ."

ಕಂಡಕ್ಟರ್ ಈ ವಿವರಣೆಯಿಂದ ನನಗೆ ಅಚ್ಚರಿ ಯಾಯಿತು. - ಅಷ್ಟಕ್ಕೇ ನಾನು ಬಿಡಲಿಲ್ಲ.

"ಇದು ಕೂಡಾ ಒಂದು ರೀತಿಯ ಮೂಢ ನಂಬಿಕೆಯೇ ಅಲ್ಲವೇ?"

"ಅಲ್ಲ—ಇದು ಅನುಭವದಿಂದ ಕಂಡುಕೊಂಡ ಸತ್ಯ."

"ಹಾಗಾದರೆ ಇದೇ ಮಾರ್ಗದಲ್ಲಿ ಇವಕ್ಕಿಂತ ಹಿರಿಯ ಸತ್ಯವಾದ ಪರಮಾತ್ಮನ ಶಕ್ತಿಯನ್ನು ನೀವು ಒಂದು ದಿನ ಕಂಡುಕೊಳ್ಳುತ್ತೀರಿ. ಅದೂ ನಿಮ್ಮ ಅನುಭವಕ್ಕೆ ಬಂದೇ ಬರುತ್ತದೆ," ಎಂದೆ.

"ಯಾಕೆ!" ಈಗಲೇ ನಾನು ಅವನ್ನು ಅರಿತೇ ಇದ್ದೇನೆ. ಆದರೆ ಆ ಸತ್ಯವನ್ನು ಗುರುವಾಯೂರಿನಲ್ಲಿಯೋ ಪಳನಿಯಲ್ಲಿಯೋ ಬರೇ ಕಲ್ಲು ವಿಗ್ರಹದಲ್ಲಿಯೋ ಕಾಣಲು ಸಾಧ್ಯ ವಿಲ್ಲ ಎಂಬುದು ನನ್ನ ಅನಿಸಿಕೆ," ಉತ್ತರಿಸಿದ ಕಂಡಕ್ಟರ್.

ಇಷ್ಟರಲ್ಲಿ ಬಸ್ಸು ತಿರುಚ್ಚೂರನ್ನು ತಲುಪಿತು. ಹಲವು ಪ್ರಯಾಣಿಕರು ಇಳಿದರು. ಕೆಲವರು ಹತ್ತಿದರು. ಓರ್ವ ಪಾದ್ರಿಯೂ ಅವರ ಹಿಂದೆ ಓರ್ವ ಮುಸ್ಲಿಂ ಹಿರಿಯರೂ ಮೊದಲು ಹತ್ತಿ- ದರು. ಕೂಡೇ ಆಸಾಮಿಯೂ ಅವರೊಡನಿದ್ದ ಮಹಿಳೆಯೂ ಇಳಿದುಬಿಟ್ಟಿದ್ದರಿಂದ ಡ್ರೈವರನ ಹಿಂದಿನ ಮೊದಲ ಸೀಟಿನಲ್ಲಿ ವೇಲು ನಾಯರಿನ ಪತ್ನಿ ಮಾತ್ರ ಕುಳಿತಿದ್ದಳು. ಆದರೆ ಆ 'ಸ್ಟೈಲ್' ಆಸಾಮಿ ಮಾತ್ರ ನನ್ನ ಪಕ್ಕದಲ್ಲಿಯೇ ಕುಳಿತಿದ್ದನು. ಯಾಕೋ, ಸ್ಥಳವಿದ್ದರೂ ಆಕೆಯ ಪಕ್ಕದಲ್ಲಿ ಹೋಗಿ ಕುಳಿತುಕೊಳ್ಳಲಿಲ್ಲ.

ಬಸ್ ಮತ್ತೆ ಹೊರಟಿತು. ಆಗ ಒಬ್ಬ ಯುವಕ ಅವಸರ ಅವಸರವಾಗಿ ಓಡಿಬಂದು, "ಸಾರ್ ಪಳನಿಗೆ ಒಂದು ಸೀಟ್ ಇದೆಯಾ ?" ಎಂದ. ಬಸ್ಸಿನೊಳಗೆ ಒಮ್ಮೆ ದೃಷ್ಟಿ ಹಾಯಿಸಿ ಕಂಡಕ್ಟರ್, "ಸಾರಿ ಸಾರ್, ಲೇಡಿಸ್ ಸೀಟ್- ನಲ್ಲಿ ಮಾತ್ರ ಒಂದೇ ಒಂದು ಸ್ಥಳವಿದೆ," ಎಂದುತ್ತರಿಸಿದ.

ಯುವಕ ಕರುಣಾಜನಕವಾಗಿ ಬೇಡಿಕೊಳ್ಳ- ತೊಡಗಿದ. ಅಷ್ಟರಲ್ಲಿ ನನ್ನ ಪಕ್ಕದಲ್ಲಿದ್ದ 'ಸ್ಟೈಲ್' ಆಸಾಮಿ, "ಸಾರ್ ನಾನು ಆ ಹುಡುಗಿಯ ಪಕ್ಕದಲ್ಲಿ ಕುಳಿತುಕೊಳ್ಳುತ್ತೇನೆ. ಅವನಿಗೆ ನನ್ನ ಸೀಟ್ ಕೊಡಬಹುದು," ಎಂದು ಸ್ವಲ್ಪ ಹಿಂಜರಿಕೆಯಿಂದಲೇ ಹೇಳಿದ.

ಕಂಡಕ್ಟರಿಗೆ ಈ ಯೋಜನೆ ಸ್ವಲ್ಪವೂ ಹಿಡಿಸ ಲಿಲ್ಲವೆಂಬುದು ಅವನ ಮುಖದಲ್ಲಿ ಚೆನ್ನಾಗಿಯೇ ವ್ಯಕ್ತವಾಗುತ್ತಿತ್ತು. ಇಷ್ಟರಲ್ಲಿ ಆ ಯುವಕನ ಬೇಡಿಕೆಯೂ ಹೆಚ್ಚುತ್ತಲೇ ಬೇರೆ ಮಾರ್ಗವಿಲ್ಲದೆ ಕಂಡಕ್ಟರ್ ಬಾಗಿಲು ತೆರೆದ. ನನ್ನ ಪಕ್ಕದಲ್ಲಿ ಕುಳಿತ ಆ ಯುವಕನಿಗೆ, ವಿಮುಬ್ಬುಸವೂ ಬೆವರು ಹರಿಯುವುದೂ ನಿಲ್ಲಲು ಬಹು ಸಮಯ ಬೇಕಾಯ್ತು. ಕಂಡಕ್ಟರ್ ಟಿಕೆಟ್ ಕೊಟ್ಟತಕ್ಷಣ, "ಪಳನಿಗೆ ಈ ಬಸ್ ಎಷ್ಟು ಹೊತ್ತಿಗೆ ಸೇರು-

ತ್ತದೆ?" ಎಂದು ಕೇಳಿದ.

"ಏಳು ಗಂಟೆಗೆ," ಕಂಡಕ್ಟರ ಉತ್ತರ.

"[illegible] ಹೋಗುತ್ತದೆಯೋ? ಇಲ್ಲ ಲೇಟ್ ಆಗುತ್ತದೆಯೋ?" ಯುವಕನ ಧ್ವನಿಯಲ್ಲಿ ಆತಂಕ ತುಂಬಿತ್ತು.

"ಸಾರ್, ಷೆಡ್ಯೂಲ್ಡ್ ಟೈಮ್ ೭ ಘಂಟೆ. ಈಗ ಸಮಯ [illegible] ಘಂಟೆ. ಇದುವರೆಗೆ ಸರಿಯಾಗಿ ಬಂದಿದೆ. ಮುಂದೆ ಹೇಗೋ ಹೇಗೆ ಹೇಳಲಿಕ್ಕೆ ಬರುತ್ತದೆ ?" ಬೆವರೊರೆಸಿ ಕೊಳ್ಳುತ್ತ ಮೌನವಾದ ಆ ಯುವಕ.

ತಿರುಚ್ಚೂರನ್ನು ಬಿಟ್ಟು ಬಸ್ ಈಗ ಮೊದಲಿಗಿಂತ ವೇಗವಾಗಿ ಓಡುತ್ತಿತ್ತು. ಆಗ ಇದ್ದಕ್ಕಿದ್ದಂತೆ ನನ್ನ ಪಕ್ಕದ ಯುವಕ, "ಸಾರ್, ಅಲ್ನೋಡಿ," ಎಂದು ಪಶ್ಚಿಮಕ್ಕೆ ಕೈಮಾಡಿ ತೋರಿಸಿದ. ಕಪ್ಪು ಮೋಡಗಳು ಸೈನ್ಯದ ಪಡೆಗಳು ಮುನ್ನುಗ್ಗುವಂತೆ ವೇಗವಾಗಿ ಬರುತ್ತಿದ್ದುವು. ಎರಡೇ ನಿಮಿಷದಲ್ಲಿ ಬಿಸಿಲು ಎಲ್ಲಿ ಮಾಯವಾಯಿತೋ ತಿಳಿಯಲಿಲ್ಲ. ಮತ್ತೆರಡು ನಿಮಿಷಗಳಲ್ಲಿ ಜೋರಾಗಿ ಮಳೆ ಬೀಳಲಾರಂಭಿಸಿತು. ಯುವಕನ ಮುಖದಲ್ಲಿ ಆತಂಕ ಹೆಚ್ಚಿತು. ಅವನೊಡನೆ ಮೆಲ್ಲಗೆ ಮಾತಿಗಾರಂಭಿಸಿದೆ. "ಪಳನಿಯಲ್ಲಿ ತುಂಬ ಅವಸರದ ಕೆಲಸವೋ ?"

ಯುವಕ ವಿರಕ್ತಿಯ ನಗೆ ನಕ್ಕ. "ಹೂಂ. ತುಂಬಾ ಮುಖ್ಯವಾದ ಕೆಲಸ. ಮದುವೆ ಎನ್ನುವುದೇ? ಮನುಷ್ಯ ತುಂಬಾ ಅವಸರಪಟ್ಟು ಮಾಡುವ ಕೆಲಸ ತಾನೇ ?"

"ಹಾಗೆಂದರೆ ಅರ್ಥವಾಗಲಿಲ್ಲ."

"ಅರ್ಥವಾಗಲಿಲ್ಲವೊ? ನನಗೆ ಬೆಳಗಾದರೆ ಮದುವೆ."

ಮದುವೆಯಾಗುವ ಹುಡುಗ ಇಷ್ಟು ಕೊನೆಯ ಘಳಿಗೆಯಲ್ಲಿ ಏಕೆ ಹೋಗಬೇಕು ? ಏಕೆ ನಿರಾಸಕ್ತಿಯಿಂದ ಮಾತನಾಡಬೇಕು ಎಂದು ನನಗೆ ತಿಳಿಯಲಿಲ್ಲ. ನನ್ನ ಸಂದೇಹವನ್ನು ಅರ್ಥಮಾಡಿಕೊಂಡವನಂತೆ ಆತ ಹೇಳತೊಡಗಿದ. "ಸಾರ್ ನಾನೊಬ್ಬ ನಿರುದ್ಯೋಗಿ ಪದವೀಧರ. ನನಗೆ [illegible]. ನಮ್ಮ [illegible] ಒಂದು ಹುಡುಗಿಯನ್ನು ನೋಡಲು ಹೋದೆ. ಹುಡುಗಿ ನನಗೆ ಒಪ್ಪಿಗೆಯಾಗಲಿಲ್ಲ

ಎಂದು ಹೇಳಿಬಿಡಬೇಕೆಂದು ಯೋಚಿಸಿಕೊಂಡೇ ಹೋದದ್ದು."

"ಆಮೇಲೆ ?"

"ಆಮೇಲೇನು? ಆ ಹುಡುಗಿಯನ್ನು ನೋಡಿದ ಮೇಲೆ ನನ್ನಿಂದ ಹಾಗೆ ಹೇಳಲಾಗಲಿಲ್ಲ."

ನನಗೆ ನಗು ಬಂತು. ಕಂಡಕ್ಟರೂ ನನ್ನ ಕಡೆ ನೋಡಿ ಅರ್ಥಗರ್ಭಿತವಾಗಿ ನಕ್ಕ.

"ಯಾಕೆ ?" ಎಂದೆ ನಾನು ತುಂಟತನದಿಂದ.

"ನೀವು ಅಂದುಕೊಂಡಂತೆ ಆ ಹುಡುಗಿ ಅಂಥ ರೂಪಸಿಯೇನಲ್ಲ. ಆದರೆ ಅವಳ ಕಣ್ಣುಗಳಲ್ಲಿ ಹೆಪ್ಪುಗಟ್ಟಿದ್ದ—ಸುಂದರವಾದ ಕಣ್ಣುಗಳು ಎಂದೇ ಇಟ್ಟುಕೊಳ್ಳಿ—ಆಶಾಪೂರ್ಣ ಬೇಡಿಕೆ ನನ್ನ ನಿರ್ಧಾರವನ್ನು ಬದಲಿಸಿತು. ಅಲ್ಲದೆ ಅವಳಿಗೆ ತಾಯಿ ತಂದೆ ಯಾರೂ ಇಲ್ಲ. ಕುಟ್ಟಿಪುರದಲ್ಲಿ ಅವರ ಮಾಮನ ಮನೆಯಲ್ಲಿದ್ದಳು. ಇದರಲ್ಲಿ ಇನ್ನೊಂದು ತಮಾಷೆ ಏನು ಗೊತ್ತಾ ? ನಿರುದ್ಯೋಗಿ ಪದವೀಧರನಾದ ನಾನು ಅವರಿಗೆ ಅಳಿಯನಾದರೆ ಪಳನಿಯಾಂಡವನ ಸನ್ನಿಧಿಯಲ್ಲಿ ಮದುವೆ ಮಾಡುವುದಾಗಿ ಹರಕೆ ಬೇರೆ ಮಾಡಿಕೊಂಡಿದ್ದರಂತೆ. ಅಷ್ಟು ಆತಂಕ ಅವರಿಗೆ. ನಾನು ಒಪ್ಪಲಾರೆ ಎಂದು ಹೇಳಲು ಸಾಧ್ಯವಾಗಲಿಲ್ಲ." ಯುವಕ ನಿಲ್ಲಿಸಿದ.

"ಅದು ಸರಿ ನೀವು ಇಷ್ಟು ತಡವಾಗಿ ಹೋಗುತ್ತಿರುವುದರ ಕಾರಣ ?"

"ಅದಾ ? ಹೇಳ್ತೀನಿ. ನಾನು ಯಾವ ಕೆಲಸಕ್ಕೆ ಅರ್ಜಿ ಹಾಕಿದರೂ ಉತ್ತರವೇ ಬರುವುದಿಲ್ಲ. ಆದರೆ ಇದ್ದಕ್ಕಿದ್ದ ಹಾಗೆ ತಿರುಚ್ಚೂರಿನ ಹೈಸ್ಕೂಲಿನಲ್ಲಿ ಇಂಟರ್ವ್ಯೂಗಾಗಿ ಕರೆ ಬಂತು."

"ಬಿಡೋ ಹೆಣ್ಣುಮಗಳ ಅದೃಷ್ಟವೇ ಇರಬೇಕು !"

"ಅವಸರಪಡಬೇಡಿ ಸಾರ್, ಪೂರ್ತಿ ಕೇಳಿ. ಇಂಟರ್ವ್ಯೂಗೆ ಹೋದ ನನ್ನನ್ನು ತಕ್ಷಣವೇ ಆರಿಸಿಯೂ ಬಿಟ್ಟರು. ನಂತರ ಮಧ್ಯಾಹ್ನ ಸ್ಕೂಲ್ ಪ್ರೆಸಿಡೆಂಟನ್ನು ಅವರ ಮನೆಯಲ್ಲಿ ನೋಡಲು ಹೇಳಿದರು."

"ಅವರು ಏನು ಹೇಳಿದರು ?"

"ಏನು ಹೇಳಿದರಾ ?" ಎನ್ನುತ್ತಲೇ ಆ ಯುವಕ [illegible]

"ಸಾವಿರ ರೂಪಾಯಿ ಲಂಚ ಕೇಳಿದರು. ಅದೂ ಒಂದು ವರ್ಷಕ್ಕೆ ಮಾತ್ರ ಕೆಲಸ. ಎರಡು ಸಾವಿರ ಕೊಟ್ಟರೆ ಮೂರು ವರ್ಷ ಕೆಲಸ ಕೊಡುವುದಾಗಿ ಹೇಳಿದರು."

"ನೀವು ಏನು ಹೇಳಿದಿರಿ?"

"ಏನು ಹೇಳುವುದು? 'ನಾನು ನಾಳೆ ಬೆಳಿಗ್ಗೆ ಒಂದು ಹುಡುಗಿಯ ಕುತ್ತಿಗೆಗೆ ತಾಳಿ ಕಟ್ಟುತ್ತೇನೆ. ಅದನ್ನು ಬೇಕಾದರೆ ಮರುದಿನ ಬಿಚ್ಚಿಕೊಂಡು ಬಂದು ನಿಮ್ಮ ಕೈಗೆ ಹಾಕುತ್ತೇನೆ. ಅದುವರೆಗೆ ಕಾದಿರಿ' ಎಂದು ಹೇಳಿ ಬಂದೆ."

ನನ್ನ ಮನಸ್ಸಿಗೆ ತುಂಬಾ ವೇದನೆಯಾಯಿತು. ಅಷ್ಟರಲ್ಲಿ ಕಂಡಕ್ಟರ್, "ಸಾರ್ ಈಗ ತಿಳಿಯಿತಾ? ಪದವೀಧರನಾಗಿಯೂ ನಾನೇಕೆ ಈ ಕೆಲಸಕ್ಕೆ-ಬಂದೆ" ಎಂದು, ಎಂದು ನಡುವೆಯೇ ನುಡಿದ.

ಇದುವರೆಗೆ ನನಗೆ ತಿಳಿಯದಿದ್ದ ಅನೇಕ ವಿಷಯಗಳು ನನಗೀಗ ತಿಳಿಯತೊಡಗಿದುವು. ಆ ಯುವಕನ ಪೂರ್ಣ ವಿವರಗಳನ್ನು ಕೇಳಿ ತಿಳಿದುಕೊಂಡೆ. ನಂತರ, "ತಮ್ಮ, ಕೆಲಸದ ವಿಷಯಕ್ಕಾಗಿ ಇಷ್ಟು ನೊಂದುಕೊಳ್ಳಬೇಡ. ಮುಂದಿನ ವಾರ, ಮದರಾಸಿನಲ್ಲಿ ನನ್ನನ್ನು ಈ ವಿಳಾಸದಲ್ಲಿ ಬಂದು ಕಾಣು," ಎಂದು ವಿಳಾಸದ ಕಾರ್ಡನ್ನು ಅವನ ಕೈಯಲ್ಲಿ ಕೊಟ್ಟೆ. ಅದನ್ನು ಓದಿಕೊಂಡ ಯುವಕನ ಮುಖದಲ್ಲಿ ನಂಬಿಕೆಯ ಹೂ ಅರಳಿತು. ಅವನ ನಂಬಿಕೆಯನ್ನು ದೃಢಪಡಿಸುವಂತೆ ಇದ್ದಕ್ಕಿದ್ದಂತೆ ಕಪ್ಪು ಮೋಡಗಳು ಮರೆಯಾಗಿ ಪ್ರಕಾಶಮಾನವಾಗಿ ಬಿಸಿಲು ಬಿತ್ತು.

ಸಣ್ಣದಾಗಿ ಹನಿಯುತ್ತಿದ್ದ ಮಳೆ ಒಂದು ಕಡೆ, ಮಳೆಯಲ್ಲಿ ನೀರಾಡಿಎದ್ದ ಕೇರಳದ ಬಯಲುಗಳು ಒಂದು ಕಡೆ, ತಣ್ಣಗೆ ಬೀಸುತ್ತಿದ್ದ ಸಂಜೆಯ ಗಾಳಿಯೊಂದೆಡೆ—ಎಲ್ಲವೂ ಸೇರಿ ನನ್ನನ್ನೊಂದು ಹಿತವಾದ ವಾತಾವರಣಕ್ಕೆ ಕೊಂಡೊಯ್ಯುತ್ತಿತ್ತು. ಇವಕ್ಕೆಲ್ಲ ಕಳಸವಿಟ್ಟಂತೆ ಪೂರ್ವ ದಿಕ್ಕಿನಲ್ಲಿ ದೊಡ್ಡದೊಂದು ಕಾಮನಬಿಲ್ಲು ಗಂಭೀರವಾಗಿ ಕಾಣುತ್ತಿತ್ತು. ವೇದನೆಗೊಂಡ ನನ್ನ ಮನಸ್ಸಿಗೆ ತುಸು ಸಮಾಧಾನವೆನಿಸಿತು. ಯುವಕನೂ ತನ್ನ ನೋವನ್ನು ಮರೆತು ಹೊರಗಿನ ನೋಟದ ಸೌಂದರ್ಯದಲ್ಲಿ ಲೀನ-



ವಾದನು. ಆ ರಮ್ಯ ದೃಶ್ಯಗಳು, ಸೋತು ಹೋದ ಅವನ ಮನಸ್ಸಿಗೆ ಚೇತನವನ್ನೀಯುತ್ತ ಮರುದಿನ ಆರಂಭವಾಗುವ ಅವನ ವೈವಾಹಿಕ ಜೀವನವೆಲ್ಲ ಪ್ರಕಾಶಮಯವಾಗಿರುತ್ತದೆಂಬ ಭ್ರಮೆಯನ್ನುಂಟುಮಾಡಿರಬೇಕು–ನಂಬಿಕೆ ಎನ್ನುವುದೇ ಯೌವನದ ವಿಶೇಷ ಸ್ವತ್ತಲ್ಲವೆ?

ಸಂಜೆ ಸುಮಾರು ನಾಲ್ಕೂವರೆ ಗಂಟೆಯಾಗಿರಬೇಕು. ಬಸ್ ನೆಮ್ಮಾರನ್ನು ಸಮೀಪಿಸುತ್ತಿತ್ತು. ಇದ್ದಕ್ಕಿದ್ದಂತೆ ಬಸ್ಸನ್ನು ರಸ್ತೆಯ ಬದಿಗೆ ನಿಲ್ಲಿಸಿದ ಡ್ರೈವರ್. ಕಂಡಕ್ಟರರಿಗೇ ವಿಷಯವೇನೆಂದು ಮೊದಲು ಅರ್ಥವಾಗಲಿಲ್ಲ. ಬಲ ಭಾಗದ ಮುಂದಿನ ಚಕ್ರ ಪಂಕ್ಚರ್ ಆಗಿತ್ತೆಂಬುದು ನಂತರವೇ ತಿಳಿದದ್ದು. ಎಲ್ಲರಿಗೂ ತಿಳಿಯ ಹೇಳಿದರು. ಅದೃಷ್ಟವಶಾತ್ ಸ್ಟೆಪ್ನಿ ಇತ್ತು. ಎದುರಿಗೆ ಬರುತ್ತಿದ್ದ ಲಾರಿಯೊಂದನ್ನು ನಿಲ್ಲಿಸಿ ಜಾಕ್ ಪಡೆದು ಕೆಲಸ ಆರಂಭಿಸಿದರು.

ಬಸ್ಸಿನಿಂದ ಇಳಿದ ಪ್ರಯಾಣಿಕರಲ್ಲಿ ಕೆಲವರು ಹತ್ತಿರವಿದ್ದ ಕಾಲುವೆಯಲ್ಲಿ ನೀರು ಕುಡಿದರು. ಮತ್ತೆ ಕೆಲವರು ಮರೆಯಾದ ಸ್ಥಳ ಹುಡುಕಾಡಿಕೊಂಡು ಹೋದರು. ನಂಬೂದರಿ ಸಂಧ್ಯಾವಂದನೆ ಮಾಡಲು ಒಂದು ಚಿಕ್ಕ ಚೊಂಬಿನೊಂದಿಗೆ ಕಾಲುವೆಯಲ್ಲಿ ಇಳಿದುಬಿಟ್ಟರು. ತಿರುಚ್ಚೂರಿನಲ್ಲಿ ಹತ್ತಿದ ಮುಸ್ಲಿಂ ಹಿರಿಯರು, ಮರದಡಿಯಲ್ಲಿ ಒಂದು ಚಿಕ್ಕ ವಸ್ತ್ರವನ್ನು ಹಾಸಿ ಪ್ರಾರ್ಥನೆಗೆ ತೊಡಗಿದರು. ಪಳನಿಗೆ ಹೋಗಬೇಕಾದ ಹೊಸ ದಂಪತಿಗಳು ಏನು ಮಾಡುವುದೆಂದು ತಿಳಿಯದೆ ಒಂದು ಮರದಡಿಯಲ್ಲಿ ಸುಮ್ಮನೆ ನಿಂತಿದ್ದರು. ಪಾಪ! ನಮಾಜಿಗೆ ಹೋಗಬೇಕಾಗಿದ್ದ ಹಿರಿಯರ ಮುಖವನ್ನು ನೋಡಲಾಗುತ್ತಿರಲಿಲ್ಲ. ಅವರಿಗೆ ಮೊಮ್ಮಗ ಉಳಿಯುತ್ತಾನೆಯೋ ಎಂಬ ಚಿಂತೆ, ಯುವಕನಿಗೆ ಬೆಳಕುಹರಿದರೆ ಮದುವೆ. ಇಂತಹ ಇಕ್ಕಟ್ಟಾದ ಪರಿಸ್ಥಿತಿಯಲ್ಲಿ ಬಸ್ ನಿಂತು ಹೋಗಬೇಕೆ? ಇದರ ಮಧ್ಯೆ 'ಬಸ್ ನಿಂತು ಹೋಗುತ್ತದೆ' ಎಂದು ಸವಾಲು ಹಾಕಿದ ಯುವಕರ ತಂಡ ಸ್ವಲ್ಪ ದೂರದಲ್ಲಿ ನಿಂತು, ಗೇಲಿಮಾಡುವ ದೃಷ್ಟಿಯಿಂದ ಸಿಗರೇಟಿನ ಹೊಗೆಯನ್ನು ಉಂಗುರಳಾಗಿ ಬಿಡುತ್ತಿದ್ದರು.

ಮಧ್ಯೆ ಒಮ್ಮೆ ಕಂಡಕ್ಟರ್ ನನ್ನ ಬಳಿಗೆ ಬಂದು, "ಸಾರ್ ಯೋಚಿಸಬೇಡಿ, ಇನ್ನು ಹತ್ತು ನಿಮಿಷಗಳಲ್ಲಿ ಬಸ್ ಹೊರಟುಬಿಡುತ್ತದೆ, ಎಂದ. ಅವನು ಮರಳಿ ಹೋಗುವಾಗ ಸಿಗರೇಟುಧಾರಿಗಳಾದ ಆ ಕೊಳವೆಪ್ಯಾಂಟ್ ಯುವಕರನ್ನು ದುರದುರನೆ ನೋಡಿದ ನೋಟ ನೋಡಬೇಕಿತ್ತು. ನನಗೆ ನಗೆ ಬಂತು, ಆ ಯುವಕರೂ ನಗುತ್ತಿದ್ದರು.

ಮತ್ತೆ ಬಸ್ ಹೊರಟಾಗ ಚೆನ್ನಾಗಿ ಕತ್ತಲಾಗಿತ್ತು. ಡ್ರೈವರ್ ತನ್ನ ಕೈಲಾದಷ್ಟೂ ವೇಗವಾಗಿ ಬಸ್ಸನ್ನು ನಡೆಸುತ್ತಿದ್ದ. ಆದರೆ ಅದಕ್ಕೂ ಆಪತ್ತು ಬಂದಿತು. ಬಸ್ಸಿನ ಹೆಡ್ ಲೈಟ್ ಸರಿಯಾಗಿ ಉರಿಯುತ್ತಿರಲಿಲ್ಲ. ಅದರಿಂದ ನಿಧಾನವಾಗಿಯೇ ಹೋಗಬೇಕಾಯಿತು. ಆಗ ಕಂಡಕ್ಟರ್ ಇದ್ದಕ್ಕಿದ್ದಂತೆ ಬಸ್ ನಿಲ್ಲಿಸಲು ಹೇಳಿದರು. ಡ್ರೈವರ್ ಸೀಟಿನ ಹಿಂದಿದ್ದ ಆ 'ಸ್ಟೈಲ್' ಆಸಾಮಿಯನ್ನು ಎಬ್ಬಿಸಿ ಕೊನೆಯಲ್ಲಿದ್ದ ನೀಳವಾದ ಸೀಟಿಗೆ ಹೋಗಲು ಹೇಳಿದ. ಇಬ್ಬರೂ ಪರಸ್ಪರ ಒಂದು ವಿಧವಾಗಿ ನೋಡಿಕೊಂಡರು, ಕ್ಷಣ ಹೊತ್ತು ಮಾತ್ರ. ನಂತರ ಆ 'ಸ್ಟೈಲ್' ಆಸಾಮಿ ಹಾವಾಡಿಗನ ಬುಟ್ಟಿಯಲ್ಲಿಯ ಹಾವಿನಂತೆ ಅಡಗಿ, ಕಂಡಕ್ಟರ್ ಹೇಳಿದ ಹಾಗೆ ಸ್ಥಳವನ್ನು ಬದಲಾಯಿಸಿಬಿಟ್ಟ. ಮತ್ತೆ ಬಸ್ ಹೊರಟಿತು. ನನಗೇನು, ಯಾರಿಗೂ ಏನೂ ಅರ್ಥವಾಗಲಿಲ್ಲ. ಕೆಲ ನಿಮಿಷಗಳ ನಂತರ ಕಂಡಕ್ಟರ್ ನನ್ನ ಬಳಿ ಮೆಲ್ಲಗೆ ಮಾತನಾಡಲಾರಂಭಿಸಿದ. "ನಿಮಗೆ ಪಾಪ, ಪುಣ್ಯದಲ್ಲಿ ನಂಬಿಕೆ ಇದೆಯಾ?"

"ಇದೆ, ಯಾಕೆ?"

"ಆ ಹುಡಗಿ ಆ ಆಸಾಮಿಯು ತನ್ನ ಅಣ್ಣ ಎಂದು ತಾನೇ ಹೇಳಿದಳು?"

"ಹೌದು, ಅದಕ್ಕೇನೀಗ?"

"ಅವನು ಅವಳಣ್ಣನೂ ಅಲ್ಲ, ಏನೂ ಅಲ್ಲ."

"ನಿಮಗೆ ಹೇಗೆ ಗೊತ್ತು?"

"ಸಾರ್, ನಿಮಗೆಲ್ಲ ಇವು ಅರ್ಥವಾಗುವುದಿಲ್ಲ. ನಮಗೆ ಗೊತ್ತಾಗುತ್ತೆ. ಬಸ್ಸಿನಲ್ಲಿ ಬೆಳಕಿಲ್ಲದಿದ್ದರೆ ಇಲ್ಲಿನ ಚೇಷ್ಟೆಗಳು ನಮ್ಮ ಕಣ್ಣಿಗೆ ಬೀಳುವುದಿಲ್ಲ ಎಂದುಕೊಂಡಿದ್ದಾರೆ. ಅದೂ ಮುಂದಿನ ಸೀಟಿನಲ್ಲಿ ಅಕ್ರಮ ನಡೆಯುತ್ತಿದ್ದರೆ ನೋಡುತ್ತ

ಸುಮ್ಮನೆ ಕೂಡುವುದೇ?" ಹಲ್ಲು ಹಲ್ಲು ಕಡಿಯುತ್ತಿದ್ದ ಕಂಡಕ್ಟರ್ ನನಗೆ ಏನು ಹೇಳಬೇಕೆಂದೇ ತಿಳಿಯಲಿಲ್ಲ. ಕಂಡಕ್ಟರ್ ಮುಂದುವರಿಸಿದ. "ಆ ಬಲಗಡೆ ಮುಂಭಾಗದ ಟಯರ್ ಏಕೆ ಪಂಕ್ಚರ್ ಆಯಿತು ಎಂದು ಈಗಲಾದರೂ ತಿಳಿಯಿತಾ?"

"ಹೇಗೆ? ಗೊತ್ತಾಗಲಿಲ್ಲವೆ?"

"ಗೊತ್ತಾಗಲಿಲ್ಲ? ಆ ಟಯರ್ ಎಲ್ಲಿದೆ ಗೊತ್ತೇ? ಆ ಜೋಡಿ ಕೂತಿತ್ತಲ್ಲ, ಸರಿಯಾಗಿ ಆ ಸೀಟಿನ ಕೆಳಗೆ. ನಾನಾಗಲೇ ನಿಮಗೆ ಹೇಳಲಿಲ್ಲವೆ? ಯಂತ್ರಗಳೂ ಕೂಡಾ ಒಂದು ಬಗೆಯಲ್ಲಿ ಸತ್ಯದ ಕಟ್ಟಿಗೆ ಒಳಪಟ್ಟಿರುತ್ತವೆ ಎಂದು."

ನನಗೆ ಅಳುವುದೋ, ನಗುವುದೋ ತಿಳಿಯಲಿಲ್ಲ. ದೇವಸ್ಥಾನ ದೇವರು ಯಾವುದರಲ್ಲೂ ನಂಬಿಕೆ ಇಲ್ಲದವರಿಗೆ ಇಂಥ ಒಂದು ನಂಬಿಕೆಯೇ? ಕಂಡಕ್ಟರ್ ಒಬ್ಬ ವಿಚಿತ್ರ ಮನುಷ್ಯ ಎನಿಸಿತು ನನಗೆ. ಅಷ್ಟರಲ್ಲಿ ನೆಮ್ಮಾರು ಬಂದುಬಿಟ್ಟಿತು. ಏಷ್ಟೋ ಮಂದಿ ಇಳಿದರು, ಹತ್ತುವುದಕ್ಕಾಗಿ ಹೊರಗೆ ಒಂದು ಚಿಕ್ಕ ಗುಂಪೇ ಕಾದಿತ್ತು. ಸಕುಟುಂಬವಾಗಿ ಪಳನಿಗೆ ಹೊರಟಿದ್ದ ಒಬ್ಬ, "ಸಾರ್ ಪಳನಿಗೆ ಮೂರು ಟಿಕೆಟ್, ಪಳನಿಗೆ ಮೂರು ಟಿಕೆಟ್," ಎಂದು ಉಸಿರು ಬಿಡದೆ ಕೂಗುತ್ತಿದ್ದ, ಅವನು, ಅವನ ಹೆಂಡತಿ, ಹದಿನೈದು ವರ್ಷದ ಹುಡುಗಿಯೊಬ್ಬಳು, ಹೆಂಡತಿಯ ಕಂಕುಳಲ್ಲಿ ಒಬ್ಬ ಹುಡುಗ.

"ಮಗುವಿನ ವಯಸ್ಸೆಷ್ಟು ?"

"ಐದು."

"ಅಲ್ಲ, ಆರು," ಎಂದು ಹೇಳಿದ ಹದಿನೈದು ವರ್ಷದ ಹುಡುಗಿಯ ತಲೆಯ ಮೇಲೊಂದು ಪೆಟ್ಟು ಬಿತ್ತು. ತಾಯಿ, ಮಗಳು ಕಣ್ಣು, ಕಣ್ಣು ಬಿಟ್ಟರು.

"ಏಯ್ ಮೂರು ವರ್ಷ ವಯಸ್ಸಾದರೂ ಟಿಕೆಟ್ ತಗೋಬೇಕು," ಎಂದ ಕಂಡಕ್ಟರ್. ಕಾವಡಿಗಳು, ಗಂಟು ಮೂಟೆಗಳೊಡನೆ ಆ ಗುಂಪು ಗಡಿಬಿಡಿಯಿಂದ ಬಸ್ಸನ್ನೇರಿತು, ಆಗಲೇ ಪಳನಿ-ದಂಡಪಾಣಿ ದರ್ಶನ ಭಾಗ್ಯ ಲಭಿಸಿದ ತೃಪ್ತಿ ಆ ಕುಟುಂಬಸ್ಥನ ಮುಖದಲ್ಲಿ ತುಂಬಿತ್ತು. ಅವರ ಹಿಂದೆ ಇಬ್ಬರು ಸುಂದರ ಯುವತಿಯರು ಹತ್ತಿದರು. ಅವರ ಉಡುಗೆ ತೊಡಿಗೆಗಳಲ್ಲಿ ಅವಶ್ಯಕತೆಗಿಂತ ಹೆಚ್ಚು ಅಲಂಕಾರವಿತ್ತು.

"ಎಲ್ಲಿಗೆ?" ಅವರುಗಳು ಉತ್ತರಿಸಲಿಲ್ಲ. ಹಿಂದೆ ಕೈ ತೋರಿಸಿದರು. ಲುಂಗಿಯುಟ್ಟ ಮೀಸೆಧಾರಿಯೊಬ್ಬ ನಿಂತಿದ್ದ. ತಮಿಳನಂತೆ ಕಾಣುತ್ತಿದ್ದ ಅವನು ಕಂಡಕ್ಟರ ಬಳಿ ಬಂದು ಕೆಳಗಿನ ಸ್ವರದಲ್ಲಿ ಪೊಳ್ಳಾಚಿಗೆ ಮೂರು ಟಿಕೆಟು ಕೇಳಿದ. ಅವನನ್ನು ದುರುಗುಟ್ಟಿಕೊಂಡು ನೋಡುತ್ತಲೇ ಕಂಡಕ್ಟರ್ ಟಿಕೆಟ್ ಕೊಟ್ಟ. ಬಸ್ ಹೊರಟಿತು ಕಂಡಕ್ಟರ್ ಮೆಲ್ಲಗೆ ನನ್ನ ಬಳಿ, "ಸಾರ್ ಈ ಬಸ್ ಸರಿಯಾದ ವೇಳೆಗೆ ಪಳನಿ ತಲುಪುವುದೆಂದು ನನಗಂತೂ ತೋರುವುದಿಲ್ಲ," ಎಂದ.

"ಯಾಕೆ?"

"ಇಂದು ಬಸ್ಸಿನಲ್ಲಿ ನಡತೆ ಸರಿ ಇಲ್ಲದವರು ಬಹಳ ಮಂದಿ ಹತ್ತಿಬಿಟ್ಟರು. ಈಗ ಹತ್ತಿದನಲ್ಲ ಮೀಸೆ ಆಸಾಮಿ, ತಮಿಳಿನವ. ಅವನು ಯಾರು ಗೊತ್ತೆ? ಕೊಯಿಮತ್ತೂರಿನ ಕೆಲ ಲಾಡ್ಜ್‌ಗಳಿಗೆ ಏಜೆಂಟ್."

"ಏಜೆಂಟು ಅಂದರೆ?"

"ಅವನ ಜೊತೆ ಆ ಹುಡುಗಿಯರನ್ನು ನೋಡಿಯೂ ನಿಮಗೆ ತಿಳಿಯಲಿಲ್ಲವೇ?"

ನನಗೆ ಅರ್ಥಂಬರ್ಥ ಅರ್ಥವಾದಂತಾಯಿತು. ಗೊತ್ತಾಯಿತೆಂಬಂತೆ ತಲೆಯಾಡಿಸಿದೆ. ಅಷ್ಟರಲ್ಲಿ ರಸ್ತೆಯಲ್ಲಿ -ಯಾರೋ ಕೈ ತೋರಿಸಿದರೆಂದು ಬಸ್ ನಿಂತಿತು. "ಬಸ್‌ಸ್ಟ್ಯಾಂಡಿಗೆ ಬಂದು ಹತ್ತದೆ ಯಾಕಾದ್ರೂ ಹೀಗೆ ಪ್ರಾಣ ತಿನ್ನುತ್ತೀರಿ?" ಎಂದು ಶಪಿಸುತ್ತಲೇ ಕಂಡಕ್ಟರ್ ಬಾಗಿಲು ತೆಗೆದ. ಬಸ್ ಊರಿನಿಂದ ಒಂದು ಮೈಲು ದೂರ ಬಂದಿರಬಹುದು. ಹೊರಗೆ ದಟ್ಟವಾದ ಕತ್ತಲು. ನಾಲ್ಕೈದು ಮಂದಿ ದೊಡ್ಡದೊಂದು ಪೆಟ್ಟಿಗೆಯೊಡನೆ ನಿಂತದ್ದು ಮಾತ್ರ ಕಾಣುತ್ತಿತ್ತು. ಬಸ್ ನಿಂತ ತಕ್ಷಣ ಮೂರು ಮಂದಿ ಧಡಧಡನೆ ಬಸ್ ಮೇಲೆ ಹತ್ತಿ ಪೆಟ್ಟಿಗೆಯನ್ನು ಇಟ್ಟುಬಿಟ್ಟರು.

"ಏಯ್, ಬಸ್ಸಿನಲ್ಲಿ ಸ್ಥಳವಿದೆಯೋ ಇಲ್ಲವೋ ಎಂದು ಕೂಡಾ ಕೇಳದೆ ನಿಮ್ಮ ಪಾಡಿಗೆ ನೀವು ಪೆಟ್ಟಿಗೆಯನ್ನು ಮೇಲೆ ಹಾಕಿಬಿಟ್ಟರೆ ಏನರ್ಥ? ಇರುವುದು ಒಂದೇ ಒಂದು ಸೀಟು," ಎಂದು

ಕೂಗಾಡಿದ ಕಂಡಕ್ಟರ್.

“[illegible]”

“ಸರಿ, ಆದ್ರೆ ಪೆಟ್ಟಿಗೆಗೆ ಲಗ್ಗೇಜ್ ಕೊಡ ಬೇಕು.”

“ಹೋ ಕೊಟ್ಟುಬಿಡ್ತೀವಿ.”

“ಪೆಟ್ಟಿಗೆ ಏನಷ್ಟು ಭಾರವಾಗಿರುವಂತಿದೆ ಯಲ್ಲ?”

“ಎಲ್ಲ ಕಲ್ಲುಗಳು, ಗಂಧದ ತುಂಡುಗಳು– ವ್ಯಾಪಾರಕ್ಕಾಗಿ ಹೋಗುತ್ತಿದೆ.” ಒಬ್ಬನನ್ನು ಮಾತ್ರ ಹತ್ತಿಸಿಕೊಂಡು ಕಂಡಕ್ಟರ್ ರೈಟ್ ಕೊಟ್ಟುಬಿಟ್ಟ.

ಘಂಟೆ ಏಳಾಯಿತು. ಬಸ್ ಕೊಲ್ಲಂಗೋಟೆ ಯನ್ನು ದಾಟಿ ಒಂದು ಮೈಲು ಹೋಗಿರ ಬಹುದು. ಮತ್ತೆ ಮಳೆ ಆರಂಭವಾಯಿತು. ಮಳೆ ಎಂದರೆ ಸಾಧಾರಣ ಮಳೆಯಲ್ಲ. ಘೋ ಘೋ ಎಂದು ಸುರಿಯುತ್ತಿದ್ದ ಆ ಮಳೆಯಲ್ಲಿ, ಮಂಕು [illegible] ಬಸ್ ಮುಂದೆ ಹೋಗುವುದು ಅಪಾಯವೆಂದು ಡ್ರೈವರ್ ಬಸ್ಸನ್ನು ರಸ್ತೆಯ ಬದಿಗೆ ನಿಲ್ಲಿಸಿಬಿಟ್ಟ. ಎತ್ತ ತಿರುಗಿದರೂ ಭಯಂಕರ ಕತ್ತಲು. ಎಡೆಬಿಡದೆ ಸುರಿಯುತ್ತಿದ್ದ ಮಳೆ. ಆಗಾಗ ತೋರುವ ಮಿಂಚಿನ ಬೆಳಕಿನಲ್ಲಿ ಕಾಣುತ್ತಿದ್ದ ಗಾಢಾರಣ್ಯ [illegible] ಕೇಳಿ ಬರುತ್ತಿದ್ದ ಸಿಡಿಲಿನ ಶಬ್ದ, ಎಲ್ಲವೂ ಸೇರಿ ನಮ್ಮೆಲ್ಲರನ್ನೂ ಬಲಹೀನರನ್ನಾಗಿ ಮಾಡಿಬಿಟ್ಟಿದ್ದವು. ಒಬ್ಬರ ಮುಖದಲ್ಲಿಯೂ ಕಳೆಯಿಲ್ಲ. ಪೊಳ್ಳಾಚಿ ಹಿರಿಯರು ತಮ್ಮ ಮೊಮ್ಮಗನನ್ನು ನೆನಸಿಕೊಂಡು ಅಳುವುದಕ್ಕೇ ಆರಂಭಿಸಿಬಿಟ್ಟರು. [illegible] ಬದಲಾಗಿ ಮುಸ್ಲಿಂ ಹಿರಿಯರು ಈಗ ಅವರಿಗೆ ಸಮಾಧಾನ ಹೇಳತೊಡಗಿದರು. [illegible] ಅವರಿಗಾಗಿಯೂ [illegible] ಪ್ರಾರ್ಥಿಸತೊಡಗಿದರು. ನನ್ನ ಪಕ್ಕದಲ್ಲಿದ್ದ ಯುವಕನೋ [illegible] ಕಂಡಕ್ಟರೊಡನೆ ಮಾತ-[illegible].

“[illegible] ಕಂಡಕ್ಟರೆ, ಹೀಗೆ ನಿಂತುಬಿಟ್ಟರೆ ಹೇಗೆ?”

“ನಾನಾಗಲೇ ಹೇಳಿದ್ನಲ್ಲ...” ಎಂದು ಆ ಯುವಕ ತನಗೆ [illegible] ಉತ್ತರಿಸಿದನು. ಆದರೆ ಸ್ವಲ್ಪ ಹೊತ್ತಿನ ನಂತರ, “ಸಾರ್, ಇದು ಸತ್ಯಕ್ಕೆ ಅಡಗಿ ನಡೆವ ವಾಹನ. ಪಾಪದ ಹೊರೆ ಹೆಚ್ಚಾಗುತ್ತ ಆಗುತ್ತ ಇದರ ಶಕ್ತಿ ಕುಂದುತ್ತಲೇ ಹೋಗುತ್ತದೆ,” ಎಂದನು.

ನನಗೆ ಸಿಟ್ಟು ಬಂತು. “ಹಾಗಾದರೆ [illegible] ಕಾಯಕಗಳಿಗೆಂದೇ ಹೋಗುತ್ತಿರುವವರೂ ಇಷ್ಟು ಮಂದಿ ಇದ್ದಾರಲ್ಲ? ಅವರ ಮನೋಬಲಕ್ಕೆ ಶಕ್ತಿಯೇ ಇಲ್ಲವೇನು?” ಎಂದು ಕೇಳಿದೆ.

“ಖಂಡಿತ ಇದೆ ಸಾರ್. ಆ ಶಕ್ತಿಯಲ್ಲಿಯೇ ನಾನು ಇನ್ನೂ ಸ್ವಲ್ಪ ನಂಬಿಕೆ ಇರಿಸಿಕೊಂಡಿದ್ದೇನೆ...” ಕಂಡಕ್ಟರ್ ಮಾತನಾಡುತ್ತಿದ್ದ ಹಾಗೆಯೇ, ಹಿಂದುಗಡೆಯಿಂದ ಫಳೀರೆಂದು ಬೆಳಕು ಬೀರುತ್ತ ಅತಿ ವೇಗವಾಗಿ ಒಂದು ಜೀಪ್ ಬಸ್ಸನ್ನು ದಾಟಿ ಮುಂದೆ ಹೋಯಿತು. ತುಸು ದೂರ ಹೋಗಿ ನಿಂತು, ಅದು ಮತ್ತೆ ಹಿಂದು ಹಿಂದಕ್ಕೆ ಬರತೊಡಗಿತು. ಬಸ್ಸಿನ ಮುಂದೆ, ಕೆಲ ಗಜಗಳ ದೂರದಲ್ಲಿ ನಿಂತ ಜೀಪಿನಿಂದ ಒಬ್ಬ ಪೋಲೀಸ್ ಅಧಿಕಾರಿ ಇಳಿದು ಬಂದರು. ಅಷ್ಟ-ರಲ್ಲಿ ಮಳೆಯೂ ಸ್ವಲ್ಪ ಕಡಿಮೆಯಾಯಿತು. ಕಂಡಕ್ಟರ್ ಬಸ್ಸಿನಿಂದಿಳಿದು ಪೋಲೀಸರೊಡನೆ ಏನೋ ಮಾತನಾಡಿದರು. ತುಸು ಹೊತ್ತಿನಲ್ಲಿಯೇ ಪೋಲೀಸ್ ನಾಯಿಯೊಂದು ನಮ್ಮ ಬಸ್ಸಿನೊಳಗೆ ಹಾರಿತು. ಒಂದೇ ಒಂದು ನಿಮಿಷ ಆ ನಾಯಿ ಅಲ್ಲಿ ಇಲ್ಲಿ ಮೂಸಿ ನೋಡಿ ಹೊರಗೆ ಹೋಗಿ ಬೊಗಳಲಾರಂಭಿಸಿತು. ನಂತರ ಅದನ್ನು ಬಸ್ಸಿನ ಮೇಲ್ಭಾಗಕ್ಕೆ ಹತ್ತಿಸಿಬಿಟ್ಟಿತು. ಮುಂದಿನ ಎರಡು ನಿಮಿಷಗಳಲ್ಲಿ ಆ ನಾಯಿ ಮತ್ತೆ ಬಸ್ಸಿ-ನೊಳಗೆ ಬಂದು ನೇರವಾಗಿ ಹೋಗಿ ಕೊನೆಯ ಸೀಟಿನಲ್ಲಿದ್ದ ಆ ಪೆಟ್ಟಿಗೆಯ ಯಜಮಾನನನ್ನು ಹಿಡಿದುಕೊಂಡಿತು.

ಈ ಮಧ್ಯೆ ನಮ್ಮೊಡನೆ ಇಬ್ಬರು ಹೆಣ್ಣು ಮಕ್ಕಳೊಡನೆ ಹತ್ತಿದ ಮೀಸೆ ಆಸಾಮಿ ಪೋಲೀಸ್ ಇನ್‌ಸ್ಪೆಕ್ಟರ ಕಣ್ಣಿನಿಂದ ತಪ್ಪಿಸಿ-ಕೊಳ್ಳಲು ತಲೆಯನ್ನು ಕೆಳಗೆ ಹಾಕಿ ನಿದ್ರಿಸು-ವವನಂತೆ ನಟಿಸುತ್ತಿದ್ದ. ಆದರೂ ಪೋಲೀಸ್

ಅಧಿಕಾರಿಯ ಸೂಕ್ಷ್ಮ ದೃಷ್ಟಿಯಿಂದ ಅವನಿಗೆ ತಪ್ಪಿಸಿಕೊಳ್ಳಲಾಗಲಿಲ್ಲ. ಅವರಿಬ್ಬರನ್ನೂ ಕುತ್ತಿಗೆಗೆ ಕೈಹಾಕಿ ತಳ್ಳಿಕೊಂಡೇ ಜೀಪಿಗೆ ಕರೆದೊಯ್ದರು. ಪೋಲೀಸರಲ್ಲಿ ಒಬ್ಬನು ಬಸ್ಸಿನಲ್ಲಿ ಹತ್ತಿಕೊಂಡನು. ಜೀಪ್ ಮುಂದೆ ಹೊರಟಿತು. ಅದರ ಹಿಂದೆಯೇ ಬಸ್ಸು ಮೆಲ್ಲಗೆ ಹೊರಟಿತು. ಪ್ರಯಾಣಿಕರಿಗೆಲ್ಲ ಇದೆಲ್ಲ ಏನೋ ನಿಗೂಢವಾಗಿ ಕಾಣಿಸುತ್ತಿತ್ತು. ಒಂದು ವಿಧದ ಭಯ ಎಲ್ಲರನ್ನೂ ಆವರಿಸಿತು. ಅಂತೂ ಬಸ್ ಪೊಳ್ಳಾಚಿಯನ್ನು ತಲುಪಿತು. ಆಗ ಘಂಟೆ ಎಂಟು. ಬಸ್ ನಿಲ್ದಾಣಕ್ಕೆ ಹೋಗಲಿಲ್ಲ. ಪೋಲೀಸ್ ಸ್ಟೇಶನ್ನಿಗೆ ಹೋಯಿತು. ಬಸ್ಸಿನಿಂದ ಯಾರೂ ಇಳಿಯ ಕೂಡದೆಂದು ಹೇಳಿಬಿಟ್ಟರು. ಡ್ರೈವರ್, ಕಂಡಕ್ಟರ್ ಇಬ್ಬರೂ ಸ್ಟೇಶನ್ ಒಳಗೆ ಹೋಗಿ ಏನೋ ಸ್ಟೇಟ್‌ಮೆಂಟ್ ಬರೆದುಕೊಟ್ಟರು. ನಂತರ ನನ್ನನ್ನೂ ಪಾದ್ರಿಯನ್ನೂ ಸಾಕ್ಷಿಗೆ ಕರೆದರು. ಅಲ್ಲಿಗೆ ಹೋದ ನಮಗೆ ದೊಡ್ಡ ಆಘಾತವೇ ಕಾದಿತ್ತು. ಬಸ್ಸಿನ ಮೇಲೆ ಹಾಕಲಾಗಿದ್ದ ಪೆಟ್ಟಿಗೆಯನ್ನು ಅಲ್ಲಿ ತಂದಿಡಲಾಗಿತ್ತು. ಅದರಲ್ಲಿದ್ದುದು



ಕಲ್ಲೂ ಅಲ್ಲ, ಗಂಧದ ತುಂಡೂ ಅಲ್ಲ. ಕೊಲೆಯಾದ ಒಂದು ಮನುಷ್ಯ ದೇಹ. ಪೆಟ್ಟಿಗೆಯನ್ನು ಬಸ್ಸಿನ ಮೇಲೆಯೇ ಬಿಟ್ಟು ಆ ಆಸಾಮಿ ಪೊಳ್ಳಾಚಿಯಲ್ಲಿ ಇಳಿದು ಹೊರಟು ಹೋಗಲಿದ್ದ. ಅದೇ ಅವರ ಯೋಜನೆಯಾಗಿತ್ತು. ಆ ಭಯಂಕರವನ್ನು ಈಗ ನೆನಸಿಕೊಂಡರೂ ಮೈ ನಡಗುತ್ತದೆ. ಅರ್ಧ ಘಂಟೆಯಲ್ಲಿ ನಮ್ಮೆಲ್ಲರನ್ನೂ ಬಿಟ್ಟುಕೊಟ್ಟರು. ಪೆಟ್ಟಿಗೆಯೊಡನೆ ಬಂದವನೂ ಮೀಸೆ ಹೊತ್ತ ತಮಿಳನೂ ಬೇರೆ ಬೇರೆ ಕಾರಣಗಳಿಗಾಗಿ ಲಾಕ್ ಅಪ್‌ನಲ್ಲಿ ಇಡಲ್ಪಟ್ಟಿದ್ದರು. ಆ ತಮಿಳಿನ ಜೊತೆ ಬಂದ ಹೆಣ್ಣು ಮಕ್ಕಳು ಹೆದರಿ ಕಕ್ಕಾಬಿಕ್ಕಿಯಾಗಿದ್ದರು. ನಾವು ಬಸ್ಸಿಗೆ ಹಿಂದಿರುಗಿದೆವು. ಬಸ್ ಪೋಲೀಸ್ ಸ್ಟೇಶನ್ನನ್ನು ಬಿಟ್ಟು ಹೊರಟಿತು. ಆದರೆ ಪೆಟ್ಟಿಗೆಯ ವಿಷಯವನ್ನು ಇತರ ಪ್ರಯಾಣಿಕರಿಗೆ ಹೇಳಿ ಅವರಿಗೆ ಭಯ ಹುಟ್ಟಿಸಲು ನಾವು ಇಚ್ಛಿಸಲಿಲ್ಲ: ಸುಮ್ಮನಿದ್ದುಬಿಟ್ಟೆವು.

ಪೊಳ್ಳಾಚಿ ಬಸ್ ಸ್ಟ್ಯಾಂಡಿನಲ್ಲಿ ಬಸ್ ನಿಲ್ಲುತ್ತಲೇ ಎಲ್ಲರೂ ತಿಂಡಿತಿನ್ನಲು ಇಳಿದೆವು. ಪೊಳ್ಳಾಚಿ ಹಿರಿಯರನ್ನು ಎದುರು ನೋಡುತ್ತ ಇಬ್ಬರು ಸ್ಟ್ಯಾಂಡಿನಲ್ಲಿ ಕಾದಿದ್ದರು.

"ಗೌಂಡರೇ ಬಂದಿರಾ ? ನಿಮಗಾಗಿ ನಾವು ತುಂಬಾ ಯೋಚನೆ ಮಾಡುತ್ತಿದ್ದೆವು."

"ನನಗಾಗಿ ಪರದಾಡಿದ್ದು ಇರಲಿ ಕಾಳಿಯಣ್ಣಾ, ಮೊಮ್ಮಗನಿಗೆ ಹೇಗಿದೆ?"

"ಭಯಪಡಬೇಕಿಲ್ಲ. ಇನ್ನು ಹುಡುಗ ಉಳಿದುಕೊಳ್ಳುತ್ತಾನೆ ಎಂದರು ಡಾಕ್ಟರು."

"ಅಪ್ಪಾಡ!" ಎಂದು ನಿಡಿದಾದ ಉಸಿರು ಬಿಟ್ಟ ಹಿರಿಯರು, "ಗುರುವಾಯೂರಪ್ಪಾ. ನನ್ನ ಮೊಮ್ಮಗನ ತೂಕಕ್ಕೆ ಹಣ್ಣು, ಕಲ್ಲುಸಕ್ಕರೆ ಹಾಕಿ ತುಲಾಭಾರ ಮಾಡಿಸ್ತೇನಪ್ಪಾ. ನನ್ನಪ್ಪಾ ನನ್ನ ಹೊಟ್ಟೆಗೆ ಹಾಲು ಸುರಿದೆ..." ಎಂದು ಹೇಳುತ್ತಲೇ, "ಸ್ವಾಮಿ, ನಾನು ಹೋಗಿಬರ್ತೀನಿ," ಎಂದು ನಮ್ಮಿಂದ ಬೀಳ್ಕೊಂಡರು. ಪಾದ್ರಿಗಳೂ ಮುಸ್ಲಿಮರೂ ಅಲ್ಲಿಯೇ ಇಳಿದುಬಿಟ್ಟರು. ನಾನೂ, ನನ್ನ ಪಕ್ಕದಲ್ಲಿದ್ದ ಯುವಕನೂ ಹೋಟೆಲ್ಲಿಗೆ ಹೋಗಿ! ತಿಂಡಿ ತಿಂದು ಬಂದು ಮತ್ತೆ ಬಸ್ಸಿನಲ್ಲಿ

ಕುಳಿತೆವು. ಯುವಕನ ಮುಖ ಈಗ ಸ್ವಲ್ಪ ಗೆಲುವಾಗಿತ್ತು. ಪೆಟ್ಟಿಗೆಯ ಬಗ್ಗೆ ಮೆಲ್ಲಗೆ ವಿಚಾರಿಸಿದನು. "ಯಾವುದೋ ಕಳ್ಳತನದ ಕೇಸು," ಎಂದು ಸಂಭಾಳಿಸಿಬಿಟ್ಟೆ. ಮರುದಿನ ಮದುವೆಯಾಗಹೊರಟಿರುವ ಹುಡುಗನಿಗೆ ಆ ಭಯಂಕರ ಪ್ರಸಂಗವನ್ನು ಹೇಳಲು ನನಗಿಷ್ಟವಾಗಲಿಲ್ಲ. ಈ ಮಧ್ಯೆ ಬ್ಯಾಟರಿಯ ರಿಪೇರಿಯೂ ಆಯಿತು. ಬಸ್ಸಿನ ಮೇಲ್ಭಾಗದಲ್ಲಿ ಎರಡು ಬಕೆಟ್ ನೀರು ಸುರಿದು ಶುದ್ಧ ಮಾಡತೊಡಗಿದಾಗ ಯುವಕನಿಗೆ 'ಪೆಟ್ಟಿಗೆ'ಯ ಬಗ್ಗೆ ಮತ್ತೆ ಸಂದೇಹ ತಲೆದೋರಿತು. ಆದರೂ ಅವನು ಏನೂ ಕೇಳಲಿಲ್ಲ.

ಕಡೆಗೆ ಪೊಳ್ಳಾಚಿಯನ್ನು ಬಿಟ್ಟು ಬಸ್ ಹೊರಟಾಗ ಘಂಟೆ ಒಂಭತ್ತೂವರೆ. ಬಸ್ಸಿನ ಹೆಡ್ ಲೈಟ್ ಈಗ ಪ್ರಕಾಶಮಾನವಾಗಿ ಉರಿಯುತ್ತಿತ್ತು.

"ಸಾರ್, ಇನ್ನು ಮುಂದೆ ಏನೂ ಭಯವಿಲ್ಲ. ಹನ್ನೊಂದು ಘಂಟೆಯೊಳಗೆ ನಿಮ್ಮನ್ನು ಪಳನಿಗೆ ತಲುಪಿಸಿಬಿಡುತ್ತೇವೆ," ಎಂದು ಕಂಡಕ್ಟರ್ ಯುವಕನಿಗೆ ಧೈರ್ಯ ಹೇಳಿದ.

ಬಸ್ ಅಸುರವೇಗದಲ್ಲಿ ಓಡತೊಡಗಿತು. ಉಡುಮಲ್ಪೇಟೆಯಲ್ಲಿ ಆ ಇಬ್ಬರು ಯುವಕರು ಇಳಿದರು. ಗೇಲಿ ಮಾಡುವಂತೆ ನೋಡಿ ನಗುತ್ತಿದ್ದ ಕಂಡಕ್ಟರನ ಕಡೆಗೆ ತಿರುಗಿಯೂ ನೋಡದೆ ಅವರು ಧಡಧಡನೆ ಇಳಿದು ಹೊರಟು ಹೋದರು. ಮತ್ತೆ ಬಸ್ ಹೊರಟಾಗ ಕಂಡಕ್ಟರ್ ಬಸ್ಸಿನೊಳಗೆಲ್ಲ ಒಮ್ಮೆ ದೃಷ್ಟಿ ಹಾಯಿಸಿದ. ಮುಂದಿನ ಸೀಟಿನಲ್ಲಿದ್ದ ವೇಲು ನಾಯರಿನ ಪತ್ನಿ ನಿದ್ರಿಸುತ್ತಿದ್ದಳು. ಆದರೆ ಅವಳೊಡನೆ ಬಂದ 'ಅಣ್ಣ' ಎಲ್ಲಿಯೂ ಕಾಣಲಿಲ್ಲ. ಅವನೂ ಪೊಳ್ಳಾಚಿಯಲ್ಲಿಯೇ ಇಳಿದುಬಿಟ್ಟಿರಬೇಕು. ಕಳ್ಳನ ಮನಸ್ಸು ಹುಳ್ಳಗೆ. ಪೋಲೀಸರನ್ನು ನೋಡಿ ಹೆದರಿರಬೇಕು. ಕಂಡಕ್ಟರ್ ಮೆಲ್ಲಗೆ ಆ ಹುಡುಗಿಯನ್ನು ಎಬ್ಬಿಸಿ ವಿಚಾರಿಸಿದ. ವಿಷಯ ತಿಳಿಯುತ್ತಲೇ ಅವಳು ಅಳಲಾರಂಭಿಸಿಳು.

"ಈಗ ಹೇಳು, ಅವನು ನಿನ್ನ ಅಣ್ಣನಾ?" ಅವಳು ಉತ್ತರಿಸದೆ ತಲೆ ತಗ್ಗಿಸಿದಳು.

"ನಿನ್ನ ಗಂಡನಿಗೆ ಹೇಳಿ ಬಂದಿರುವಿಯೇನು?"

"ಹೌದು," ಎಂದು ತಲೆಯಾಡಿಸಿದಳು.

"ಏನು ಹೇಳಿ ಬಂದೆ?"

"ನನ್ನ ನೆಂಟರೊಡನೆ ಪಳನಿಗೆ ಹೋಗುವುದಾಗಿ ಹೇಳಿದೆ."

"ನಿಜವಾಗಿ ಎಲ್ಲಿಗೆ ಹೋಗಬೇಕೆಂದು ನಿಮ್ಮ ಉದ್ದೇಶ?"

ಇದನ್ನು ಕೇಳುತ್ತಲೇ ಅವಳು ಮತ್ತೆ "ಹೋ" ಎಂದು ಅಳತೊಡಗಿದಳು. ನಂತರ, "ಅವನು ನನ್ನನ್ನು ಮದ್ರಾಸಿಗೆ ಕರೆದೊಯ್ದು ಸಿನಿಮಾಗೆ ಸೇರಿಸುವುದಾಗಿ ಆಸೆ ಹುಟ್ಟಿಸಿದ್ದಾಗಿಯೂ" ಅವನ ಮಾತಿಗೆ ಮರುಳಾಗಿ ತಾನು ಹೊರಟುಬಂದುದಾಗಿಯೂ ಅಳುವಿನ ನಡುವೆಯೇ ವಿವರಿಸಿದಳು.

"ಆಗಿದ್ದು ಆಗಿಹೋಯಿತು. ಇಲ್ಲಿ ಪಳನಿಗೆ




'ಕಳವು ಸುಲಿಗೆ, ಲಂಚ ಭ್ರಷ್ಟಾಚಾರ, ಅನ್ಯಾಯ ಈ ಹಳೇ ದೂರುಗಳನ್ನೇ ತಂದಿದ್ದೀರಲ್ಲಾ? ಏನಾದರೂ ಹೊಸ ರಚನಾತ್ಮಕ ದೂರುಗಳನ್ನು ಮಾತ್ರ

ಹೋಗುತ್ತಿರುವ ಕುಟುಂಬಗಳೊಡನೆ ಸೇರಿ ನೀನೂ ದೇವಸ್ಥಾನಕ್ಕೆ ಹೋಗಿ, ನಾಳೆ ಮಧ್ಯಾಹ್ನ ಹೊರಡುವ ಬಸ್ಸಿನಲ್ಲಿ ವಾಪಸ್ಸು ಬಂದುಬಿಡು. ನಾನು ಮೇಲು ನಾಯರಿಗೆ ಹೇಳು-ತ್ತೇನೆ."

"ಏನು ಹೇಳುತ್ತೀರಿ?"

"ಭಯಪಡಬೇಡ. ನೀನು ನೆಂಟರೊಡನೆ ಪಳನಿಯಲ್ಲಿದ್ದೀಯೆಂದು ಹೇಳುತ್ತೇನೆ. ಆದರೆ ಇನ್ನು ಮುಂದಾದರೂ ಇಂತಹ ಬುದ್ಧಿಗೇಡಿ ಕೆಲಸ ಮಾಡಬೇಡ," ಎಂದು ಹೇಳಿಬಿಟ್ಟು, "ಹೌದು, ಕೈಯಲ್ಲಿ ಹಣವೇನಾದರೂ ಇದೆ-ಯೇನು?" ಎಂದು ಕೇಳಿದ. ಇಲ್ಲ ಎಂಬಂತೆ ಆಕೆ ತಲೆಯಾಡಿಸಿದಳು. ತನ್ನ ಬಳಿ ಇದ್ದ ಎರಡು ಹತ್ತು ರೂಪಾಯಿ ನೋಟುಗಳನ್ನು ಅವಳಿಗೆ ಕೊಟ್ಟು, ಅವಳನ್ನು ಪಳನಿಗೆ ಹೊರಟಿದ್ದ ಮಲೆಯಾಳ ಕುಟುಂಬದೊಡನೆ ಸೇರಿಸಿದ. ವಿಷಯವನ್ನು ಅರ್ಧಂಬರ್ಧ ತಿಳಿದ ಅವರುಗಳೂ ಅವಳನ್ನು ತಮ್ಮೊಡನೆ ಸೇರಿಸಿಕೊಂಡರು.

ಬಸ್ ಓಡುತ್ತಲೇ ಇತ್ತು. ಅಂದಿನ ಘಟನೆ-ಗಳೆಲ್ಲ ನನ್ನ ಮನಃಪಟಲದ ಮೇಲೆ ಚಲನಚಿತ್ರ-ದಂತೆ ಓಡುತ್ತಿದ್ದುವು. ಜೀವನವಿಡೀ ತನ್ನೊ-ಡನೆ ಇರುವ ಪ್ರೀತಿಯ ಪತಿಯನ್ನು ಬಿಟ್ಟು ಅರ್ಧ ಹಾದಿಯಲ್ಲಿ ತನ್ನನ್ನು ಬಿಟ್ಟು ಓಡುವ ಒಬ್ಬನನ್ನು ನಂಬಿಬಂದ ಹುಡುಗಿ; ಮೊಮ್ಮ-ಗಳನ್ನಾಗಿ ದೇವರನ್ನು ವಂದಿಸಿ ಗುರುವಾಯೂ-ರಪ್ಪನಲ್ಲಿ ಪ್ರಾರ್ಥನೆ ಸಲ್ಲಿಸುತ್ತಾ ಬಂದ ಪೊಳ್ಳಾಚಿ ಹಿರಿಯರು, ಅವರಿಗೆ ಧೈರ್ಯ ನೀಡುತ್ತಲೇ ಬಂದ ನಂಬೂದಿರಿ, ಮುಸ್ಲಿಂ ಹಿರಿಯರು, ಪಾದ್ರಿಗಳು; ಕೊಯಿಮುತ್ತೂರಿನ ಮೀಸೆ ಆಸಾಮಿಯೊಡನೆ ಬಂದ ಯುವತಿಯರು; ಗಂಧದ ತುಂಡು–ಕಲ್ಲುಗಳ ಪೆಟ್ಟಿಗೆಯೊಡನೆ ಬಂದ ಅಪರಾಧಿ; ಪಳನಿಯಾಂಡವನ ಸನ್ನಿಧಿಗೆ ಹೊರಟ ಮಲೆಯಾಳ ಕುಟುಂಬ; ಗುರು-ವಾಯೂರಪ್ಪನ ಸನ್ನಿಧಿಯಲ್ಲಿ ವಿವಾಹ ಮಾಡಿ-ಕೊಂಡು, ಹಾಗೆಯೇ ಪಳನಿ ದೇವರ ದರ್ಶನಕ್ಕೆ ಹೊರಟ ಮದುಮಕ್ಕಳು ಇವರೆಲ್ಲರೂ ನನ್ನ ಹೃದಯವನ್ನು ತುಂಬಿದ್ದರು.

ದೂರದಲ್ಲಿ ಪಳನಿ ಬೆಟ್ಟದ ದೀಪಗಳು ಮಿಂಚಿದುವು. ಬಸ್ಸಿನಲ್ಲಿದ್ದವರೆಲ್ಲ ಪಳನಿ ಬೆಟ್ಟದತ್ತ ತಿರುಗಿ ಕೈ ಎತ್ತಿ ನಮಸ್ಕರಿಸಿದರು, ಕಂಡಕ್ಟರ್ ಒಬ್ಬನನ್ನು ಬಿಟ್ಟು. ನಾನು ಅವ-ನನ್ನು ನೋಡಿ, "ಪಳನಿಯಾಂಡವನ ದೇವ-ಸ್ಥಾನದ ದೀಪಗಳು ಕಾಣಿಸುತ್ತಿವೆ ನೋಡಿ-ದಿರಾ?" ಎಂದೆ.

ನನ್ನ ಅಭಿಪ್ರಾಯವನ್ನು ಅರ್ಥ ಮಾಡಿ-ಕೊಂಡವನಂತೆ ಅವನು, "ನೋಡದೇ ಏನು ಸಾರ್? ಆದರೆ ನಾನು ಪೂಜಿಸುವ ದೇವರು, ಇದೋ ಓಡುತ್ತಿದೆಯಲ್ಲ, ಈ ಬಸ್ಸು. ಇದರಲ್ಲಿ ಪಾಪಕ್ಕೆ ಎಡೆ ಇಲ್ಲ. ಒಂದು ರೀತಿಯ ಸತ್ಯಕ್ಕೆ ಕಟ್ಟುಬಿದ್ದು ಮಾತ್ರ ಓಡುತ್ತದೆ ಈ ವಾಹನ. ಆ ಅತಿಶಯದಲ್ಲಿಯೇ ನಾನು ದೇವರನ್ನು ಕಾಣುತ್ತೇನೆ," ಎಂದ. ಹಾಗೆ ಹೇಳುತ್ತಿದ್ದಾಗ ಅವನ ಮುಖದಲ್ಲಿ ಒಂದು ಅಸಾಧಾರಣ ತೇಜ-ಸ್ಸನ್ನು ಕಂಡೆ. ಅದೇ ಸಮಯದಲ್ಲಿ ಬೆಟ್ಟದ ಗೋಪುರದ ದೀಪಗಳು ಝಳೀರೆಂದು ಪ್ರಕಾಶ ಬೀರಿದುವು. ✡



ಅಪ್ಪ: "ಏನ್ರೀ, ನಿಮ್ಮ ಮಗಳು ನನ್ನ ಮಗನ್ನ ಮದುವೆ ಆಗೋಲ್ಲ ಅಂದ್ಲಂತೆ. ಅಲ್ರೀ, ರಾಜ ಇದ್ದ ಹಾಗೆ ಇದ್ದಾನಲ್ರೀ ನನ್ ಮಗಾ!"

ಅಪ್ಪ: "ಅಲ್ರೀ ಆಷ್ಟಾದಷ್ಟು ಸ್ವಾಮಿ! ಅವಳಿಗೆ ಮಂತ್ರಿ ಇದ್ದ ಹಾಗೆ ಇರಬೇಕಂತೆ ಕಣ್ರೀ; ಪಕ್ಷ ಮಂತ್ರಿಗಳ ಪರ್ಸನಲ್ ಅಸಿಸ್ಟೆಂಟ್ ಆದರೂ ಪರವಾಗಿಲ್ಲ ಅಂದ್ಲು!"

—ಬಿ. ಎಸ್. ನಾಗರತ್ನ





# ಕೋಲ್ಗೇಟ್ ಡೆಂಟಲ್ ಕ್ರೀಮ್‌ನಿಂದ ಉಸಿರಿನ ದುರ್ವಾಸನೆಯನ್ನು ನಿವಾರಿಸಿರಿ... ದಂತಕ್ಷಯವನ್ನು ಎದುರಿಸಿರಿ

ಪ್ರತಿ ಸಲ ಊಟವಾದ ಮೇಲೆ ಕೋಲ್ಗೇಟ್‌ನಿಂದ ಹಲ್ಲುಜ್ಜಿರಿ. ಅದು ಜಗತ್ತಿನಾದ್ಯಂತ ದಂತವೈದ್ಯರು ಶಿಫಾರಸು ಮಾಡುವ ರೀತಿಯಲ್ಲಿ ನಿಮ್ಮ ಹಲ್ಲುಗಳಿಗೆ ರಕ್ಷಣೆ ನೀಡುತ್ತದೆ.

ಹಲ್ಲುಗಳೆಡೆಯಲ್ಲಿ ಉಳಿಯುವ ಆಹಾರಕಣಗಳಲ್ಲಿ ರೋಗಾಣು-ಗಳು ಬೆಳೆಯುತ್ತವೆ ಇವು ಉಸಿರಿನ ದುರ್ವಾಸನೆಗೆ ಕಾರಣವಾಗುತ್ತವೆ—ಆಮೇಲೆ ಇವು ನೋಯುವ ದಂತಕ್ಷಯವನ್ನು ಉಂಟುಮಾಡುತ್ತವೆ.

ಆದುದರಿಂದ ಯಾವಾಗಲೂ ಆಹಾರವನ್ನು ಸೇವಿಸಿದ ನಂತರ ಕೂಡಲೇ ಕೋಲ್ಗೇಟ್ ರೀತಿಯಲ್ಲಿ ಹಲ್ಲುಜ್ಜಿರಿ. ನಿಮ್ಮ ಶ್ವಾಸವನ್ನು ಶುಚಿಗೊಳಿಸಲು, ಹಲ್ಲುಗಳನ್ನು ಬಿಳುಪಾಗಿಸಲು ಮತ್ತು ದಂತಕ್ಷಯವನ್ನು ಎದುರಿಸಲು ಅದು ಅತ್ಯಂತ ಪರಿಣಾಮಕಾರಿ ಎಂದು ಪ್ರಮಾಣಿತವಾಗಿದೆ.




ಕೋಲ್ಗೇಟ್‌ನ ವಿಶ್ವಸನೀಯ ಸೂತ್ರವು ಕೆಲಸ ಮಾಡುವ ರೀತಿ:



ಉಸಿರಿನ ದುರ್ವಾಸನೆಯನ್ನು ಮತ್ತು ದಂತಕ್ಷಯವನ್ನು ಉಂಟುಮಾಡುವ ರೋಗಾಣುಗಳು ನಿಮ್ಮ ಹಲ್ಲುಗಳೆಡೆಯಲ್ಲಿ ಸಿಕ್ಕಿಕೊಂಡ ಆಹಾರ ಕಣಗಳಲ್ಲಿ ಬೆಳೆಯುತ್ತವೆ.



ಕೋಲ್ಗೇಟ್‌ನ ಅಪೂರ್ವವಾದ ಕಾರ್ಯಶೀಲ ನೊರೆ ಹಲ್ಲುಗಳೆಡೆಯನ್ನು ಆಳವಾಗಿ ಪ್ರವೇಶಿಸುತ್ತದೆ ಮತ್ತು ಅಪಾಯಕರವಾದ ಆಹಾರಕಣಗಳನ್ನೂ, ರೋಗಾಣುಗಳನ್ನೂ ಹೋಗಲಾಡಿಸುತ್ತದೆ.



ಫಲಿತಾಂಶ: ಆಕರ್ಷಕವಾದ ಬಿಳುಪಾದ ಹಲ್ಲುಗಳು, ಆತ್ಮವಿಶ್ವಾಸವನ್ನುಂಟು ಮಾಡುವ ಶುಚಿಯಾದ ಉಸಿರು, ಮತ್ತು ದಂತಕ್ಷಯದ ವಿರುದ್ಧ ರಕ್ಷಣೆ.

ಅಧಿಕ ಶುಚಿಯಾದ, ದುರ್ವಾಸನೆ ರಹಿತವಾದ ಉಸಿರಿಗಾಗಿ ಮತ್ತು ಅಧಿಕ ಬಿಳುಪಾದ ಹಲ್ಲುಗಳಿಗಾಗಿ ಹೆಚ್ಚು ಜನರು ಜಗತ್ತಿನಲ್ಲಿ ಬೇರೆ ಯಾವುದೇ ಟೂಥ್‌ಪೇಸ್ಟ್‌ಗಿಂತ ಅಧಿಕವಾಗಿ ಕೋಲ್ಗೇಟನ್ನು ಕೊಳ್ಳುತ್ತಾರೆ.

## ದಂತವೈದ್ಯರು ಮಾತ್ರ ನಿಮಗೆ ಉತ್ತಮತರ ದಂತರಕ್ಷಣೆಯನ್ನು ನೀಡಬಲ್ಲರು

DC.G.62 KN



# ಪ್ರಜಾತಂತ್ರವನ್ನು ಮೆಟ್ಟಿನಿಂತವರಿವರು

**ಟಿ. ಎಂ. ಸುಬ್ಬರಾಯ**

ಪಶ್ಚಿಮ ಶಾಂತಸಾಗರದ ಸುಮಾರು ಏಳು ಸಾವಿರ ಸಣ್ಣ ಪುಟ್ಟ ದ್ವೀಪಗಳನ್ನೊಳಗೊಂಡಿದೆ ಫಿಲಿಪೀನ್ ದೇಶ. ಮಲಯಿ, ಚೀನಿ, ಐರೋಪ್ಯ ಮುಂತಾದ ವಿವಿಧ ಬುಡಕಟ್ಟುಗಳಿಗೆ ಸೇರಿದ ಸುಮಾರು ನಲವತ್ತೆರಡು ಲಕ್ಷ ಜನರು ಈ ದ್ವೀಪಸ್ತೋಮದಲ್ಲಿ ವಾಸಿಸುತ್ತಿದ್ದಾರೆ. ಉಷ್ಣವಲಯದ ಹರಿದ್ವರ್ಣ ಸಸ್ಯವರ್ಗ, ಖನಿಜಗಳ ಅಪಾರ ದಾಸ್ತಾನು ಫಿಲಿಪೀನ್ ದ್ವೀಪಸಮುದಾಯಕ್ಕೆ ನಿಸರ್ಗದ ಮುಕ್ತ ಕೊಡುಗೆಗಳು. ಇಲ್ಲಿನ ಸಮುದ್ರ ತೀರ ಹರುಕು ಮುರಕಾಗಿದ್ದದ್ದು ಮೀನುಗಾರರಿಗೊಂದು ಅನುಕೂಲ. ಪ್ರಪಂಚದ ವಿವಿಧೆಡೆಗಳಿಂದ ಬರುವ ಪ್ರವಾಸಿಗರ ಪಾಲಿಗೆ ಇಲ್ಲಿಯ ದ್ವೀಪಸಮೂಹ ನಿಜಕ್ಕೂ ಸ್ವರ್ಗಧಾಮ. ಇವೆಲ್ಲ ನೈಸರ್ಗಿಕ ಕಾರಣಗಳಿಂದಾಗಿ ಫಿಲಿಪೀನಿಗೆ ವಿಶೇಷ ಮಹತ್ವ. ದೊರಕುವ ಎಲ್ಲಾ ಸಂಪತ್ತುಗಳನ್ನೂ ಸಮರ್ಪಕವಾಗಿ ಬಳಸಿಕೊಂಡರೆ ಫಿಲಿಪೀನ್ ಇನ್ನೊಂದು ಜಪಾನ್ ಆಗಬಲ್ಲುದು.

ಸ್ಪೇನ್–ಅಮೇರಿಕಗಳ ಯುದ್ಧದ ನಂತರ ೧೮೯೮ ರಲ್ಲಿ ಎರಡು ಕೋಟಿ ಡಾಲರುಗಳಿಗೆ ಸ್ಪೇನ್ ದೇಶ ಫಿಲಿಪೀನನ್ನು ಅಮೇರಿಕಕ್ಕೆ ಮಾರುವುದರೊಂದಿಗೆ ಈ ದೇಶದ ಇತಿಹಾಸ ಆರಂಭವಾಗುತ್ತದೆ. ತರುವಾಯ ಇಲ್ಲಿನ ಜನತೆಗೆ ಸ್ವಾತಂತ್ರ್ಯದ ಹಂಬಲ ಮೂಡಿತು. ಅಮೇರಿಕನ್ನರಿಂದ ಸ್ವಾತಂತ್ರ್ಯ ಪಡೆಯಲು ಪದೇ ಪದೇ ಯತ್ನ ನಡೆಯಿತು. ಎರಡನೇ ಮಹಾಯುದ್ಧದ ಸಮಯದಲ್ಲಿ ಸ್ವಾತಂತ್ರ್ಯ ಆಂದೋಲನ ಬಿರುಸಿನಿಂದ ಸಾಗಿದರೂ ಯಶಸ್ಸು ದೊರೆಯಲಿಲ್ಲ. ೧೯೪೨ ರ ಅವಧಿಯಲ್ಲಿ ಜಪಾನೀಯರು ಈ ದ್ವೀಪವನ್ನು ಆಕ್ರಮಿಸಿ, ಅಮೇರಿಕದಿಂದ ಕಿತ್ತುಕೊಂಡರು. ೧೯೪೬ ರ ತನಕವೂ ಫಿಲಿಪೀನಿನ ಮೇಲೆ ಜಪಾನಿನ ಹತೋಟಿಯಿತ್ತು. ಎರಡನೇ ಮಹಾಯುದ್ಧದಲ್ಲಿ ಜಪಾನು ಸೋತಾಗ, ಫಿಲಿಪೀನಿಗೆ ಮುಕ್ತಿ ದೊರೆಯಿತು. ಅಮೇರಿಕ ಇಲ್ಲಿ ಹಸ್ತಕ್ಷೇಪ ಮಾಡುವ ಮೊದಲೆ ಫಿಲಿಪೀನ್ ತನ್ನ ಸ್ವಾತಂತ್ರ್ಯವನ್ನು ಘೋಷಿಸಿಕೊಂಡಿತು. ೧೯೪೬ರ ಜುಲೈ ನಾಲ್ಕರಂದು ಈ ದೇಶ ಸ್ವತಂತ್ರವಾದದ್ದು ಹೀಗೆ. ಅಮೇರಿಕದ

ಸಂವಿಧಾನ ಮಾದರಿಯನ್ನು ಫಿಲಿಪೀನ್ ಅಳವಡಿಸಿಕೊಂಡಿದೆ. ಅಮೆರಿಕದಲ್ಲಿನ ಅಧ್ಯಕ್ಷ ಉಪಾಧ್ಯಕ್ಷರುಗಳಂತೆ ಫಿಲಿಪೀನಿನ ಅಧ್ಯಕ್ಷ ಉಪಾಧ್ಯಕ್ಷರುಗಳೂ ಪ್ರಜೆಗಳಿಂದ ಚುನಾಯಿತರಾಗಿ ಬರುತ್ತಾರೆ. ಇವರ ಅಧಿಕಾರಾವಧಿ ನಾಲ್ಕು ವರುಷಗಳು. ಅಮೇರಿಕದಂತೆ ಈ ದೇಶದ ಶಾಸನಸಭೆ ಕೂಡ ಎರಡು ಸದನಗಳನ್ನು ಹೊಂದಿದೆ: ಇಪ್ಪತ್ತನಾಲ್ಕು ಜನ ಸದಸ್ಯರಿರುವ ಸೆನೇಟ್ ಹಾಗೂ ನೂರಾನಾಲ್ಕು ಸದಸ್ಯರನ್ನು ಹೊಂದಿದ ಪ್ರತಿನಿಧಿಗಳ ಸಭೆ.

ಫಿಲಿಪೀನಿನಲ್ಲಿ ನ್ಯಾಶನಲಿಸ್ಟ್ ಮತ್ತು ಲಿಬರಲ್ ಎಂಬ ಎರಡೇ ಪ್ರಮುಖ ಪಕ್ಷಗಳಿವೆ. ೧೯೫೩ ರಲ್ಲಿ ನ್ಯಾಶನಲಿಸ್ಟ್ ಪಕ್ಷದ ಧುರೀಣ ರಾಮೊನ್ ಮೆಗಾಸೆಸೆಯುವರು ಅಧ್ಯಕ್ಷರಾಗಿ ಆಯ್ಕೆಯಾದರು. ತಮ್ಮ ಆಡಳಿತಾವಧಿಯಲ್ಲಿ ಮೆಗಾಸೆಸೆಯುವರು ಆರ್ಥಿಕ ಹಾಗೂ ಸಾಮಾಜಿಕ ಭದ್ರತೆಗಳನ್ನು ಕುರಿತ ಕಾರ್ಯಕ್ರಮಗಳನ್ನು ರೂಪಿಸಿ ಜನಪ್ರಿಯರಾದರು. ಕಮ್ಯೂನಿಸ್ಟ್ ಪ್ರಭಾವವನ್ನು ಹತ್ತಿಕ್ಕಲು ಯತ್ನಿಸಿ ಅದರಲ್ಲೂ ಯಶಸ್ಸನ್ನು ಪಡೆದರು. ಆದರೆ ವಿರೋಧಪಕ್ಷ ಮಾತ್ರ ಮೆಗಾಸೆಸೆಯ ಕಾರ್ಯಕ್ರಮಗಳನ್ನು ಟೀಕಿಸುವುದನ್ನು ನಿಲ್ಲಿಸಲಿಲ್ಲ. ಮೆಗಾಸೆಸೆಯುವರು ಅಮೇರಿಕದ ಬಾಲಬಡುಕ ಎಂದು ಕರೆಯಲೂ ಅದು ಹಿಂಜರಿಯಲಿಲ್ಲ. ೧೯೫೭ರಲ್ಲಿ ವಿಮಾನಾಪಘಾತವೊಂದರಲ್ಲಿ ಮೆಗಾಸೆಸೆಯುವರು ತೀರಿಕೊಂಡಿದ್ದರಿಂದ ಕಾರ್ಲೋಸ್ ಪಿ. ಗಾರ್ಸಿಯಾ ತಾತ್ಕಾಲಿಕವಾಗಿ ಅಧ್ಯಕ್ಷ ಪದವಿಯನ್ನು ವಹಿಸಿಕೊಂಡರು. ಉಪಾಧ್ಯಕ್ಷರಾಗಿ ಅಧ್ಯಕ್ಷ ಗದ್ದುಗೆಗೇರಿದ್ದ ಗಾರ್ಸಿಯಾರವರು ಮುಂದಿನ ಅಧ್ಯಕ್ಷೀಯ ಚುನಾವಣೆಯಲ್ಲಿ ಲಿಬರಲ್ ಪಕ್ಷದ ಉಮೇದುವಾರ ಡಿಯೋಸ್ಡಾಡೋ ಮ್ಯಾಕ್‌ಪಾಗಲ್‌ರಿಂದ ಪರಾಜಿತರಾದರು.

ಸ್ವತಃ ಮ್ಯಾಕ್‌ಪಾಗಲ್ ಪ್ರಾಮಾಣಿಕರಾಗಿದ್ದರೂ ತಮ್ಮ ಪಕ್ಷದಲ್ಲೂ ಅಧಿಕಾರಿವರ್ಗದಲ್ಲೂ ವ್ಯಾಪಕವಾಗಿದ್ದ ಭ್ರಷ್ಟಾಚಾರವನ್ನು ಕಡಿವಾಣ ಹಾಕಲು ಅವರಿಂದಾಗಲಿಲ್ಲ. ಪರಿಣಾಮವಾಗಿ ೧೯೬೫ ರ ಚುನಾವಣೆಯಲ್ಲಿ ಪರಾಜಯವನ್ನನುಭವಿಸಬೇಕಾಯಿತು. ಮೊದಲು ಲಿಬರಲ್ ಪಕ್ಷದಲ್ಲಿದ್ದು ನಂತರ ನ್ಯಾಶನಲಿಸ್ಟ್‌ಗೆ ಪಕ್ಷಾಂತರ ಮಾಡಿದ್ದ ಮಾರ್ಕೋಸ್ ಅಧ್ಯಕ್ಷ ಗದ್ದುಗೆಯನ್ನೇರಿದರು. ನ್ಯಾಶನಲಿಸ್ಟ್ ಪಕ್ಷ ಅಧಿಕಾರಕ್ಕೆ ಬಂದಿದ್ದರೂ ಪ್ರತಿನಿಧಿಸಭೆಯಲ್ಲಿ ಅದು ಬಹುಮತ ಪಡೆದಿರಲಿಲ್ಲ. ನೂರಾನಾಲ್ಕರಲ್ಲಿ ವಿರೋಧಿಗಳು ನಲವತ್ತೆರಡು ಸ್ಥಾನ ಹೊಂದಿದ್ದುದು ಮಾರ್ಕೋಸ್‌ಗೆ ತಲೆನೋವಾಗಿ ಪರಿಣಮಿಸಿತು.

ಮಾರ್ಕೋಸ್ ಹೇಳಿಕೊಳ್ಳುವಂತಹ ಆಡಳಿತ ತಜ್ಞರೇನಲ್ಲ. ಹೀಗಾಗಿ ಜನರಿಗೆ ಒಳ್ಳೆಯ ಆಡಳಿತ ನೀಡಲು ಅವರಿಂದಾಗಲಿಲ್ಲ. ಗದ್ದುಗೆಯನ್ನೇರಿದ ಕೆಲವೇ ತಿಂಗಳಲ್ಲಿ ದ್ವೀಪದಾದ್ಯಂತ ಅಶಾಂತಿ ತಲೆದೋರಿ ಅದು ಶೈಕ್ಷಣಿಕ ಕೇಂದ್ರಗಳ ವರೆಗೂ ವ್ಯಾಪಿಸಿತು. ವಿದ್ಯಾರ್ಥಿಗಳ ಚಳವಳಿ ನಿತ್ಯ ಸುದ್ದಿಯಾಯಿತು. ಅಧಿಕಾರಿವರ್ಗದಲ್ಲಿ ಅದಕ್ಷತೆ, ಅಪ್ರಾಣಿಕತೆ, ಭ್ರಷ್ಟಾಚಾರಗಳು ಹೆಚ್ಚಿದವು. ದೇಶದ ಆರ್ಥಿಕ ಸ್ಥಿತಿ ತೀರಾ ಹದಗೆಟ್ಟು ಹೋಯಿತು, ಆಡಳಿತಯಂತ್ರ ಹಳಿ ತಪ್ಪಿತು.



ದೇಶದ ಪ್ರಗತಿ ಕುಂಠಿತಗೊಂಡಿತು. ಅಧ್ಯಕ್ಷ ಮಾರ್ಕೋಸ್ ತಮ್ಮ ವ್ಯಕ್ತಿತ್ವದ ಪ್ರಭಾವ ಬೀರಿ ಯಾವಾದರೂ ಗಲಭೆಯನ್ನು ನಿಲ್ಲಿಸಲು ಅಸಾಧ್ಯವೆನಿಸುವ ಮಟ್ಟಿಗೆ ಅರಾಜಕತೆ ದೇಶದಲ್ಲಿ ತಾಂಡವವಾಡತೊಡಗಿತು. ರಾಜೀನಾಮೆಯನ್ನು ಇತ್ತು ಬಿಡಾವಾಗುವ ಧೈರ್ಯವನ್ನೂ ಮಾರ್ಕೋಸ್ ತೋರಲಿಲ್ಲ; ಬದಲಿಗೆ ತಮ್ಮ ಅಧಿಕಾರವನ್ನು ರಕ್ಷಿಸಿಕೊಳ್ಳುವ ಏಕೋದ್ದೇಶ್ಯದಿಂದ ೧೯೭೨ ರ ಸಪ್ಟೆಂಬರ್‌ನಲ್ಲಿ ಮಾರ್ಷಲ್ ಲಾ ಜಾರಿಗೊಳಿಸಿದರು.

ಇಪ್ಪತ್ತೈದು ವರ್ಷಗಳಿಂದ ಪ್ರಜಾತಂತ್ರವನ್ನ ನುಭವಿಸುತ್ತಾ ಬಂದ ಫಿಲಿಪೀನ್ ಜನತೆಯ ಮೇಲೆ ಮಾರ್ಷಲ್ ಲಾ ವಿಚಿತ್ರ ಪರಿಣಾಮವನ್ನುಂಟು-ಮಾಡಿದ್ದು ನಿಜ. ಜನ ಪ್ರಜಾಭುತ್ವದ ಕೊಲೆ-ಗಡುಕನೆಂದು ಮಾರ್ಕೋಸ್‌ರನ್ನು ಕರೆದರು. ಆದರೆ ಯಾರೂ ಏನೂ ಮಾಡುವಂತಿರಲಿಲ್ಲ. ವೃತ್ತ-ಪತ್ರಿಕೆಗಳು, ರೇಡಿಯೋಗಳು, ತೀವ್ರ ಸೆನ್ಸಾರ್ ನಿಯಮಕ್ಕೊಳಪಡಿಸಿ ಮಾನವೀಯ ಮೂಲಭೂತ ಹಕ್ಕುಗಳನ್ನೆಲ್ಲ ಮೊಟಕುಗೊಳಿಸಲಾಯಿತು. ಶಾಸನಸಭೆಗಳನ್ನು ವಿಸರ್ಜಿಸಲಾಯಿತು. ಹಿಂಸಾ-ಚಾರವನ್ನು ತಡೆಯುವ ಪೂರ್ವಭಾವಿ ಕ್ರಮವಾಗಿ ದೇಶದಾದ್ಯಂತ ಲಭ್ಯವಿರುವ ಆಯುಧಗಳನ್ನೆಲ್ಲಾ ಸರಕಾರ ವಶಪಡಿಸಿಕೊಂಡಿತು. ವಿರೋಧಪಕ್ಷ-ಗಳನ್ನೆಲ್ಲಾ ನಿಷೇಧಿಸಲಾಯಿತು. ಯಾವ ಪತ್ರಿ-ಕೆಗಳು ಸರಕಾರವನ್ನು ಅರ್ಥಾತ್ ಅಧ್ಯಕ್ಷರನ್ನು ಅಧ್ಯಕ್ಷರ ಮಡದಿಯನ್ನು ಹೊಗಳಿ ಬರೆದವೋ ಅಂತಹ ಪತ್ರಿಕೆಗಳಿಗೆ ಮಾತ್ರ ಮಾನ್ಯತೆ ನೀಡಲಾಯಿತು. ಆಕಾಶವಾಣಿ ಕೇಂದ್ರಗಳೂ ಟಿ. ವಿ. ಕೇಂದ್ರಗಳೂ ಅಧ್ಯಕ್ಷರ ಸ್ತುತಿಪಠನ ಆರಂಭಿಸಿ-ದವು. ಪ್ರಜಾಪ್ರಭುತ್ವದ ಬೂದಿಯ ಮೇಲೆ ಶಿಸ್ತು ಹಾಗೂ ಪ್ರಗತಿಯ ಆಡಳಿತವನ್ನು ನೀಡಲು ಅಧ್ಯಕ್ಷ ಮಾರ್ಕೋಸ್ ಸಿದ್ಧರಾದರು.

ಮಾರ್ಷಲ್ ಲಾವನ್ನು ಜಾರಿಗೊಳಿಸಿದ ತಕ್ಷಣವೇ ಅಧ್ಯಕ್ಷ ಮಾರ್ಕೋಸ್‌ರವರು ತಮ್ಮ ಮಡದಿ ಇಮೆಲ್ಡಾರವರನ್ನು ಮನಿಲಾ ದ್ವೀಪದ ಗವರ್ನರರೆಂದು ನೇಮಕ ಮಾಡಿ, ಆಕೆಗೆ ಸಂಪೂರ್ಣ ಅಧಿಕಾರವನ್ನು ಕೊಡಮಾಡಿದರು.

ವಾದದ್ದು. ಎಲ್ಲಾ ರೀತಿಯ ಸಮಸ್ಯೆಗಳ ಪರಿಹಾರಕ್ಕೂ ಬುಲ್ಡೋಜರ್ ಬಳಸಬೇಕೆನ್ನುವ ಪ್ರವೃತ್ತಿಯವರು ಅವರು. ಗವರ್ನರ್ ಸ್ಥಾನವನ್ನು ವಹಿಸಲು ಯಾವ ರೀತಿಯಲ್ಲೂ ಆಕೆ ಅರ್ಹಳಲ್ಲ ಎಂಬುದು ವಿರೋಧಿ ನಾಯಕರ ಅಂಬೋಣ. ಮಾರ್ಕೋಸ್ ಕುಟುಂಬ ಮಾರ್ಷಲ್ ಲಾದ ಜೊತೆಗೆ ಜೂಜಾಟ ನಡೆಸಿದಂತಿದೆ. ಅದರ ಬಲದಿಂದ ಇವರ ಅಧಿಕಾರ. ಸರ್ವರೂ ಬಲ್ಲ ವಿಚಾರವಿದು. ಲಕ್ಷೋಪಲಕ್ಷ ಫಿಲಿಪೀನಿಗಳು ನೀಡುವ ತೆರಿಗೆ ಹಣವನ್ನು ಅಪವ್ಯಯ ಮಾಡುತ್ತಿದೆ ಈ ಕುಟುಂಬ ಎಂಬುದು ಜನಸಾಮಾನ್ಯರ ಹಾಗೂ ರಾಜಕೀಯ ವೀಕ್ಷಕರ ತಕರಾರು.

೧೯೭೬ರ ಮೇ ತಿಂಗಳಿನಲ್ಲಿ ಮನಿಲಾ ಚಂಡ-ಮಾರುತದ ಹಾವಳಿಯಿಂದ ತತ್ತರಿಸಿದಾಗ ಇಮೆಲ್ಡಾ ಆ ಬಗ್ಗೆ ತುಸುವಾದರೂ ಗಮನ



ಹರಿಸಲಿಲ್ಲ. ನಿರಾಶ್ರಿತರ ಕುರಿತು ಸಹಾಯ ಸಲ್ಲಿಸುವುದಂತಿರಲಿ, ಒಂದಾದರೂ ಅನುಕಂಪದ ಮಾತೂ ಅವಳಿಂದ ಬರಲಿಲ್ಲ. ಬದಲಿಗೆ ತಾನು ಫ್ರಾನ್ಸಿಗೂ ಅನಂತರ ರೋಮಿಗೂ ಹಾರಿ ಅಲ್ಲಿನ ಗಣ್ಯ ವ್ಯಕ್ತಿಗಳನ್ನು ಭೇಟಿಯಾಗುತ್ತಾ ಸಂತೋಷಕೂಟಗಳಲ್ಲಿ ಭಾಗವಹಿಸುತ್ತಾ ಕಾಲ ಕಳೆದಳು.

ಈಗ ಫಿಲಿಪೀನ್ ಜನತೆ ಭೀತಿಪಡುತ್ತಿರುವ ಅಂಶ ಇದು: 'ಮಾರ್ಕೋಸ್‌ರ ತರುವಾಯ ಇಮೆಲ್ಡಾ ಫಿಲಿಪೀನ್ಸಿನ ಅಧಿಕಾರಿಣಿಯಾಗಿ ಮುಂದುವರಿಯುತ್ತಾಳೆಯೇ?' ಆಡಳಿತ ಹಾಗೂ ಗಂಡನ ಮೇಲೆ ಆಕೆ ಹೊಂದಿರುವ ಬಿಗಿ ನಿಯಂತ್ರಣ ಈ ಭೀತಿಗೆ ಅವಕಾಶ ಮಾಡಿ ಕೊಟ್ಟಿದೆ.

ಅಧ್ಯಕ್ಷ ಮಾರ್ಕೋಸ್‌ರ ಸ್ಥಾನವೇನೋ ಒಂದು ರೀತಿಯಿಂದ ಹೂವಿನ ಹಾಸಿಗೆಯಾಗಿಲ್ಲವೆಂದೇ ಹೇಳಬೇಕು. ಬಹುಸಂಖ್ಯ ಮುಸಲ್ಮಾನರಿರುವ ದಕ್ಷಿಣದ ಮಿಂಡನಾವೋ ದ್ವೀಪದ ಜನ ಮಾರ್ಕೋಸ್ ಆಡಳಿತದ ವಿರುದ್ಧ ಬಂಡೆದ್ದಿದ್ದಾರೆ. ಅವರಿಗೆ ಮುಖ್ಯ ಪ್ರೇರಣೆ ದೊರೆಯುವುದು ಲಿಬಿಯದ ಕರ್ನಲ್ ಗಢಾಫಿಯಿಂದ. ಸದ್ಯಕ್ಕೇನೋ ಮಿಂಡನಾವೋ ದ್ವೀಪ ಶಾಂತವಾಗಿದೆ. ಜ್ವಾಲಾಮುಖಿ ಯಾವಾಗ ಭುಗಿಲ್ಲೆಂದು ಏಳುವುದೋ ಗೊತ್ತಿಲ್ಲ. ಇದು ಸಂಭವಿಸುವುದರೊಳಗೇ ಗಢಾಫಿಯೊಡನೆ ಸಂಧಾನಮಾಡಿಕೊಳ್ಳುವ ಸನ್ನಾಹದಲ್ಲಿದ್ದಾರವರು. ಮಿಂಡನಾವೋದ ಜನ ಈಗ ಸ್ವಾಯತ್ತಾಧಿಕಾರವನ್ನೇ ಬೇಡುತ್ತಿದ್ದು ಅದನ್ನು ಎಷ್ಟರ ಮಟ್ಟಿಗೆ ಕೊಡಬಯಸುವುದೆಂಬುದನ್ನು ಈ ಸಂಧಾನ ನಿರ್ಧರಿಸುತ್ತದೆ.

ಅಲ್ಲದೆ ಫಿಲಿಪೀನ್ಸಿನ ಜನಸಂಖ್ಯೆಯಲ್ಲಿ ರೋಮನ್ ಕ್ಯಾಥೋಲಿಕರದು ಒಂದು ಕೈ ಮೇಲು. ಅಧ್ಯಕ್ಷ ಮಾರ್ಕೋಸ್ ಹಾಗೂ ಅವರ ಪತ್ನಿ ಇಮೆಲ್ಡಾರ ಸರ್ವಾಧಿಕಾರೀ ಧೋರಣೆಯನ್ನು ಕ್ಯಾಥೋಲಿಕ್ ಚರ್ಚ್ ಇತ್ತೀಚೆ ಬಹಿರಂಗವಾಗಿಯೇ ಟೀಕಿಸತೊಡಗಿದೆ. ಇದನ್ನು ಮಾರ್ಕೋಸ್ ಅಲಕ್ಷಿಸುವಂತಿಲ್ಲ. ಅಲ್ಲದೆ ಇವರ [illegible] ಇವರ ಆಡಳಿತದಲ್ಲಿ

ನಡೆದ ಕೆಲವು ಪಾಶವಿಕ ಘಟನೆಗಳಿಂದಾಗಿ ಜಾಗತಿಕ ರಂಗದಲ್ಲಿ ಮುಖ ಉಳಿಸಿಕೊಳ್ಳುವುದೇ ಇವರಿಗೆ ಕಷ್ಟವಾಗಿದೆ.

ಆದ್ದರಿಂದಲೇ ಕಳೆದ ವರ್ಷ ಮಾರ್ಷಲ್ ಲಾ ತೆಗೆಯಬೇಕೋ ಬೇಡವೋ ಎಂಬುದನ್ನು ಸಾರ್ವತ್ರಿಕ ಮತಗಣನೆಯ ಮೂಲಕ ನಿರ್ಧರಿಸುವುದಾಗಿ ಮಾರ್ಕೋಸ್ ಅವರು ಸಾರಿ ನವೆಂಬರ್ ಒಂದರಂದು ಮತಗಣನೆಯನ್ನು ನಡೆಸಿದರು. ನಿಯಂತ್ರಿತ ರೇಡಿಯೋ, ಇದ್ದುದನ್ನು ಇದ್ದ ಹಾಗೆ ಬರೆಯಲು ಪತ್ರಿಕೆಗಳಿಗೆ ಸ್ವಾತಂತ್ರ್ಯ ವಿಲ್ಲದ ಪರಿಸರದಲ್ಲಿ ಮತಗಣನೆಯನ್ನು ನಡೆಸಲಾಯಿತು. ಮತಗಣನೆ ನಡೆದ ಕೆಲ ಕಾಲದಲ್ಲಿ ಅಧ್ಯಕ್ಷ ಮಾರ್ಕೋಸ್ ಅವರು ಮಾರ್ಷಲ್ ಲಾ ಜಾರಿಗೊಳಿಸಿದ್ದಕ್ಕೆ ಸೇಕಡಾ ತೊಂಭತ್ತರಷ್ಟು ಮತಗಳು ಬಿದ್ದಿವೆಯೆಂದು ಹೇಳಿ ಮಾರ್ಷಲ್ ಲಾವನ್ನು ಕಾಯಂಗೊಳಿಸಿದರು. ಮತಪತ್ರಿಕೆಯನ್ನು ಪರಿಶೀಲಿಸಿದಾಗ ಎಷ್ಟೋ ಮತಪತ್ರಿಕೆಗಳ ಮೇಲೆ 'ಮಾರ್ಷಲ್ ಲಾ ಅನ್ನು ತೆಗೆಯಬೇಕೋ ಬಿಡಬೇಕೋ ಎನ್ನುವುದು ನಿಮಗೇ ಬಿಟ್ಟದ್ದು' ಎಂಬರ್ಥದ ಮಾತನ್ನು ಬರೆಯಲಾಗಿತ್ತು ಎಂದು ಕೆಲ ಪಾಶ್ಚಾತ್ಯ ಪತ್ರಿಕೆಗಳು ವರದಿಮಾಡಿದವು. ಅಲ್ಲಿನ ಪರಿಸ್ಥಿತಿ ಎಷ್ಟು ಭಯಾನಕವಾಗಿದೆಯೆಂದರೆ ಸರಕಾರದ ವಿರುದ್ಧ ಮತದಾನಮಾಡುವ ಧೈರ್ಯ ಬಹುತೇಕ ಮತದಾರರಿಗೆ ಬರಲಿಲ್ಲ.

ಮಾರ್ಷಲ್ ಲಾ ಜಾರಿಗೊಳಿಸಿದ ನಂತರ ಸಿಕ್ಕಾಪಟ್ಟೆಯಾಗಿ ವಿರೋಧಿ ಪಕ್ಷದ ಸದಸ್ಯರನ್ನು ಬಂಧಿಸಿ ಸೆರೆಮನೆಯಲ್ಲಿ ನಾನಾ ತೆರನಾದ ಚಿತ್ರಹಿಂಸೆಯನ್ನು ಕೊಡಲಾಯಿತು. ಈ ಬಗ್ಗೆ ಅಮ್ನೆಸ್ಟಿ ಇಂಟರ್‌ನ್ಯಾಶನಲ್‌ನವರು ಜಗತ್ತಿನ ಲಕ್ಷ್ಯ ಸೆಳೆದಾಗ ಅಮೇರಿಕನ್ ಸರಕಾರದ ಸ್ಟೇಟ್ ಡಿಪಾರ್ಟ್‌ಮೆಂಟ್ ಈ ಬಗ್ಗೆ ಪರಿಶೀಲನೆ ನಡೆಸಿ ರಾಜಕೀಯ ಕೈದಿಗಳನ್ನು ಅಮಾನುಷವಾಗಿ ನಡೆಸಿಕೊಂಡಿದ್ದನ್ನು ಪುಷ್ಟೀಕರಿಸುವ ರಿಪೋರ್ಟನ್ನು , ಹೊರತಂದಾಗ ಮಾರ್ಕೋಸ್ ಸಿಡಿದೆದ್ದರು ಅಥವಾ ಹಾಗೆ ನಟಿಸಿದರು. ಫಿಲಿಪೀನ್ಸಿನಲ್ಲಿರುವ ಎಲ್ಲ ಅಮೇರಿಕನ್ ಮಿಲಿಟರಿ ಠಾಣ್ಯಗಳನ್ನು ತೆರವು ಮಾಡಿ

ಸುವುದಾಗಿ ಅಮೇರಿಕದ ಸರಕಾರಕ್ಕೆ ಹೆದರಿಕೆ ಹಾಕಿದರು. ಹಾಗೆ ಮಾಡುವುದು ಅಮೇರಿಕದ ಭದ್ರತೆಗೆ ಒಂದು ಕುತ್ತೆಂದು ಅಮೇರಿಕಕ್ಕೆ ಗೊತ್ತು. ಅಮೇರಿಕ ತನ್ನ ಠಾಣ್ಯಗಳನ್ನು ಅಲ್ಲಿ ಹಾಗೆಯೇ ಇಟ್ಟಿಲ್ಲ. ತನ್ನ ಠಾಣ್ಯಗಳನ್ನಿಟ್ಟಿದ್ದಕ್ಕೆ ಪ್ರತಿಯಾಗಿ ಫಿಲಿಪೀನಿಗೆ ಹಣದ ಹೊಳೆಯನ್ನು ಹರಿಸುತ್ತಿದೆ. ಠಾಣ್ಯವನ್ನು ತೆರವು ಮಾಡಿಸಿದರೆ ಹಣದ ಹೊಳೆ ಹರಿಯುವುದು ನಿಂತು ಹೋಗಿ ಫಿಲಿಪೀನ್ಸ್ ಆರ್ಥಿಕ ಮುಗ್ಗಟ್ಟನ್ನೇ ಎದುರಿಸಬೇಕಾಗುತ್ತದೆಂಬುದು . ಅಧ್ಯಕ್ಷ ಮಾರ್ಕೋಸ್‌ರಿಗೂ ಗೊತ್ತು. ಆದ್ದರಿಂದ ಇದೊಂದು ಬರೇ ರಾಜಕೀಯ ಸ್ಟಂಟ್ ಎಂದು ಅಂತಾರಾಷ್ಟ್ರೀಯ ತಜ್ಞರು ಹೇಳುತ್ತಾರೆ.

ಈ ಎಲ್ಲಾ ರಾಜಕೀಯ ನಾಟಕದ ಪರಿಣಾಮವಾಗಿ ಫಿಲಿಪೀನಿನ ಸೌಂದರ್ಯಕ್ಕೆ ಹೆಚ್ಚು ಕಳೆ ಬಂದಿದೆ. ದ್ವೀಪದ ಪ್ರಮುಖ ಪ್ರದೇಶಗಳಲ್ಲಿ ಎಲ್ಲಿಯೂ ಹೊಲಸು ಇಲ್ಲ. ಬಡವರನ್ನೂ ದೀನದಲಿತರನ್ನೂ ನೀವಿಂದು ಕಾಣಲಾರಿರಿ. ಅಂದರೆ ಬಡತನವನ್ನೇ ಇಲ್ಲಿ ನಿರ್ಮೂಲಗೊಳಿಸಲಾಗಿದೆ ಎಂದು ಮಾತ್ರ ತಿಳಿಯಬಾರದು. ಸೋವ್ಹಿಯತ್ ರಶಿಯದ ಉದಾಹರಣೆಯನ್ನನುಸರಿಸಿ ಅವರನ್ನು ದ್ವೀಪದ ಮೂಲೆಗಳಿಗೆ ಸ್ಥಳಾಂತರಿಸಲಾಗಿದೆ. ಅಲ್ಲಿ ಅವರು ಪಡುವ ಬವಣೆಯೋ ದೇವರಿಗೇ ಪ್ರೀತಿ ! ತಮ್ಮ ಕೆಲಸ ನಿರ್ವಹಿಸುವ ಸಲುವಾಗಿ ಅವರು ಮೈಲುಗಟ್ಟಲೆ ನಡೆಯಬೇಕು !

ಆರ್ಥಿಕ ಸಮತೋಲನ ಎಂದೋ ತಪ್ಪಿಹೋಗಿದೆ. ಹಣದುಬ್ಬರ ಈಗಲ್ಲೊಂದು ಪೆಡಂಭೂತ. ದೇಶಕ್ಕೆ ಆರ್ಥಿಕ ಅಭ್ಯುದಯವನ್ನು ತರುತ್ತದೆಂದು ಜಪಾನಿನೊಡನೆ ಮಾಡಿಕೊಂಡ ಒಪ್ಪಂದ ಸಾಕಷ್ಟು ಭ್ರಮನಿರಸನವನ್ನುಂಟುಮಾಡಿದೆ. ಈ ಒಪ್ಪಂದದ ಫಲವಾಗಿ ಅದು ಇಂದು ೨೪೦ ಕೋಟಿ ರೂಪಾಯಿಗಳ ಖೋತಾ ಅನುಭವಿಸುತ್ತಿದೆ. ಆ ದೇಶದ ಬಹು ಮುಖ್ಯ ಉದ್ದಿಮೆಯೆಂದರೆ ಸಕ್ಕರೆಯ ಉತ್ಪಾದನೆ. ಈಗ ಈ ಉದ್ದಿಮೆ ಎಷ್ಟು ಹದಗೆಟ್ಟು ಹೋಗಿದೆಯೆಂದರೆ ಮಾರ್ಕೋಸ್ ಅವರು ಪರದೇಶಗಳೊಡನೆಯ ಎಲ್ಲ ಸಕ್ಕರೆಯ ವ್ಯಾಪಾರವನ್ನೂ ನಿಲ್ಲಿಸಿದ್ದಾರೆ. ವಸ್ತುಗಳ ಧಾರಣೆ ಮುಗಿಲಿಗೇರಿದೆ. ಪ್ರಸ್ತುತ ಪರಿಸ್ಥಿತಿಯಿಂದ ಅತೃಪ್ತರಾದ ಕಾರ್ಮಿಕರು ಇತ್ತೀಚಿನ ತಿಂಗಳಲ್ಲಿ ಐವತ್ತಕ್ಕೂ ಹೆಚ್ಚು ಮುಷ್ಕರಗಳನ್ನು ನಡೆಸಿದ್ದಾರೆ.

ಭೂಸುಧಾರಣೆಯ ಬಗ್ಗೆ ಅಧ್ಯಕ್ಷರು ಗಮನ ಹರಿಸಿದರೂ ಅದು ಅವರಿಗೇ ಉರುಳಾದುದರಿಂದ ಅದನ್ನು ಕೈಬಿಟ್ಟರು. ಅಧ್ಯಕ್ಷರ ಜೊತೆ ಉತ್ತಮ ಬಾಂಧವ್ಯ ಹೊಂದಿರುವ ಭೂಮಾಲಿಕರು ತಿರುಗಿ ಬೀಳದಿರಲು ಭೂಸುಧಾರಣಾ ನಾಟಕವಾಡಿ ಸುಮ್ಮನಾಗುವುದು ಅನಿವಾರ್ಯವಾಯಿತು. ಉಳುವವನಿಗೇ ಹೊಲ ದೊರಕಿದರೂ ಆತ ಅದನ್ನು ನಿಭಾಯಿಸಲಾರ. ಕಾರಣ ರಾಸಾಯನಿಕ ಗೊಬ್ಬರವೂ ಸೇರಿದಂತೆ ವ್ಯವಸಾಯದ ಎಲ್ಲಾ ಪರಿಕರಗಳ ಬೆಲೆಯೂ ನಾಲ್ಕು ಪಟ್ಟು ಹೆಚ್ಚಾಗಿದೆ ! ಹದಿನೈದು ಸಾವಿರಕ್ಕೂ ಮಿಕ್ಕಿ ವಿರೋಧ ಪಕ್ಷಗಳಿಗೆ ಸೇರಿದ ಜನರನ್ನು ಬಂಧಿಸಲಾಗಿದೆ. ಇತ್ತೀಚೆ ಅವರಲ್ಲಿ ಕೆಲವರನ್ನು ಬಿಡುಗಡೆಗೊಳಿಸಲಾಗಿದ್ದರೂ ಅಧ್ಯಕ್ಷರ ತೀವ್ರ ವಿರೋಧಿಗಳಿನ್ನೂ ಒಳಗೇ ಇದ್ದಾರೆ. ನಿಯಮದ ಪ್ರಕಾರ ೧೯೭೩ ರಲ್ಲಿ ಅಧ್ಯಕ್ಷೀಯ ಚುನಾವಣೆ ನಡೆದಿದ್ದರೆ ಲಿಬರಲ್ ಪಕ್ಷದ ಉಮೇದುವಾರರಾಗುತ್ತಿದ್ದ ನಾಯಕರನ್ನು ಅಧ್ಯಕ್ಷರ ಕೊಲೆಗೆ ಸಂಚು ಹೂಡಿದ್ದ ಆಪಾದನೆಯ ಮೇಲೆ ಕಟ್ಟುನಿಟ್ಟಾದ ಕಾವಲಿನಲ್ಲಿ ಜೈಲಿನಲ್ಲಿಡಲಾಗಿದೆ. ೧೯೬೯ರ ಚುನಾವಣಾ ಸಮಯದಲ್ಲಿ ಮಾರ್ಕೋಸ್‌ರ ವಿರುದ್ಧ ಕೆಲಸ ಮಾಡಿದನೆಂಬ ಏಕಮಾತ್ರ ಕಾರಣದಿಂದ ಲಕ್ಷಾಧೀಶ ಸರ್ಜಿಯೋ ಒಸ್‌ಮೆನಾರವರನ್ನು ಬಂಧಿಸಿ ಅವರ ಸಂಪೂರ್ಣ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ಫಿಲಿಪೀನ್ ಈಗ ಉರಿಯುತ್ತಿರುವ ಅಗ್ನಿಕುಂಡ. ✡



# ಆಕ್ಟೋಪಸ್

ವಿಕ್ಟರ್ ಹ್ಯೂಗೋ

ದುರಾಂದೆ ನಾವೆ ಅಷ್ಟೇನೂ ಹೊಸದಾಗಿರಲಿಲ್ಲ. ಅದರ ಹಾಯಿಯು ಅಷ್ಟ ಪಟ್ಟಿ ಹತ್ತು ವಾರಗಳ ಹಿಂದೆ ಅಲ್ಲಿನ ಬಂಡೆಗಳಿಗೆ ಬಡಿದು ದುರಾಂದೆ ಅನಾಥವಾಗಿ ಕೆಳಗೆ ಬಿದ್ದಿತ್ತು. ಇಂಥ ಸ್ಥಿತಿಯಲ್ಲಿ ಗಿಲ್ಯಾತ್ ಏನು ತಾನೆ ಮಾಡಿಯಾನು? ಒಂದೊಮ್ಮೆ ಹೀಗಾದಾಗ ಏಳೆಂಟು ತಿಂಗಳ ವರೆಗೆ ಏಡಿಗಳನ್ನು ತಿಂದೇ ಬದುಕಿದ್ದ. ದುರ್ದೈವಕ್ಕೆ ಈ ಸಲ ಆತ ಇಲ್ಲಿ ಸಿಕ್ಕು ಬೀಳುವುದಕ್ಕಿಂತ ಸ್ವಲ್ಪ ದಿನ ಮೊದಲು ಜೋರಾಗಿ ಬಿರುಗಾಳಿ ಬೀಸಿ ಅವಾಂತರವನ್ನೆಬ್ಬಿಸಿದ್ದರಿಂದ ಏಡಿಗಳೆಲ್ಲ ಸುರಕ್ಷಿತ ಸ್ಥಳಗಳಿಗೆ ಸೇರಿ ಮತ್ತೆ ಹೊರಬರುವ ಸಾಹಸ ಮಾಡಿರಲಿಲ್ಲ. ಹೀಗಾಗಿ ಈ ಸಲ ಅವೂ ದೊರೆಯುವಹಾಗಿರಲಿಲ್ಲ.

ಇನ್ನೇನು ಮಾಡುವುದು? ಸಣ್ಣ ಸಣ್ಣ ಮೀನುಗಳನ್ನು ತಿಂದು ಹೊಟ್ಟೆ ತುಂಬಿಕೊಂಡರಾಯಿತೆಂದು ಲೆಕ್ಕಹಾಕುತ್ತಿರುವಂತೆಯೇ ದುರಾಂದೆಯ ಕಾಲ ಬಳಿ ಏನೋ ಸಪ್ಪಳವಾಯಿತು. ನೋಡಿದರೆ ಅವನ ಬರುವಿಕೆಯಿಂದ ಗಾಬರಿಗೊಂಡ ಏಡಿ ಸಮೀಪದಲ್ಲಿ ಇದ್ದ ಹೊಂಡಕ್ಕೆ ಓಡುತ್ತಿತ್ತು.

ಗಿಲ್ಯಾತ್ ಏಡಿಯ ಬೆನ್ನು ಹತ್ತಿದ. ಪ್ರಾಣಭಯದಿಂದ ಅದು ಸರಸರನೆ ಆ ಬಂಡೆಗಳ ಸಂದಲ್ಲಿ ಮರೆಯಾಯಿತು. ಕಲ್ಲಿನಡಿಯಲ್ಲೆಲ್ಲೋ ಅದು ಸೇರಿಕೊಂಡಿರಬೇಕು. ಅಲ್ಲಿ ಅದನ್ನು ಹಿಡಿಯುವುದು ಕಷ್ಟ. ಆದರೆ ಹೊಟ್ಟೆಯೊಂದು ಕೇಳಬೇಕಲ್ಲ? ಗಿಲ್ಯಾತ್ ಏಡಿ ಹೋದತ್ತ ಕಣ್ಣಾಡಿಸಿದಾಗ ಅಲ್ಲಿ ಒಂದು ಬಿರುಕು ಕಣ್ಣಿಗೆ ಬಿತ್ತು. ಸ್ವಲ್ಪ ಲಕ್ಷ್ಯಗೊಟ್ಟು ನೋಡಿದಾಗ ಅದು ಬಿರುಕಲ್ಲ, ಮನುಷ್ಯನೊಬ್ಬ ಸಲೀಸಾಗಿ ಒಳಗೆ ಹೋಗಬಹುದಾದಷ್ಟು ಅಗಲವಾದ ಒಂದು ದ್ವಾರ ಎಂಬುದು ಸ್ಪಷ್ಟವಾಯಿತು.

ಗಿಲ್ಯಾತ್ ಪ್ರಯಾಸದಿಂದ ಮೆಲ್ಲಮೆಲ್ಲನೆ ಅದರ ಬಳಿ ಸಾಗಿ ಹೋಗಿ ಕೆಳಗೆ ಇಣುಕಿನೋಡಿದ. ಪಾರದರ್ಶಕವಾದ ನೀರಿನಲ್ಲಿ ತಳ ಸ್ಪಷ್ಟವಾಗಿ ಕಾಣುತ್ತಿತ್ತು. ನೀರು ಆಳವಾಗಿರಲಿಲ್ಲ. ಕತ್ತಿಯನ್ನು ಹಲ್ಲಿನಿಂದ ಕಚ್ಚಿಹಿಡಿದು ತನ್ನ ಕೈಕಾಲುಗಳನ್ನು ಮೆಲ್ಲನೆ ಆ ಇಳಿಜಾರಿನಲ್ಲಿ ಜಾರಿಸಿ ಗಿಲ್ಯಾತ್ ದ್ವಾರದ ಬಳಿಯ ನೀರಿಗಿಳಿದ.

ನೀರು ಭುಜದ ವರೆಗೆ ಇತ್ತು. ಅಲ್ಲಿ ಸ್ವಲ್ಪ ಮುಂದೆ ಹೋದಮೇಲೆ ಕಮಾನಿನಂತಿರುವ ಕಲ್ಲಿನ ಮಾಡಿನ ಕೆಳಗೆ ಗಾಢ ಕತ್ತಲೆಯಲ್ಲಿದ್ದಂತೆ ಗಿಲ್ಯಾತನಿಗೆನಿಸಿತು. ಎಷ್ಟು ಹುಡುಕಿದರೂ ಏಡಿ ಸಿಕ್ಕಲೇ ಇಲ್ಲ.

ಅದು ಮತ್ತೆಲ್ಲಿಯಾದರೂ ಅವಿತುಕೊಂಡಿರಬಹುದೆ? ಒಂದು ಸುತ್ತಲೂ ಕಣ್ಣಾಗಲಿಸಿ ನೋಡಿದಾಗ ನೀರಿನ ಪಾತಳಿಯಿಂದ ಕೆಳಗೆ ಅವನ ಕೈಗೆಟಕುವ ವರೆಗೆ ಒಂದು ನೀಟಾದ ಬಿರುಕು ಕಾಣಿಸಿತು. ಬಹುಶಃ ಆ ಏಡಿ ಇಲ್ಲಿಯೇ ಅಡಗಿರಬೇಕು ಎಂದು ಅನುಮಾನಿಸುತ್ತ ಗಿಲ್ಯಾತ್ ಆ ಬಿರುಕಿನಲ್ಲಿ ಕೈಯಾಡಿಸಿದ.

ಹಠಾತ್ತಾಗಿ ಅವನ ಕೈಯನ್ನು ಜಗ್ಗಿದಂತಾಯಿತು. ಗಾಬರಿಯಿಂದ ಗಿಲ್ಯಾತನ ಮೈ ನಡುಗಿತು. ಬರಟಾಗಿಯೂ ಚಪ್ಪಟೆಯಾಗಿಯೂ ತೆಳ್ಳಗಾಗಿಯೂ ಇದ್ದ ವಿಚಿತ್ರವಾದ ಯಾವುದೋ ತಂಪಾದ ಜೀವಂತ ವಸ್ತುವೊಂದು ಅವನ ಬರಿದೋಳನ್ನು ಸುತ್ತಿತ್ತು. ನೀರಿನ ಆಳದಿಂದ ಅದು ಮೇಲೆ ಬರುತ್ತಿರುವಂತಿತ್ತು. ಅದರ ಸೆಳೆತ ಬಲವಾಗಿತ್ತು. ಸುತ್ತುಹಾಕುತ್ತಾ ಅದು ಅವನ ಭುಜಗಳ ವರೆಗೂ ಬಂದು ಒಂದು ಹರಿತವಾದ ತುದಿ ಕಂಕುಳದತ್ತ ಹರಿಯಿತು.

ಹೆಡಮುರಿಗೆ ಕಟ್ಟಿದಂತಾಗಿ ಆತ ಅಲುಗಾಡು-

ವುದೇ ಕಠಿಣವಾಯಿತು. ಆದರೂ ಪ್ರಯತ್ನಿಸಿ ನೋಡೋಣವೆಂದು ಗಿಲ್ಯಾತ್ ಮೈಯಲ್ಲಿದ್ದ ಶಕ್ತಿಯನ್ನೆಲ್ಲಾ ಉಪಯೋಗಿಸಿ ಒಮ್ಮೆ ಮೈ ಕೊಡವಿದಾಗ ಅವನನ್ನು ಹಿಡಿದಿದ್ದ ಜೀವಿ ಗಾಬರಿಗೊಂಡು ಅವನನ್ನು ಇನ್ನೂ ಬಲವಾಗಿ ಹಿಡಿಯಿತು. ಆ ಹಿಡಿತವೊ? ಅಬ್ಬ! ಬಾಲದಂತಿದ್ದ ಅದರ ಭಾಗ ಚರ್ಮದಂತೆ ಮಿದುವಾಗಿದ್ದರೂ ಉಕ್ಕಿನಂತೆ ಬಲವಾಗಿಯೂ ರಾತ್ರಿಯಂತೆ ತಣ್ಣಗಾಗಿಯೂ ಇತ್ತು.

ಅದರ ಎರಡನೇ ಭಾಗ ಹರಿತವೂ ಉದ್ದವೂ ಸದೃಢವೂ ಆಗಿದ್ದು ಆ ಬಿರುಕಿನಿಂದ ಹೊರಗೆ ಬಂದಂತೆ ಕಾಣುತ್ತಿತ್ತು. ಅದು ಭಯಾನಕ ದವಡೆಗಳಿಂದ ಹೊರಹಾಕಿದ ನಾಲಿಗೆಯಂತಿತ್ತು.

ಒಮ್ಮೆ ಅದು ಅವನ ಬರಿಮೈಯನ್ನು ನೆಕ್ಕಿತು. ಅನಂತರ ತೆಳ್ಳಗಾಗಿ ಉದ್ದವಾಗಿ ಅವನ ಚರ್ಮದ ಮೇಲೆ ಹರಿದು ಗಿಲ್ಯಾತನನ್ನು ಬಳಸಿಕೊಂಡಿತು. ಆಗ ಅವನಿಗೆ ಹಿಂದೆಂದೂ ಅನುಭವಿಸದಂತಹ ಅಪಾರ ವೇದನೆಯಾಗಿ ಸ್ನಾಯುಗಳೆಲ್ಲ ಬಿಗಿದುಕೊಂಡವು.

ಆ ಪ್ರಾಣಿಯ ಮೂರನೆಯ ಭಾಗವೊಂದು ಮೆಲ್ಲನೆ ಬಂಡೆಯ ಸಂದಿನಿಂದ ಹೊರಬಂದು ಗಿಲ್ಯಾತನ ದೇಹಕ್ಕೆ ಗಟ್ಟಿಯಾಗಿ ಸುತ್ತಿಕೊಂಡಿತು.

ತನ್ನ ದೇಹವನ್ನು ಸುತ್ತಿದ್ದ ಆ ವಿಲಕ್ಷಣ ಆಕಾರಗಳನ್ನಾತ ಮಸುಕು ಬೆಳಕಿನಲ್ಲಿ ಅಸ್ಪಷ್ಟವಾಗಿ ಕಾಣುತ್ತಿದ್ದ. ಗಿಲ್ಯಾತ್ ಕೂಗಿಕೊಳ್ಳಬೇಕೆಂದ. ವೇದನೆಯ ಆಧಿಕ್ಯದಲ್ಲಿ ಧ್ವನಿ ಹೊರಡಲಿಲ್ಲ.

ಅಷ್ಟರಲ್ಲಿ ನಾಲ್ಕನೆಯ ವಿಕೃತ ಭಾಗವೊಂದು ಬಾಣದಂತೆ ಬಂದೆರಗಿತು. ನೋಡನೋಡುತ್ತಿರುವಂತೆಯೇ ಅದು ಬಲವಾಗಿ ಅವನ ಹೊಟ್ಟೆಯನ್ನು ಸುತ್ತಿಕೊಂಡಿತು.

ಶರೀರಕ್ಕೆ ಅಂಟಿಕೊಂಡು ತಬ್ಬಿದ ಅನೇಕ ಅಂಗಗಳಿಂದ ಬಿಡಿಸಿಕೊಳ್ಳುವುದು ಕಠಿಣವಾಗಿತ್ತು. ಅವು ಕಚ್ಚಿಹಿಡಿದ ಸ್ಥಳಗಳೆಲ್ಲಾ ವೇದನೆಯ ಕೇಂದ್ರಗಳಾಗಿದ್ದವು. ಅಸಂಖ್ಯಾತ ಸಣ್ಣ ಬಾಯಿಗಳು ತನ್ನನ್ನು ನುಂಗಿಬಿಡುವಂತೆ ಭಾಸವಾಯಿತು ಗಿಲ್ಯಾತನಿಗೆ.

ಉದ್ದನೆಯ ಲಾಡಿಯಂತಹ ಇನ್ನೊಂದು



ಭಾಗ ಆ ಪ್ರಾಣಿಯಿಂದ ಹೊರಟು ಇತರ ಭಾಗಗಳೊಡನೆ ಹರಿಯುತ್ತ ಗಿಲ್ಯಾತನ ಎದೆಯನ್ನು ಬಲವಾಗಿ ಸುತ್ತುಹಾಕಿಕೊಂಡಿತು. ಗಿಲ್ಯಾತನಿಗೆ ಕತ್ತುಸಿರು ಬಿಡುವಂತಾಯಿತು. ಅದು ಎದೆಯನ್ನು ಬಲವತ್ತರವಾಗಿ ಸುತ್ತು-ಹಾಕಿಕೊಂಡಿದ್ದರಿಂದ ಹೃದಯ ಸಹಿತವಾಗಿ ಪಕ್ಕೆಯೆಲುಬುಗಳು ಮುರಿದುಹೋಗುತ್ತಿರುವಂತೆ ಅವನಿಗನಿಸುತ್ತಿತ್ತು. ಗಿಲ್ಯಾತನಿಗೆ ಏನು ಮಾಡಲೂ ತೋಚಲಿಲ್ಲ.

ಅಷ್ಟರಲ್ಲಿ ಆ ಬಿರುಕಿನೊಳಗಿನಿಂದ ದೊಡ್ಡ ಬಿಲ್ಲೆಯಾದ ಚಪ್ಪಟೆ ಮಾಂಸದ ಮುದ್ದೆಯೊಂದು ಹೊರಗೆ ತಲೆಯಿಕ್ಕಿತು. ಅದು ಆ ಪ್ರಾಣಿಯ ಮಧ್ಯಭಾಗ. ಚಕ್ರದ ಅರಗಳಂತೆ ಅಲ್ಲಿ ಐದು ತೀಕ್ಷ್ಣವಾದ ಅರಗಳಿದ್ದವು. ಈ ಎಡ ಬದಿಯ ಆಚೆಯ ತುದಿಯಲ್ಲಿ ಚಾಚಿದ ಇನ್ನೂ ಮೂರು ಭಾಗಗಳಿದ್ದು ಅವು ಬಂಡೆಯ ಕಡೆ ನೀಡಿದ್ದವು. ಅವುಗಳ ಬುಡದಲ್ಲಿ ಎರಡು ಕಣ್ಣುಗಳು ಹೊಳೆಯುತ್ತಿದ್ದುವು.

ಅದೊಂದು ಅಷ್ಟಪಾದಿ(ಆಕ್ಟೋಪಸ್) ಯೆಂದು ಗಿಲ್ಯಾತನಿಗೆ ಕ್ರಮೇಣವಾಗಿ ಹೊಳೆಯಿತು. ಅದರ ವಿಕಟರೂಪ ಅತ್ಯಂತ ಭಯಾನಕವಾದದ್ದು. ಅದನ್ನು ನೋಡದವರಿಗೆ ಅಷ್ಟಪಾದಿಯ ಅಸ್ತಿತ್ವದಲ್ಲಿ ನಂಬಿಕೆ ಬಾರದು.

ಅದಕ್ಕೆ ಸ್ನಾಯು ನಿರ್ಮಾಣಗಳಿಲ್ಲ, ಭಯವನ್ನು ಹುಟ್ಟಿಸುವ ಕೂಗಿಲ್ಲ, ಕೊಂಬಿಲ್ಲ, ಉಗುರುಗಳಿಲ್ಲ, ಹಿಡಿದುಕೊಳ್ಳಲು ಇಲ್ಲವೆ ಬೇಟೆಯ ಮೇಲೆ ಪ್ರಹಾರ ಮಾಡಲು ಬಾಲವಿಲ್ಲ, ತುಂಡರಿಸಲು ಖಡ್ಗದಂತಹ ಅಂಗವಿಲ್ಲ, ಕಂಟಕಯುಕ್ತ ರೆಕ್ಕೆಗಳಿಲ್ಲ, ವಿದ್ಯುತ್ ಆಘಾತ ನೀಡುವಂತಹ ಅಂಗವೈಶಿಷ್ಟ್ಯವಿಲ್ಲ, ವಿಷವಿಲ್ಲ, ಕೊಕ್ಕಿಲ್ಲ, ದವಡೆಯೂ ಇಲ್ಲ. ಇವಾವೂ ಇಲ್ಲದಿದ್ದರೂ ಅದು ಇತರ ಪ್ರಾಣಿಗಳಿಗಿಂತ ಭಯಂಕರವಾಗಿ ಶಸ್ತ್ರಸಜ್ಜಿತವಾಗಿತ್ತು.

ವಿಶಾಲ ಸಮುದ್ರದಲ್ಲಿ ಆಗಾಗ ಕಾಣಸಿಗುವ ಈ ಭಯಾನಕ ವಿಕಟರೂಪಿಯ ಬಣ್ಣ ಕಂದು. ಉದ್ದ ಸುಮಾರು ಐದಡಿಗಳಷ್ಟು. ದಪ್ಪ ಮನುಷ್ಯನ ತೋಳಿನಷ್ಟು. ಅದರ ಆಕಾರ ತುಸು ಅಂಕುಡೊಂಕಾಗಿದ್ದು ಮುಷ್ಟಿಯ ಕೊಡೆಯಂತೆ ಕಾಣುತ್ತದೆ. ಸಾಗರ ಮಧ್ಯದಲ್ಲಿ ನೀವು ಅದರ ಕಣ್ಣಿಗೆ ಬಿದ್ದಾಗ ಆಕಾರವಿಲ್ಲದಾದ ಒಂದು ಮಾಂಸದ ಮುದ್ದೆ ಸಿಕ್ಕುತ್ತದೆ. ಅದರ ಎಂಟು ಭಾಗಗಳು ಅದರ ಒಂದು ಕಡೆಯ ಬದಿಯಿಂದ ಹೊರಚಾಚುತ್ತವೆ. ನೋಡಲು ಅವು ಬಹು ಜಾಜ್ವಲ್ಯಮಾನವಾಗಿವೆ. ಅವುಗಳ ತುದಿಗಳು ಹಿಸುಕುತ್ತ ನಮ್ಮನ್ನು ನಿರ್ಜೀವವನ್ನಾಗಿಯೇ ಮಾಡುತ್ತವೆ.

ಈ ಎಂಟು ಭಾಗಗಳ ಕೆಳಗೆ ಎರಡು ಶ್ರೇಣಿಗಳಾಗಿ ಹೀರುವ ಕೊಂಡಿಗಳಿರುತ್ತವೆ. ಅವುಗಳಲ್ಲಿ ದೊಡ್ಡವು ತಲೆಯ ಬಳಿಯಲ್ಲಿಯೂ ಚಿಕ್ಕವು ಆಚೀಚೆಯ ಕೊನೆಗಳಲ್ಲೂ ಇರುತ್ತವೆ. ಪ್ರತಿ ಶ್ರೇಣಿಯಲ್ಲೂ ಅಂತಹ ಇಪ್ಪತ್ತೈದು ಕೊಂಡಿಗಳಿರುತ್ತವೆ. ಒಂದು ಭಾಗದಲ್ಲಿ ಎರಡು ಶ್ರೇಣಿಗಳಿರುತ್ತವೆಯಾದ್ದರಿಂದ ಅಲ್ಲಿ ಒಟ್ಟು ಐವತ್ತು ಕೊಂಡಿಗಳಿರುತ್ತವೆ. ಈ ಪ್ರಾಣಿಗೆ ಒಟ್ಟು ಇಂತಹ ಎಂಟು ಭಾಗಗಳಿರುತ್ತವೆ, ಅರ್ಥಾತ್ ಸಾಗರದ ಈ ಮಹಾದೈತ್ಯ ನಾಲ್ಕುನೂರು ಕೊಂಡಿಗಳಿಂದ ಸನ್ನದ್ಧವಾಗಿರುತ್ತದೆ. ಈ ಕೊಂಡಿಗಳು ಮಾಂಸ ಖಂಡಗಳನ್ನು ಭೇದಿಸಿ ಒಂದು ಅಂಗುಲದ ವರೆಗೆ ಕೂಡಿಕೊಂಡು ಹೋಗಬಲ್ಲವು.

ಈ ಕೊಂಡಿಗಳೇ ಅದರ ಆಕ್ರಮಣದ ಪ್ರಮುಖ ಆಯುಧಗಳು. ಈ ಪ್ರಾಣಿ ತನ್ನ ಬಾಹುಬಂಧನದಲ್ಲಿ ಬಿಗಿದುಕೊಂಡ ವ್ಯಕ್ತಿಯನ್ನು ಕಚ್ಚುವುದೂ ಇಲ್ಲ, ಪರಚುವುದೂ ಇಲ್ಲ. ಆದರೆ ಅದರ ಹಿಡಿತಕ್ಕೆ ಸಿಕ್ಕಿದ ವ್ಯಕ್ತಿಗಾಗುವ ವೇದನೆಯನ್ನು ಹೇಳಲಾಸಲ್ಲ. ಅದು ಮಾಂಸವನ್ನು ಹರಿಯುವುದೇ ಭಯಂಕರ.

ಇಂಥ ಕ್ರೂರ ಪ್ರಾಣಿಯ ಹಿಡಿತಕ್ಕೆ ಸಿಲುಕಿದ್ದ ಗಿಲ್ಯಾತ್. ತನ್ನ ಮೂರು ಹೊರಚಾಚಿದ ಭಾಗಗಳಿಂದ ಬಂಡೆಯನ್ನೂ ಉಳಿದ ಐದು ಭಾಗಗಳಿಂದ ಈ ಅಸಹಾಯ ವ್ಯಕ್ತಿಯನ್ನೂ ಹಿಡಿದ ಆ ಅಷ್ಟಪಾದಿ ಗಿಲ್ಯಾತನನ್ನು ಬಂಡೆಗೆ ಕಟ್ಟಿ ಹಾಕಿದಂತಿತ್ತು. ಇನ್ನೂರೈವತ್ತು ಕೊಂಡಿಗಳು ಆತನನ್ನು ರುದ್ರವೇದನೆಯಿಂದ ನರಳಿಸುತ್ತಿದ್ದವು.

ಅದರ ಹಿಡಿತದ ಹಾರಾಗುವುದು ಎಂಥ

ಭೀಮಕಾಯದ ವ್ಯಕ್ತಿಗೂ ಅಸಾಧ್ಯ. ಹಾಗೇನಾದರೂ ಪಾರಾಗಲು ಪ್ರಯತ್ನಿಸಿದರೆ ಸಾಗರದ ಆ ಮಹಾ ದೈತ್ಯ ತನ್ನ ಹಿಡಿತವನ್ನು ಇನ್ನೂ ಬಲಗೊಳಿಸುತ್ತದೆ. ಗಿಲ್ಯಾತನಿಗೆ ಈಗ ಇದ್ದ ಒಂದೇ ಸಾಧನವೆಂದರೆ ಅವನ ವಶದಲ್ಲಿದ್ದ ಬಿಚ್ಚುಗತ್ತಿ.

ಅದರ ಎಂಟು ಭಾಗಗಳೂ ಗಟ್ಟಿ ತೊಗಲಿನ ರಚನೆಗಳಾಗಿದ್ದು ಅವುಗಳ ಮೇಲೆ ಕತ್ತಿಯಿಂದ ಪೆಟ್ಟು ಕೊಟ್ಟರೂ ಪ್ರಯೋಜನವಾಗುವಂತಿರಲಿಲ್ಲ. ಹೀಗಾಗಿ ಅದರ ಐದು ಭಾಗಗಳ ಪೈಕಿ ಒಂದನ್ನಾದರೂ ತುಂಡು ಮಾಡುವುದು ಅಸಾಧ್ಯವೆಂಬುದು ಗಿಲ್ಯಾತನಿಗೆ ಗೊತ್ತು.

ಈ ಪ್ರಾಣಿ ಭೀಕರವಾದದ್ದೇನೋ ನಿಜ. ಆದರೆ ಅದನ್ನು ಎದುರಿಸುವ ಮಾರ್ಗವೂ ಉಂಟು. ಇಂತಹ ಪ್ರಸಂಗ ಎದುರಾದಾಗಲೆಲ್ಲ ಇನ್ನೊಂದು ಸಮುದ್ರಜೀವಿಯಾದ ಕಡಲಹಂದಿ ಅಷ್ಟಪಾದಿಯ ಮರ್ಮಸ್ಥಾನವನ್ನು ಕಡಿದು ಹಾಕಿ ಅಪಾಯದಿಂದ ಪಾರಾಗುತ್ತದೆ. ಗಿಲ್ಯಾತನಿಗೂ ಇದು ಗೊತ್ತಿಲ್ಲದಿಲ್ಲ.

ದೈತ್ಯಾಕಾರದ ಇಂತಹ ಅಷ್ಟಪಾದಿಯನ್ನು ಇದುವರೆಗೂ ಆತ ಕಂಡಿರಲಿಲ್ಲ. ಆತ ಧೈರ್ಯಶಾಲಿಯೇ ಸರಿ. ಮತ್ತಾರಾದರೂ ಆಗಿದ್ದರೆ ಅದನ್ನು ನೋಡಿಯೆ ಪ್ರಾಣ ಕಳೆದುಕೊಳ್ಳುತ್ತಿದ್ದರು.

ಕ್ರುದ್ಧ ಗೂಳಿಯೊಡನೆ ಹೇಗೋ ಹಾಗೆ ಅಷ್ಟಪಾದಿಯೊಡನೆ ಹೋರಾಡುವಾಗಲೂ ಅದನ್ನು ಸೋಲಿಸುವ ಉಪಾಯವೊಂದಿದೆ. ಗೂಳಿಯೊಡನಾದರೆ ಸಮಯ ಸಾಧಿಸಿ ಅದರ ಕತ್ತನ್ನು ಬಾಗಿಸಿ ಗೂಳಿಯನ್ನು ತಹಬಂದಿಗೆ ತರಬೇಕು. ಅಷ್ಟಪಾದಿಯ ವಿಷಯ ಹಾಗಲ್ಲ. ಅದು ತಲೆಯನ್ನು ಮುಂದೆ ಮಾಡುವ ಸಮಯವನ್ನು ಕಾಯ್ದು ಬಿಚ್ಚುಗತ್ತಿಯಿಂದ ಸರಿಯಾಗಿ ಪೆಟ್ಟು ಹಾಕಬೇಕು. ಆ ಮಾರ್ಮಿಕ ಕ್ಷಣವನ್ನು ಕಳೆದುಕೊಂಡವನಿಗೆ ವಿನಾಶವೇ ಗತಿ.

ಗಿಲ್ಯಾತ್ ಆ ವಿಕಟರೂಪಿಯನ್ನೊಮ್ಮೆ ದಿಟ್ಟಿಸಿ ನೋಡಿದ. ಅದೂ ಇವನತ್ತ ದುರುಗುಟ್ಟಿ ನೋಡುವಂತೆ ತೋರಿತು.

ಫಕ್ಕನೆ ಅದು ತನ್ನ ಆರನೆಯ ಚಾಚಿದ ಭಾಗವನ್ನು ಬಂಡೆಯಿಂದ ಹೊರಡಿಸಿ ಗಿಲ್ಯಾತನೆಡೆಗೆ ಬೀಸಿ ಅವನ ತೋಳನ್ನು ಬಲವಾಗಿ ಹಿಡಿಯಿತು. ಮರುಕ್ಷಣದಲ್ಲೆ ಮಿಂಚಿನಂತೆ ಅವನ ಮೇಲೆರಗಿ ತನ್ನ ಬಾಯಿಂದ ಅವನ ಎದೆಯನ್ನು ಹಿಡಿಯಲು ಪ್ರಯತ್ನಿಸಿತು. ಗಿಲ್ಯಾತನಿಗೆ ಅಷ್ಟು ಶಕ್ತಿ ಹೇಗೆ ಬಂತೋ ದೇವರೇ ಬಲ್ಲ. ಆತ ಸರಕ್ಕನೆ ಅದರ ಆರನೆಯ ಭಾಗದಿಂದ ಕೊಸರಿಕೊಂಡು ಕತ್ತಿಯಿಂದ ಅದರ ತಲೆಗೆ ಬಲವಾಗಿ ತಿವಿದ. ಹಠಾತ್ತಾಗಿ ಎರಡು ವಿರುದ್ಧ ಚಲನೆಗಳು ಜರುಗಿದವು–ಅಷ್ಟಪಾದಿ ಅತ್ತ, ಗಿಲ್ಯಾತ್ ಇತ್ತ. ಕ್ಷಣಾರ್ಧದಲ್ಲಿ ಗಿಲ್ಯಾತನ ಕತ್ತಿ ಅಷ್ಟಪಾದಿಯ ಎರಡು ಕಣ್ಣುಗಳನ್ನು ಸುತ್ತುವರಿದು ಒಂದು ವರ್ತುಳಾಕಾರದ ಗಾಯ ಮಾಡಿಬಿಟ್ಟಿತ್ತು.

ಹೋರಾಟ ಹಾಗೆ ಕೊನೆಗಂಡಿತು. ಬಲೂನು ಗಾಳಿಯನ್ನು ಕಳೆದುಕೊಂಡಂತಾಗಿತ್ತು, ಆ ಅಷ್ಟಪಾದಿಯ ಸ್ಥಿತಿ. ಹಿಡಿತ ಕ್ರಮೇಣವಾಗಿ ಸಡಿಲಾಯಿತು. ನಾಲ್ಕುನೂರು ಹೀರುವ ಕೊಂಡಿಗಳೂ ಬಲಗುಂದಿದವು. ಚಾಚಿದ ಎಂಟು ಭಾಗಗಳೂ ತಮ್ಮೆಲ್ಲ ಹಿಡಿತವನ್ನು ಕಳೆದುಕೊಂಡು ಮಾಂಸದ ಮುದ್ದೆ ನೀರಿನ ತಳಕ್ಕಿಳಿಯಿತು.

ಹೋರಾಟದಿಂದ ಬಸವಳಿದಂತಾದ ಗಿಲ್ಯಾತ್ ಕೆಳಗೆ ನೋಡಿದರೆ ಏನಿದೆ? ಎರಡು ಆಕಾರಹೀನವಾದ ಮಾಂಸದ ಮುದ್ದೆಗಳು–ಒಂದು ತಲೆ, ಇನ್ನೊಂದು ದಡ. ಗಿಲ್ಯಾತನ ಎದೆ ಇನ್ನೂ ಬಡಿದುಕೊಳ್ಳುತ್ತಿತ್ತು. ಅಕಸ್ಮಾತ್ತಾಗಿ ಇನ್ನೊಮ್ಮೆ ಎಲ್ಲಾದರೂ ಮತ್ತೆ ಮೃತ್ಯುವೇದನೆಗೆ ಬಲಿಯಾಗುವೆನೋ ಎಂದಾತ ಟಣ್ಣನೆ ಮೇಲೆ ಜಿಗಿದ. ಆದರೆ ಆ ವೇಳೆಗಾಗಲೆ ಆ ರಾಕ್ಷಸಪ್ರಾಣಿ ಸತ್ತುಹೋಗಿತ್ತು. ✡



# ಹಂಪೆಯ ತರುಣ ತಪಸ್ವಿ

ದ. ಲ ಕೆರೂರ

ಎಂದೂ ಮರೆಯಲಾಗದ ಸಾಮ್ರಾಜ್ಯವನ್ನು ಹುಕ್ಕ–ಬುಕ್ಕರ ಸಹಕಾರದಿಂದ ವಿಜಯನಗರದಲ್ಲಿ ಸ್ಥಾಪಿಸಿ 'ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯ' ಎಂದು ವಿಖ್ಯಾತರಾದ ಶ್ರೀ ವಿದ್ಯಾರಣ್ಯರು ಶೃಂಗೇರಿಯ ಜಗದ್ಗುರು ಶ್ರೀ ಶಂಕರಾಚಾರ್ಯಮಠದ ಪೀಠಾಧಿಪತಿ. ಅವರು ಹಂಪಿಯಲ್ಲಿ ಕನ್ನಡ ಸಿಂಹಾಸನ ಸ್ಥಾಪಿಸಿದ ನಂತರ ಹುಕ್ಕ–ಬುಕ್ಕರ ರಾಜಗುರುವಾಗಿ, ಅಮಾತ್ಯರಾಗಿ ಅಲ್ಲಿಯೇ ಉಳಿದರು. ಉತ್ತರ ಭಾರತದಿಂದ ಬಂದು ದಕ್ಷಿಣದಲ್ಲೆಲ್ಲ ಹಾವಳಿ ನಡೆಸಿದ್ದ ಮಹಮ್ಮದೀಯರ ವಿರುದ್ಧ ಪ್ರಬಲ ರಾಜ್ಯವನ್ನು, ಭದ್ರ ಬುನಾದಿ ಹಾಕಿ, ಕಟ್ಟಲೇಬೇಕಿರುವ ಅವಶ್ಯಕತೆಯನ್ನು ಮನಗಂಡಿದ್ದ ವಿದ್ಯಾರಣ್ಯರು ಹಂಪಿಯಲ್ಲೇ ನೆಲೆ ನಿಲ್ಲಲು ನಿಶ್ಚಯಿಸಿದರು. ಅದಕ್ಕಾಗಿ ಶೃಂಗೇರಿ ಪೀಠವನ್ನು ತ್ಯಾಗಮಾಡಿ ಅಲ್ಲಿಯೇ ಪ್ರತ್ಯೇಕ ಪೀಠವಾಗಿ ಶ್ರೀ ಜಗದ್ಗುರು ಶಂಕರಾಚಾರ್ಯ ಶ್ರೀ ವಿರುಪಾಕ್ಷ ವಿದ್ಯಾರಣ್ಯ ಸಂಸ್ಥಾನ (ಮಠ)ವನ್ನು ಸ್ಥಾಪಿಸಿದರು. ವಿಜಯನಗರದ ಎಲ್ಲ ಅರಸರೂ ಈ ಪೀಠವನ್ನು ತಮ್ಮ ರಾಜಗುರುಪೀಠವೆಂದು ಮನ್ನಿಸುತ್ತ ಬಂದರು. ಮುಂದೆ ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಒಮ್ಮೊಮ್ಮೆ ಒಂದೊಂದು ಮತದ ಪ್ರಾಬಲ್ಯ ಉಂಟಾದಾಗಲೂ ಈ ಮಠ ತನ್ನ ಮಹತ್ವವನ್ನು ಉಳಿಸಿಕೊಂಡೇ ಬಂದಿದೆ. ನೂರೊಂದು ವಿರಕ್ತರ ಹಾಗೂ ನಾಯಕರಿಂದ ಪ್ರಭಾವ ವಿಜಯನಗರದಲ್ಲಿ ಹೆಚ್ಚಿದಾಗ ಕೂಡ ಈ ಮಠವೂ ಈ ಪೀಠವನ್ನಲಂಕರಿಸಿದ ಗುರುಗಳೂ ಧರ್ಮಜಾಗೃತಿ

---

ಹಂಪಿಯ ಶ್ರೀ ವಿರುಪಾಕ್ಷ ವಿದ್ಯಾರಣ್ಯ ಪೀಠಕ್ಕೆ ಕಳೆದ ವರ್ಷವಷ್ಟೇ ಬಂದ ಶ್ರೀಮದಭಿನವೋದ್ದಂಡ ನರಸಿಂಹ ಭಾರತೀಸ್ವಾಮಿಗಳನ್ನು ವಿಶೇಷವಾಗಿ ಸಂದರ್ಶಿಸಿ 'ಕಸ್ತೂರಿ'ಯ ಹಿಂದಿನ ಸಂಪಾದಕ ಶ್ರೀ. ದ. ಲ. ಕೆರೂರವರು ಅವರ ಪರಿಚಯ ಮಾಡಿಕೊಟ್ಟಿದ್ದಾರೆ.

---

ಕಾರ್ಯವನ್ನು ಎಲೆ ಮರೆಯ ಕಾಯಂತಿದ್ದು ಮುಂದಿರಿಸಿಕೊಂಡೇ ಬಂದರು. ಇಂದಿಗೂ ಊರ್ಜಿತವಲ್ಲಿರುವ ಈ ಪೀಠಕ್ಕೆ ಆನೆಗುಂದಿಯ ನಾಯಕರು ಈಗಲೂ ರಾಜಮರ್ಯಾದೆಯನ್ನು ಸಲ್ಲಿಸುತ್ತಿದ್ದಾರೆ.

ಆರು ಶತಮಾನಗಳಿಂದ ನಡೆದುಕೊಂಡು ಬಂದಿರುವ ಈ ಪೀಠವನ್ನಲಂಕರಿಸಿದವರಲ್ಲಿ ೪೫ ನೆಯವರಾದ ಶ್ರೀ ಅಭಿನವ ಭಾರತೀಸ್ವಾಮಿಗಳು ಕೇವಲ ನಾಲ್ಕು ತಿಂಗಳು ಆಳಿದರೆ ೪೬ ನೆಯವರಾದ ಶ್ರೀ ಸಚ್ಚಿದಾನಂದಾಭಿನವ ಶಂಕರ ಭಾರತೀಸ್ವಾಮಿಗಳು ಅರ್ಧಶತಮಾನದಷ್ಟು ಸುದೀರ್ಘ ಕಾಲ ಆಳಿದರು. ಅವರು ವೃದ್ಧಾಪ್ಯ ಮೂಲಕ ಕಳೆದ ವರ್ಷವಷ್ಟೇ ಬೆಂಗಳೂರಿನ ನಾತವಲ್ಲಿ ಸೀತಾರಾಮಮೂರ್ತಿ ಎಂಬವರನ್ನು ತಮ್ಮ ಉತ್ತರಾಧಿಕಾರಿಯಾಗಿ ಆಯ್ದುಕೊಂಡು ೧೨–೪–೧೯೭೬ ರಂದು ಶುಭಮುಹೂರ್ತದಲ್ಲಿ ಅವರ ಪೀಠಾರೋಹಣವನ್ನು ನೆರವೇರಿಸಿದರು. ಸೀತಾರಾಮಮೂರ್ತಿ ಅಂದಿನಿಂದ ಶ್ರೀಮದಭಿನವೋದ್ದಂಡ ನರಸಿಂಹ

ಭಾರತೀಸ್ವಾಮಿಗಳಾದರು.

ಹಂಪೆಯ ಶ್ರೀ ವಿರುಪಾಕ್ಷ ದೇವರಿಗೆ ನಡೆವ ಸಕಲ ಕೈಂಕರ್ಯಾದಿಗಳೂ ಯಾತ್ರಾಮಹೋತ್ಸವಾದಿಗಳೂ ಈ ಮಠದ ಪೀಠಾಧಿಪತಿಗಳ ಮಾರ್ಗದರ್ಶನದಲ್ಲೇ ನಡೆಯಬೇಕು. ಹಂಪೆಯಲ್ಲಿ ಈ ಮಠವಿರುವುದು ವಿರುಪಾಕ್ಷ ದೇವಾಲಯದ ಹಿಂಭಾಗದಲ್ಲಿ. ಇವರು ಸಂಚಾರಕ್ಕೆ ಹೊರಡುವುದು ತೀರ ಕ್ವಚಿತ್ತಾಗಿ.

ಸದ್ಯದ ಜಗದ್ಗುರು ಶ್ರೀ ಶ್ರೀಮದಭಿನವೋದ್ದಂಡ ನರಸಿಂಹಭಾರತೀಸ್ವಾಮಿಗಳಿಗೆ ಈಗ ಕೇವಲ ೨೮ ವರ್ಷ ವಯಸ್ಸು. ಗೌರಕಾಯದ ಈ ತೇಜಃಪುಂಜ ವಾಮನಮೂರ್ತಿ ಈ ಪೀಠಕ್ಕೆ ಬಂದುದೊಂದು ವಿಚಿತ್ರ ಯೋಗಾಯೋಗ. ಪೂರ್ವಜನ್ಮದ ಸುಕೃತದ ಫಲವಾಗಿಯೇ ತಮಗೀ ಪೀಠ ದೊರೆಯಿತೆಂದವರ ನಂಬಿಕೆ. ಅವರ ಸಾತವಲ್ಲಿ ಮನೆತನ ಸಂಗೀತ ಪರಂಪರೆಯುಳ್ಳ ಕುಟುಂಬ. ಅವರ ತಾತ ಮುತ್ತಾತರೆಲ್ಲ ಮೈಸೂರು ಮಹಾರಾಜರ ಪೋಷಣೆಯಲ್ಲಿ ಬಾಳಿದ ಸಂಗೀತ ವಿದ್ವಾಂಸರು. ಇವರ ತಂದೆ



ಶ್ರೀ ನಾರಾಯಣಮೂರ್ತಿಗಳು ಸಹ ಸಂಗೀತ ವಿದ್ವಾಂಸರು. ನಾರಾಯಣಮೂರ್ತಿ– ಅಚ್ಚಮ್ಮ ದಂಪತಿಗೆ ಇವರು ದ್ವಿತೀಯ ಪುತ್ರ.

ಈ ಸಂದರ್ಭದಲ್ಲಿ ನಡೆದೊಂದು ಘಟನೆ ಮುಂದಾಗುವುದಕ್ಕೊಂದು ಸಂಕೇತವೆಂದು ಹೇಳಬಹುದಾಗಿದೆ. ೧೯೪೮ರ ಶರವನ್ನವರಾತ್ರಿಯಲ್ಲಿ ನಾರಾಯಣಮೂರ್ತಿಗಳು ಸಪತ್ನೀಕರಾಗಿ, ಶೃಂಗೇರಿಗೆ ಶ್ರೀ ಶಂಕರಾಚಾರ್ಯ ಮಠಮಠದಲ್ಲಿ ಸಂಗೀತ ಸೇವೆ ಸಲ್ಲಿಸುವುದಕ್ಕೆಂದು ಬಂದರು. ಅಚ್ಚಮ್ಮ ಆಗ ಗರ್ಭಿಣಿ. ನಾರಾಯಣಮೂರ್ತಿಗಳ ಸಂಗೀತ ಸೇವೆ ನಡೆದಿದ್ದಾಗ ಅಚ್ಚಮ್ಮ ಅಲ್ಲಿಯೇ ಕಂಬಕ್ಕೊರಗಿ ಕಣ್ಣು ಮುಚ್ಚಿದ್ದರಂತೆ. ಅದನ್ನು ಕಂಡ ಶ್ರೀ ಶ್ರೀ ಚಂದ್ರಶೇಖರ ಭಾರತೀಸ್ವಾಮಿಗಳು, "ಯಾರೀ ಹೆಣ್ಣುಮಗಳು? ತುಂಬ ಬಳಲಿದಂತಿದ್ದಾಳೆ," ಎಂದು ನುಡಿದು ಎದ್ದು ತಮ್ಮ ಕೋಣೆಗೆ ಹೋಗಿಬಿಟ್ಟರಂತೆ. ಸಭೆಯಲ್ಲೆಲ್ಲ ಗುಜುಗುಜು. ಸ್ವಾಮಿಗಳು ಈ ಮಹಿಳೆಯ ಮೇಲೆ ಕೋಪಗೊಂಡಂತಿದೆ; ಆಕೆಗೇನು ವಿಪತ್ತು ಕಾದಿದೆಯೋ ಎಂಬ ಭಯ, ಆತಂಕ ಎಲ್ಲರಿಗೂ. ಅಷ್ಟರಲ್ಲೇ ಈ ದಂಪತಿಗಳಿಗೆ ಸ್ವಾಮಿಗಳಿಂದ ಕರೆ ಬಂತು. ಇಬ್ಬರೂ ಭಯಭೀತರಾಗಿ ಒಳಗೆ ಹೋಗಿ ಸ್ವಾಮಿಗಳಿಗೆರಗಿ ತಮ್ಮಿಂದ ಆಗಿರಬಹುದಾದ ಅಪರಾಧಗಳನ್ನು ಕ್ಷಮಿಸಬೇಕೆಂದು ಪ್ರಾರ್ಥಿಸಿದರು. "ನಿನ್ನದೇನಯ್ಯ ಅಪರಾಧ? ಏನಿಲ್ಲ ಈ ಹೆಣ್ಣುಮಗಳದು. ಆಕೆಯನ್ನು ಶಿಕ್ಷಿಸಬೇಕು," ಎಂದರು ಗುರುಗಳು. ಅಚ್ಚಮ್ಮ ಕಣ್ಣೀರು ಸುರಿಸುತ್ತ, "ಮಗುವೇದೇ ಮನ್ನಿಸಿಬಿಡಬೇಕು," ಎಂದು ಅಲ್ಪರಿದು ಬೇಡಿಕೊಂಡರು. ತಟ್ಟನೆ ಗುರುಗಳು, "ಮಗೂನಾ? ಜಗದ್ವಿಖ್ಯಾತನಾಗುವ ಮಗುವನ್ನೇ ಪಡೆಯುತ್ತೀ ಹೋಗು. ಆದರೆ ಆತನ ವೈಭವ ನೋಡುವ ಭಾಗ್ಯ ನಿನಗಿಲ್ಲ," ಎಂದು ಆಶೀರ್ವದಿಸಿ ಕಳಿಸಿದರು. ಮುಂದೆ ತಿಂಗಳೊಪ್ಪತ್ತಿನಲ್ಲೇ ಜನಿಸಿದ ಈ ಸೀತಾರಾಮ. ಇವರಿಗೆ ಒಬ್ಬ ಅಣ್ಣ, ಒಬ್ಬ ತಮ್ಮ ಇದ್ದಾರೆ.

ಸೀತಾರಾಮ ಹುಟ್ಟಿ ಎರಡು ವರ್ಷಗಳಲ್ಲಿ ಅವರ ತಾಯಿ ಅಚ್ಚಮ್ಮ ವಿಧಿವಶರಾದರು.

ಅಮ್ಮನ ಸ್ಥಾನದಲ್ಲಿ ಚಿಕ್ಕಮ್ಮ ಬಂದ ನಂತರ ಮಾತ್ರ ಈ ಮೂವರು ಸಹೋದರರ ಪರಿಸ್ಥಿತಿ ಹದಗೆಡತೊಡಗಿತು. ಕೆಲ ವರ್ಷಗಳ ನಂತರ ಪ್ರತ್ಯೇಕವಾಗಿ ಇರಬೇಕಾಗಿ ಬಂತು. ಮುಂದೆ ಕೆಲ ಕಾಲಾಂತರದಲ್ಲಿ ಸೀತಾರಾಮು ಮತ್ತು ಅವರ ತಮ್ಮ ಅಣ್ಣನಿಂದಲೂ ಬೇರ್ಪಟ್ಟು ಬೇರೆ ಇರುವ ಪ್ರಸಂಗವೂ ಬಂತು.

ಆದರೆ ಸೀತಾರಾಮು ಹಿರಿಯರ ಆಸರೆ ತಪ್ಪಿದ್ದಕ್ಕಾಗಿ ಯಾವಾಗಲೂ ಅಳುಕಿ ಎದೆಗುಂದಿದವರಲ್ಲ. ತಮ್ಮ ಕ್ರಿಯಾಸಾಮರ್ಥ್ಯದಲ್ಲಿ ಪೂರ್ತಿ ವಿಶ್ವಾಸವುಳ್ಳ ಅವರು ಉಪಜೀವನಕ್ಕಾಗಿ ಅಲ್ಲಲ್ಲಿ ದುಡಿಯುತ್ತ ವಿದ್ಯಾರ್ಜನೆಯ ತಮ್ಮ ತೀವ್ರ ಹಂಬಲವನ್ನು ಪೂರೈಸಿಕೊಂಡರು. ಚಾರ್ಟರ್ಡ್ ಅಕೌಂಟೆಂಟ್ಸ್ ಪರೀಕ್ಷೆಯಲ್ಲಿ ಉತ್ತೀರ್ಣರಾದವರಲ್ಲದೆ ಕೈತುಂಬ ಸಂಬಳ ತರುವ ದೊಡ್ಡ ನೌಕರಿಯೂ ಸಿಕ್ಕಿತು.

ಇದೇ ಕಾಲಕ್ಕೆ ಶ್ರೀ ಆವನಿ ಪೀಠಾಧಿಪತಿಗಳು, ಶ್ರೀ ಸಿದ್ಧಗಂಗಾ ಪೀಠಾಧಿಪತಿಗಳು ಹಾಗೂ ಶ್ರೀ ಶೃಂಗೇರಿ ಜಗದ್ಗುರುಗಳ ಸಂಪರ್ಕ ಬಂದು ಇವರಲ್ಲಿ ಆಧ್ಯಾತ್ಮದ ಒಲವು ಜಾಗೃತವಾಯಿತು. ಈ ಮಧ್ಯೆ ವಿವಾಹಯೋಗ ಇಣಿಕಿದ್ದರೂ ವಿವಾಹಕಾಲ ಮಾತ್ರ ಒದಗಿಬರಲಿಲ್ಲ. ತದ್ವಿರುದ್ಧ ಲೌಕಿಕವನ್ನು ತ್ಯಜಿಸಿ ಸೀತಾರಾಮು ಸಂನ್ಯಾಸ ಸ್ವೀಕರಿಸಬೇಕಾಗಿ ಬಂದುದು ಒಂದು ವಿಸ್ಮಯಕಾರಿ ಸಂಗತಿಯೇ .

೧೯೭೭ರಲ್ಲಿ ಸೀತಾರಾಮುನಿಗೆ ೨೪ ವರ್ಷ ವಯಸ್ಸು. ಆಗ ಬಂದ ವಿಷಮಶೀತಜ್ವರದಿಂದ ಇವರು ಬದುಕಿ ಉಳಿದದ್ದೇ ಹೆಚ್ಚಾಯಿತು. ಆದರಿಂದ ತುಂಬ ನಿಶ್ಶಕ್ತಿ, ನಿರುತ್ಸಾಹವುಂಟಾಗಿ ಜೀವನದ ಮೇಲೆಯೆ ಇವರಿಗೆ ಜುಗುಪ್ಸೆಯುಂಟಾಯಿತು. ಅಂಥದರಲ್ಲಿ ಇವರ ಅತ್ತಿಗೆ, ತಮ್ಮ ತವರೂರಲ್ಲಿರುವ ಅಕ್ಕಾಯಮ್ಮನ ಬೆಟ್ಟಕ್ಕೆ ಹೋಗಿ ಅಲ್ಲಿಯ ದೇವಿಗೇ ನಡೆದುಕೊಂಡರೊಳಿತಾಗುತ್ತದೆಂದು ಸೂಚಿಸಿದರು.

ಅಕ್ಕಾಯಮ್ಮನ ಬೆಟ್ಟ ಇರುವದು ದೇವನಹಳ್ಳಿ ತಾಲೂಕಿನಲ್ಲಾದರೂ ಅದು ಬೆಂಗಳೂರಿಗೆ ಕೇವಲ ೧೬ ಮೈಲು ದೂರ. ದೇವಿಸ್ಥಾನವಾದ್ದರಿಂದ ಪ್ರತಿ ಶುಕ್ರವಾರ–ಮಂಗಳವಾರ ಅಲ್ಲಿ ವಿಶೇಷ ಪರೀಕ್ಷೆ. ಸೀತಾರಾಮು ಒಂದು ಮಂಗಳವಾರ ಅಕ್ಕಾಯಮ್ಮನ ಬೆಟ್ಟಕ್ಕೆ ಹೋಗಿ ಅಂದು ದೇವಿಗೆ ಪೂಜೆ ಮಾಡಿಸಿದರು. ಆಗ ಅವರ ಮನಸ್ಸು ಆ ದೇವಿಯಲ್ಲಿ ಲೀನವಾಯಿತು. ಮನಸ್ಸಿಗೆ ನೆಮ್ಮದಿ ಉಂಟಾಯಿತು.

ಮುಂದಿನ ಶುಕ್ರವಾರ ಅವರು ಪುನಃ ಬೆಟ್ಟಕ್ಕೆ ಹೋದಾಗ, ಅಲ್ಲಿ ದೇವಾಲಯದ ಮುಂದಿನ ಪುಷ್ಕರಿಣಿಯಲ್ಲಿ ಸ್ನಾನ ಮಾಡಲು ಇಳಿದಾಗ ಇವರ ಕೈಗೆ ಒಂದು ಬಿಳಿ ಶಿಲೆ ಸಿಕ್ಕಿತು. ಅದೇನೋ ಕಲ್ಲಿರಬಹುದು ಎಂದು ಅವನ್ನು ಮತ್ತೆ ನೀರಿಗೇ ಬಿಸಾಕಿ ದೇವಿಪೂಜೆ ಮುಗಿಸಿಕೊಂಡು ಬೆಂಗಳೂರಿಗೆ ಹಿಂತಿರುಗಿದರು. ಅವರ ಹೀಗೆ ಹಿಂತಿರುಗುತ್ತಿದ್ದಾಗ ದಾರಿಯುದ್ದಕ್ಕೂ, "ನಾನು ಬರುತ್ತಿದ್ದೆ, ನೀನು ಬೇಡ ಎಂದೆ," ಎಂದು ಯಾರೋ ಕಿವಿಯಲ್ಲಿ ಗುಣುಗುಣಿಸಿದಂತೆ ಆಗುತ್ತಿತ್ತು. ರಾತ್ರಿ ಕೋಣೆಯಲ್ಲಿ ಏನೂ ಇಲ್ಲದೆ ಸುಗಂಧ ದ್ರವ್ಯಗಳ ವಾಸನೆ ಇಡಗಿದಂತೆ, ಬಳೆ ಸದ್ದು ಕೇಳಿದಂತೆ ಆಗಹತ್ತಿತು. ಅವರಿಗೆ ಏನೂ ಬೋಧೆಯಾಗದೆ ತೆಪ್ಪಗಿದ್ದರು. ಮತ್ತೆ ಮುಂದೆ ಮಂಗಳವಾರ ಅವರು ಪುನಃ ಅಕ್ಕಾಯಮ್ಮನ ಬೆಟ್ಟಕ್ಕೆ ಹೋದರು. ಅಲ್ಲಿ ಅದೇ ಕೊಳದಲ್ಲಿ ಸ್ನಾನಕ್ಕೆಂದು ಇಳಿದಾಗ ಪುನಃ ಅದೇ ಬಿಳಿ ಕಲ್ಲೇ ಇವರ ಕೈಗೆ ಬಂದಿತು. ಆಗ ಅವರು ಅನನ್ನು ಬಿಸಾಕದೆ ಇಟ್ಟುಕೊಂಡು ದೇವಾಲಯದ ಅರ್ಚಕರಿಗೆ ತೋರಿಸಿದರು.

"ಇದು ಅಮ್ಮನವರ ಶಿಲೆ. ನಿಮಗೆ ಅಮ್ಮನವರ ಅನುಗ್ರಹ ಸಂಪೂರ್ಣವಾಗಿದೆ. ನೀವಿದನ್ನು ನಿಷ್ಠೆಯಿಂದ ಪೂಜಿಸಿ; ನಿಮಗೆ ಕಲ್ಯಾಣವಾಗುವದು," ಎಂದು ಹೇಳಿದರು. ಸೀತಾರಾಮು ಪುಲಕಿತರಾದರು. ದಿವ್ಯಶಕ್ತಿಯೊಂದು ತಮ್ಮಲ್ಲಿ ಐಕ್ಯವಾದಂತೆ ಅವರಿಗೆ ಅನಿಸಿತಂತೆ. ಅವರು ಆ ಸಾಲಿಗ್ರಾಮ ಶಿಲೆಯನ್ನು ತಮ್ಮ ಮನೆಗೆ ತಂದುಕೊಂಡು ನಿತ್ಯ ಪೂಜೆ ಮಾಡತೊಡಗಿದರು.

ಸೀತಾರಾಮು ತನಗೆ ಪುಷ್ಕರಿಣಿಯಲ್ಲಿ ದೊರೆತ ಸಾಲಿಗ್ರಾಮವನ್ನು ತಂದು ತನ್ನ ಮನೆಯಲ್ಲಿ ಪೂಜಿಸುತ್ತಿರಲು ಒಂದು ರಾತ್ರಿ ಸಪ್ತ ಮಾತೃಕೆಯರು ನರದೇಹಧಾರಿಗಳಾಗಿ ಇವರ ಕನಸಿನಲ್ಲಿ ಕಾಣಿಸಿಕೊಂಡರು. ಅವರ ದೇದೀಪ್ಯಮಾನ

ಕಾಂತಿಗೆ ಮನಸೋತ ಇವರು ಸಾಷ್ಟಾಂಗ ನಮಸ್ಕರಿಸಲಾಗಿ, "ಸೀತಾರಾಮು, ನಾವು ನಿನ್ನ ತಾಯಂದಿರು. ನೀನು ನಮ್ಮನ್ನು ಸೇವಿಸಲು ಒಪ್ಪುವುದಾದರೆ ನಾವು ನಿನ್ನಲ್ಲಿಯೇ ನೆಲಸಿ ಉತ್ತರೋತ್ತರ ನಿನ್ನ ಕಲ್ಯಾಣ ಸಾಧಿಸುವೆವು. ನಿನಗಿನ್ನೂ ಲೌಕಿಕ ಆಕರ್ಷಿಸುತ್ತಿದೆ. ಅದರಲ್ಲಿಯೇ ನೀನು ಸುಖಪಡಲೂಬಹುದು. ಆದರೆ ನೀನು ನಮ್ಮನ್ನು ಆರಾಧಿಸಲು ಒಪ್ಪಿದರೆ ನೀನೊಬ್ಬ ವಿಖ್ಯಾತ ವ್ಯಕ್ತಿಯಾಗುವಿ. ಅಲ್ಲದೆ ನಾಳಿಗೆ ನಿನಗೆ ನಿನ್ನ ಗುರುಗಳ ದರ್ಶನ ಮಾಡಿಸುವೆವು," ಎಂದು ಹೇಳಲಾಗಿ ಅವರ ಅಮೃತವಾಣಿಯಿಂದ ಆನಂದತುಂದಿಲನಾದ ಈತನು ಅವರನ್ನು ಸೇವಿಸಲು ಒಪ್ಪಿಕೊಂಡನು. ಕೂಡಲೇ ಅವರು ಈತನನ್ನು ಮೈದಡವಿ ಸಂತೈಸಿ ಅದೃಶ್ಯರಾದರು. ಈ ರೋಮಾಂಚಕ ಅನುಭವವನ್ನು ಸೀತಾರಾಮು ಹತ್ತು ಪುಟಗಳಷ್ಟು ದೀರ್ಘವಾಗಿ ಬರೆದಿಟ್ಟಿದ್ದಾರೆ.

ಅಕ್ಕಾಯಮ್ಮನ ಆಶ್ವಾಸನದಂತೆ ಮರುದಿನ ರಾತ್ರಿಯೆ ಸೀತಾರಾಮನಿಗೆ ಮತ್ತೊಂದು ದೃಷ್ಟಾಂತ. ವೃದ್ಧ ಬ್ರಾಹ್ಮಣನೊಬ್ಬ ಇವರ ಕೋಣೆಯ ಬಾಗಿಲು ತಟ್ಟಿ ಒಳಗೆ ಬಂದಂತೆಯೂ ತನ್ನನ್ನು ಹಿಂಬಾಲಿಸುವಂತೆ ಹೇಳಿದಂತೆಯೂ ಈತ ಆ ಬ್ರಾಹ್ಮಣನ ಬೆನ್ನು ಹತ್ತಿ ಹೊರಟರೆ ಭೋರ್ಗರೆವ ತುಂಗಭದ್ರಾನದಿಯನ್ನು ದಾಟಿ ಶ್ರೀ ಮಂತ್ರಾಲಯ ಕ್ಷೇತ್ರ ಸಂದರ್ಶಿಸಿದಂತೆಯೂ ಅನುಭವ. ಅಲ್ಲಿಗೆ ಹೋದ ಕೂಡಲೆ ಆ ವೃದ್ಧಬ್ರಾಹ್ಮಣ ವೃಂದಾವನದಲ್ಲಿ ಐಕ್ಯ. ಕೂಡಲೆ ಸುಮಧುರ ಧ್ವನಿ "ರಾಮೂ, ನೀನು ನನ್ನನ್ನು ಇಲ್ಲಿಯವರೆಗೆ ಹಿಂಬಾಲಿಸಿದ ಧೈರ್ಯಶಾಲಿ. ನೀನು ನಿನ್ನ ಕರ್ಮಫಲವನ್ನು ಕಳೆದುಕೊಳ್ಳಲು ರಾಮಾಯಣ ಮಧುರಾಮೃತ ಕಾವ್ಯ ಎಂಬ ಕಾವ್ಯ ರಚಿಸಿ ಸೀತಾರಾಮರಿಗೆ ಅರ್ಪಿಸು. ನಿನ್ನ ಜ್ಞಾನ ವೃದ್ಧಿಯಾಗುತ್ತದೆ. ನನ್ನಂಥ ಸದ್ಗುರುಗಳ ದರ್ಶನವಾಗಿ ನಿನ್ನ ಉದ್ಧಾರವಾಗುತ್ತದೆ. ನಾನು ನಿತ್ಯ ನಿನ್ನ ಭೆಟ್ಟಿಗೆ ಬರುತ್ತೇನೆ. ಒಂದು ದಿನ ಬರಲಾಗದ್ದಿರೆ ನನ್ನನ್ನು ಸ್ಮರಿಸಿದಲ್ಲಿ ನೀನೇ ಇಲ್ಲಿಗೆ ಬರುವಂತಾಗುತ್ತದೆ. ನಮ್ಮ ನಿನ್ನ ಸಂಬಂಧ ಮುಂದೆ ತಾನೇ ಸ್ಪಷ್ಟವಾಗುತ್ತದೆ. ನಾವಿಬ್ಬರೂ ಪರಮಾತ್ಮನ ಸೇವಕರೆಂದು ಮಾತ್ರ ತಿಳಿ."

ಈ ಅಮೃತವಾಣಿಯನ್ನು ಕೇಳಿದ ಸೀತಾರಾಮು, "ಧನ್ಯನಾದೆ. ಅಮ್ಮನರಾಗಲಿ ನೀವಾಗಲಿ ನನ್ನಲ್ಲಿ ಇರಲಿಕ್ಕೆ ನನ್ನ ಅಭ್ಯಂತರವೇನೂ ಇಲ್ಲ. ಆದರೆ ನೀವು ನನ್ನಿಂದ ಪವಾಡಗಳನ್ನು ಮಾತ್ರ ಮಾಡಿಸಬೇಡಿರಿ. ಈ ಕ್ಷಣತ್ರಯುಗಳ ಆಶೆ ನನಗಿಲ್ಲ. ನಮ್ಮ ಸನಾತನಧರ್ಮದ ಉದ್ಧಾರ ಕಾರ್ಯ ನನ್ನಿಂದಾದರೆ ಒಳ್ಳೆಯದೆಂದು ಭಾವಿಸಿದ್ದೇನೆ, ಆಶೀರ್ವದಿಸಬೇಕು," ಎಂದು ಕೇಳಿಕೊಂಡರು.

"ಹಾಗೇ ಆಗಲಿ, ನೀನೂ ನನ್ನಂತೆ ಸುಕ್ಷೇತ್ರ ವೊಂದರಲ್ಲಿ ವಾಸಿಸಿ, ಧರ್ಮ ಜಾಗೃತಿ ಕಾರ್ಯವನ್ನು ಮುಂದುವರಿಸುತ್ತೀ. ನಿನಗೆ ವಾಕ್ಸಿದ್ಧಿಯನ್ನು ಕರುಣಿಸುತ್ತೇನೆ. ನಿನ್ನಿಚ್ಛೆಯಂತೆಯೆ ಕಾರ್ಯ ನಡೆಯುತ್ತವೆ. ಈ ನನ್ನ ಹಸ್ತದ ಮೇಲಿನ ಮಂತ್ರವನ್ನು ಮನನ ಮಾಡಿಕೊ. ಅದರ ಅನುಷ್ಠಾನದಿಂದ ನಿನಗೆ ಅಖಂಡ ಕಲ್ಯಾಣವಾಗುವುದು," ಎಂದು ತಮ್ಮ ಅನುಗ್ರಹ ಹಸ್ತವನ್ನು ಚಾಚಿದರು. ಸೀತಾರಾಮು ಆ ಮಂತ್ರ ಮನನ ಮಾಡಿಕೊಳ್ಳುತ್ತಿದ್ದಂತೆ ದಿಗ್ಗನೆ ಎಚ್ಚರ. ಎಲಾ! ತನ್ನ ಕೋಣೆಯಲ್ಲಿಯೆ ತನ್ನ ಶಯ್ಯೆಯಲ್ಲಿಯೆ ಇದ್ದೇನಲ್ಲಾ! ಆದರೂ ಎಂಥ ದಿವ್ಯಾನುಭವ ಸೀತಾರಾಮನಿಗೆ.

ಪರಿವರ್ತನೆ ಪರಿಪೂರ್ಣವಾಗಿತ್ತು.

ಚಕ್ರ ಉರುಳಿತು. ಸೀತಾರಾಮು ಶ್ರೀ ಅವನಿ ಜಗದ್ಗುರುಗಳನ್ನು ಕಂಡು ತಮಗೆ ಸಂನ್ಯಾಸ ದೀಕ್ಷೆ ನೀಡಬೇಕೆಂದು ಕೋರಿದರು. ಆದರೆ ಶ್ರೀಗಳು ಇವರಿಗೆ ರಾಮಾಯಣ ಕಾವ್ಯವನ್ನು ಬರೆದು ಮುಗಿಸಿಕೊಂಡು ಬರಲು ಆದೇಶಿಸಿದರು. ದೈವಾನುಗ್ರಹದಿಂದ ಸೀತಾರಾಮು ರಾಮಾಯಣ ಕಾವ್ಯವನ್ನು ಸಂಗ್ರಹ ರೂಪವಾಗಿ ಸುಲಲಿತ ಶೈಲಿಯಲ್ಲಿ ಬರೆದು ಪೂರೈಸಿದ್ದಲ್ಲದೆ ಶ್ರೀಚಕ್ರ, ಗೀತಾಚಕ್ರ, ವಿನಾಯಕ ಚಕ್ರ ಪಮ್ಮಾಕ್ಷಿಚಕ್ರ, ಲಲಿತಾಚಕ್ರ, ಹರಿಚಕ್ರ, ಜ್ಞಾನ ಚಕ್ರ, ಸೀತಾರಾಮ ಚಕ್ರ, ಸಪ್ತಶತಿ ಎಂದು ಹಲವಾರು ದೈವೀಚಕ್ರಗಳನ್ನು ಸ್ವತಂತ್ರವಾಗಿ ರಚಿಸಿ ಅವನಿ ಶ್ರೀಗಳಿಗರ್ಪಿಸಿದರು.

ಶ್ರೀ ಆವನಿ ಜಗದ್ಗುರುಗಳು ಇದರಿಂದ ಸಂತುಷ್ಟರಾಗಿ ಸೀತಾರಾಮನಿಗೆ ನೈಷ್ಠಿಕ ಬ್ರಹ್ಮಚರ್ಯ ದೀಕ್ಷೆಯಿತ್ತು ಅವಧೂತ ಸಂನ್ಯಾಸದೀಕ್ಷೆ ಅನುಗ್ರಹಿಸಿದರು (೧೯–೧೦–೭೩). ಶ್ರೀ ಶ್ರೀ ಸಚ್ಚಿದಾನಂದ ಸೀತಾರಾಮ ಸ್ವಾಮೀಜಿ ಎಂಬ ಹೊಸ ನಾಮಕರಣವೂ ಆಯಿತು.

ಅಕ್ಕಾಯಮ್ಮ ಇವರನ್ನು ಮತ್ತೆ ತನ್ನ ಕ್ಷೇತ್ರಕ್ಕೆ ಆಕರ್ಷಿಸಿದಳು. ಸುಮಾರು ಎರಡೂವರೆ ವರ್ಷಕಾಲ ಸ್ವಾಮೀಜಿ ಅಲ್ಲಿದ್ದು ತಮ್ಮ ತಪಃಶಕ್ತಿಯನ್ನು ಬೆಳೆಸಿಕೊಳ್ಳುವುದರ ಜೊತೆಗೆ ಅಲ್ಲಿಯ ಸುತ್ತುಮುತ್ತಲಿನ ಹಾಗೂ ಬೆಂಗಳೂರಿನ ಅನೇಕ ಗಣ್ಯ ಭಕ್ತರ ನೆರವಿನಿಂದ ಅಲ್ಲಿ ಬೆಟ್ಟದ ಮೇಲೆ ದೇವಾಲಯವೊಂದನ್ನು ಕಟ್ಟಿಸಿ ಸೀತಾ ಲಕ್ಷ್ಮಣ ಆಂಜನೇಯ ಸಮೇತ ಕೋದಂಡರಾಮ, ಶಾರದಾ, ಗಣೇಶ ವಿಗ್ರಹಗಳನ್ನು ಪ್ರತಿಷ್ಠಾಪಿಸಿದರು. ಇದರಲ್ಲಿ ಸೀತಾರಾಮಲಕ್ಷ್ಮಣರ ವಿಗ್ರಹ ಇವರಿಗೆ ದೊರೆತದ್ದೂ ಒಂದು ಯೋಗಾಯೋಗ.

ಕಳೆದ ವರ್ಷ ಫೆಬ್ರುವರಿ ತಿಂಗಳ ಐದನೇ ದಿನಾಂಕದಂದು ಕೋದಂಡರಾಮ ಲಕ್ಷ್ಮಣ ಸೀತೆಯರ ವಿಗ್ರಹ ಪ್ರತಿಷ್ಠಾಪನ ನಡೆಯಿತಾದರೂ ಇವು ಸಿದ್ಧವಾಗಿ ೪೫ ವರ್ಷ ಕಾಲ ಕಳೆದಿತ್ತು. ಬೇಗೂರು ಗ್ರಾಮದಲ್ಲಿ ಶ್ರೀ ಜಗನ್ನಾಥಶಾಸ್ತ್ರಿಗಳು ಎಂಬ ನಿವೃತ್ತ ರೆಲ್ವೇ ಸ್ಟೇಶನ್ ಮಾಸ್ತರರಲ್ಲಿ ಇದ್ದವು. ತಾನೇ ಇವನ್ನು ಪ್ರತಿಷ್ಠಾಪಿಸಬೇಕು ಎಂದು ಅವರು ಮೂರ್ತಿಗಳನ್ನು ಮಾಡಿಸಿಟ್ಟುಕೊಂಡಿದ್ದರು. ಹದಿನೈದು ವರ್ಷ ಕಾಲ ಕಳೆದರೂ ವಿಗ್ರಹಗಳು ಮನೆಯಲ್ಲಿಯೇ ಉಳಿದುಕೊಂಡುಬಿಟ್ಟಿದ್ದರಿಂದ ಜಗನ್ನಾಥಶಾಸ್ತ್ರಿಗಳು ೧೯೪೬ರಲ್ಲಿ ಶೃಂಗೇರಿಗೆ ಹೋಗಿ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳವರನ್ನು ಕಂಡು ಅಡ್ಡ ಬಿದ್ದು ತಮ್ಮ ಸಂಕಟ ತೋಡಿಕೊಂಡರು. ಆದರೆ ಶ್ರೀ ಜಗದ್ಗುರುಗಳು, "ಇಲ್ಲಯ್ಯ, ನಿನ್ನ ರಾಮನ್ನ ಪ್ರತಿಷ್ಠಾಪನ ಮಾಡೋ ಕಾರ್ಯ ನಿನ್ನಿಂದ ಸಾಧ್ಯವಿಲ್ಲ, ಹೋಗು," ಎಂದು ಅಪ್ಪಣೆಯಿತ್ತರು. ಜಗನ್ನಾಥಶಾಸ್ತ್ರಿಯ ಕಣ್ಣಲ್ಲಿ ದಳದಳ ನೀರು. ಆತನ ಅವಸ್ಥೆ ಕಂಡ ಶ್ರೀ ಜಗದ್ಗುರುಗಳು, "ಅಯ್ಯಾ ಜಗನ್ನಾಥ, ನೀನು ಇನ್ನೂ ಕಾಯಬೇಕು. ಇನ್ನೆರಡು ವರ್ಷಕ್ಕೆ ಒಬ್ಬ ಮಹಾನುಭಾವ ಹುಟ್ಟುತಾನೆ. ನಂತರ ೨೮ ವರ್ಷ ಕಳೆದ ಬಳಿಕ ನಿನ್ನನ್ನು ಕಾಣತಾನೆ. ಆತ ಮಾತ್ರ ನಿನ್ನ ವಿಗ್ರಹ ಪ್ರತಿಷ್ಠಾಪನೆ ಮಾಡಬಲ್ಲ ಪುಣ್ಯವಂತ. ಆತನಿಗೆ ನಿನ್ನ ವಿಗ್ರಹಗಳನ್ನು ಕೊಡು, ಹೋಗು," ಎಂದು ಆಶೀರ್ವದಿಸಿದರು.

ಈ ಪುಣ್ಯವಂತ ಬೇರಾರೂ ಆಗಿರದೆ ಎರಡು ವರ್ಷಗಳ ನಂತರ ಅಂದರೆ ೧೯೪೮ ರಲ್ಲಿ ಹುಟ್ಟಿ, ೨೮ ವರ್ಷಗಳ ನಂತರ ೧೯೭೬ ರಲ್ಲಿ ಜಗನ್ನಾಥ ಶಾಸ್ತ್ರಿಗಳನ್ನು ಕಂಡ ಶ್ರೀ ಶ್ರೀ ಸೀತಾರಾಮ ಸ್ವಾಮಿಜಿ ಅವರೇ. ತಾವು ಬೇಗೂರು ಗ್ರಾಮಕ್ಕೆ ಹೋಗಿ, ಜಗನ್ನಾಥಶಾಸ್ತ್ರಿಗಳಿಂದ ವಿಗ್ರಹಗಳನ್ನು ಪಡೆದುಕೊಂಡು ಬಂದ ಕಥೆಯನ್ನು ಸ್ವಾಮೀಜಿ ಅಭಿಮಾನದಿಂದ ಹೇಳುತ್ತಾರೆ.

ಶ್ರೀ ಶ್ರೀ ಸಚ್ಚಿದಾನಂದ ಸೀತಾರಾಮ ಸ್ವಾಮಿಸೇವಾ ಸಮಿತಿ ಎಂಬ ಸಮಿತಿಯೊಂದನ್ನು ಸ್ವಾಮಿಗಳು ರಚಿಸಿ ಈ ಹೊಸ ದೇವಾಲಯಗಳ ಆಡಳಿತವನ್ನು ಅದಕ್ಕೆ ಒಪ್ಪಿಸಿದ್ದಾರೆ.

ಶ್ರೀ ಸಚ್ಚಿದಾನಂದಸೀತಾರಾಮ ಸ್ವಾಮಿಗಳ ಎರಡೂವರೆ ವರ್ಷಗಳ ಪರಿಶ್ರಮದ ಫಲವಾಗಿ ಹುತ್ತನಹಳ್ಳಿಯ ಈ ಅಕ್ಕಾಯಮ್ಮನ ಬೆಟ್ಟ ತುಂಬ ಆಕರ್ಷಣೀಯವಾಗಿ ಅಭಿವೃದ್ಧಿ ಹೊಂದಿದೆ. ಆದರೆ ಸರಕಾರ ಈ ಗುಡ್ಡವನ್ನು ರಸ್ತೆಖಡಿಗಾಗಿ ಕರಗಿಸಹತ್ತಿರುವದು ಶೋಚನೀಯ.

ಶ್ರೀ ಆವನಿ, ಶ್ರೀ ಶಿವಗಂಗೆ, ಶ್ರೀ ಶೃಂಗೇರಿ ಜಗದ್ಗುರುಗಳು ಶ್ರೀ ಸೀತಾರಾಮ ಶಾಸ್ತ್ರಿಗಳ ಚಟುವಟಿಕೆಗಳನ್ನು ಅಭಿಮಾನದಿಂದ ವೀಕ್ಷಿಸುತ್ತಿದ್ದರು. ಹಂಪೆಯ ಶ್ರೀ ವಿರುಪಾಕ್ಷವಿದ್ಯಾರಣ್ಯ ಸಂಸ್ಥಾನದ ಪೀಠಕ್ಕೆ ಉತ್ತರಾಧಿಕಾರಿಯ ಶೋಧ ನಡೆದ ಸಂಗತಿ ತಿಳಿದ ಕೂಡಲೆ ಈ ಮೂವರೂ ಶ್ರೀ ಶ್ರೀ ಸೀತಾರಾಮ ಸ್ವಾಮೀಜಿಯವರ ಹೆಸರನ್ನೇ ಒಮ್ಮುಖವಾಗಿ ಸೂಚಿಸಿದ್ದರಿಂದ ಇವರು ಹಂಪೆಯ ಶ್ರೀ ವಿರೂಪಾಕ್ಷವಿದ್ಯಾರಣ್ಯ ಪೀಠಕ್ಕೆ ಜಗದ್ಗುರುಗಳಾಗಿ ಬರುವಂತಾಯಿತು.

೧೯೭೬ರ ಎಪ್ರಿಲ್ ೧೨ ರಂದು ಹಂಪೆಯಲ್ಲಿ

# ಇದುವೆ ಜೀವ ಇದು ಜೀವನ

ಸುಮಾರು ೨೦-೨೨ ವರ್ಷಗಳ ಹಿಂದಿನ ಮಾತು. ನಮ್ಮ ದೊಡ್ಡಪ್ಪನವರು ಚನ್ನಪಟ್ಟಣದಲ್ಲಿ ಸರಕಾರಿ ಕೆಲಸದಲ್ಲಿದ್ದ ಸಮಯ. ಒಮ್ಮೊಮ್ಮೆ ನಾವುಗಳು ರಜಾ ದಿನಗಳಲ್ಲಿ ಎಂದಿನಂತೆ ನಮ್ಮ ಅಜ್ಜನವರ ಸಂಗಡ ಸಾಯಂಕಾಲ ತಿರುಗಾಡಲು ಹೋಗುತ್ತಿದ್ದೆವು. ಅವರು ಯಾವಾಗಲೂ ಸ್ವಾರಸ್ಯವಾಗಿ ಕತೆಗಳನ್ನು ಹೇಳುತ್ತಿದ್ದುದರಿಂದ ನಮಗೆ ಅಜ್ಜನವರ ಸಂಗಡ ತಿರುಗಾಡಲು ಹೋಗುವುದೆಂದರೆ ಬಹಳ ಖುಷಿ.

ನಾವು ಹೀಗೆ ತಿರುಗಾಡಿಕೊಂಡು ಒಂದು ದಿನ ಮನೆಯ ಕಡೆ ಬರುತ್ತಿದ್ದಾಗ, ಒಂದು ದೇವಸ್ಥಾನದ ಬಳಿ ಬಹಳ ಜನ ಸೇರಿದ್ದರು. ಸಹಜ ಕುತೂಹಲದಿಂದ ನಮ್ಮ ಅಜ್ಜನವರು ವಿಚಾರಿಸಲು ಕೀರ್ತನೆ ನಡೆಯುತ್ತಿತ್ತೆಂದು ತಿಳಿಯಿತು. ದೇವರು ದಿಂಡರ ಬಗ್ಗೆ ಬಹಳ ವಿಶ್ವಾಸವಿದ್ದ ಅಜ್ಜನವರು ನಮ್ಮಗಳೊಂದಿಗೆ ಒಳಗೆ ಪ್ರವೇಶ ಮಾಡಿದರು. ನಾವು ಒಳಗೆ ಪ್ರವೇಶಿಸಿದಾಗ ತೇಜಸ್ವಿಯಾದ ಆ ಕೀರ್ತನಕಾರರು ತಮ್ಮ ಕೀರ್ತನೆಯನ್ನು ಅರ್ಧಕ್ಕೆ ನಿಲ್ಲಿಸಿ, ನಮ್ಮ ಅಜ್ಜನವರ ಬಳಿ ಬಂದು, ಅವರಿಗೆ ದೀರ್ಘದಂಡ ನಮಸ್ಕಾರ ಮಾಡಿ, ಅವರನ್ನು ಕೈಹಿಡಿದು ಕರೆದುಕೊಂಡು ಹೋಗಿ, ವೇದಿಕೆ ಮೇಲೆ ಕುಳ್ಳಿರಿಸಿ, ತಮ್ಮ ಶಾಲನ್ನು ಅವರಿಗೆ ಹೊದಿಸಿ, ಸಭಿಕರಿಗೆ ನಮ್ಮ ಅಜ್ಜನವರನ್ನು ತಮ್ಮ ವಿದ್ಯಾಗುರುಗಳೆಂದು ಪರಿಚಯಿಸಿ ತಮ್ಮ ಕೀರ್ತನೆಯನ್ನು ಮುಂದುವರಿಸಿದರು.

ನಮಗೆಲ್ಲ ಆ ಕೀರ್ತನಕಾರರು ಯಾರೆಂಬ ಕುತೂಹಲ. ನಾವುಗಳು ಮನೆಗೆ ಹಿಂದಿರುಗುವಾಗ ನಮ್ಮ ಅಜ್ಜನವರನ್ನು ವಿಚಾರಿಸಲು ಅವರು ಕನ್ನಡನಾಡು, ನುಡಿಗೆ ಜೀವಂತವಾಗಿ ಹೋರಾಡಿದ, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಶಿವಮೂರ್ತಿ ಶಾಸ್ತ್ರಿಗಳೆಂದು ತಿಳಿಯಿತು. ದೊಡ್ಡವರು ಯಾವಾಗಲೂ ಹಾಗೆ, ಎಲ್ಲದರಲ್ಲೂ ದೊಡ್ಡತನವೆಂದು ನಮ್ಮಜ್ಜನವರು ಹೇಳಿದ ನೆನಪು ಈಗಲೂ ಹಸಿರಾಗಿದೆ.

—ಎನ್. ಸಿ. ಸುಂದರರಾಜರಾವ್

ನಾನು ಸಾಲ ಕೊಡುವ ಸಹಕಾರ ಸಂಘದಲ್ಲಿ ಕೆಲಸ ಮಾಡುವವನಾದ್ದರಿಂದ ಆಗಾಗ್ಗೆ ಸೇಲ್ಸ್ ಆಫೀಸರ್‌ರವರ ಸಂಗಡ ಹಳ್ಳಿಗಳಿಗೆ ಸಾಲ ವಸೂಲಿಗೆ ಹೋಗಬೇಕಾಗಿ ಬರುತ್ತದೆ. ಅದೇ ಆ ದಿನ ಸಹ ಸೇಲ್ಸ್ ಆಫೀಸರ್‌ರವರ ಸಂಗಡ ಒಂದು ಹಳ್ಳಿಗೆ ಹೋದೆ. ಆ ಹಳ್ಳಿಯಲ್ಲಿ ಇಬ್ಬರಿಂದ ಸಾಲವಸೂಲಿಯಾಗಬೇಕಾಗಿತ್ತು.

ಮೊದಲು ಒಬ್ಬ ಸಾಲಗಾರನ ಮನೆಯ ಬಳಿ ಹೋದೆವು. ಅವನ ಮನೆಯನ್ನೂ ಅವನ ವಾತಾವರಣವನ್ನೂ ನೋಡಿದರೆ ಅವನು ಬಡವನೆಂದು ಯಾರು ಬೇಕಾದರೂ ಹೇಳಬಹುದಾಗಿತ್ತು. ಹೆಸರು ಕೂಗಿದ ತಕ್ಷಣ ಮುಖಕ್ಷೌರವಾಗಿದ್ದ, ಮೊಣಕಾಲ ಮೇಲೆ ತುಂಡು ಪಂಚೆಯನ್ನು ಉಟ್ಟಿದ್ದ ಒಬ್ಬ ಮುದುಕ ಬಂದು ಕೈ ಮುಗಿದ. ಸೇಲ್ಸ್ ಆಫೀಸರ್, "ಏನಯ್ಯ, ಕೊಟ್ಟಿರೋ ಸಾಲ ವಾಪಸ್ಸು ಕೊಡಬೇಕು ಅನ್ನೊ ಜ್ಞಾನ ಇಲ್ವಾ? ಎಷ್ಟು ವರ್ಷ ಆಯ್ತು, ನಿಮಗೆ ಸಾಲ ಕೊಟ್ಟು ನಿಮಗೆ ಜ್ಞಾಪಕ ಇರಲ್ಲ ಕಣ್ರಯ್ಯ. ಜಪ್ತಿ ಮಾಡಿ ಹರಾಜು ಮಾಡಿದರೆ ಬುದ್ಧಿ ಬರತ್ತೆ," ಎಂದು, "ಏನ್ರೀ, ಇವನ್ದು ಎಷ್ಟು ಬರಬೇಕ್ರಿ" ಎಂದು ನನ್ನ ಕಡೆ ತಿರುಗಿ ಕೇಳಿದರು. ನಾನು, "ಎಲ್ಲ ಸೇರಿ ೩೦೦ ರೂ. ಸರ್," ಎಂದೆ. ಸರಿ ಜಪ್ತಿ ವಾರಂಟ್ ಕೊಟ್ಟರು. ಆ ಮುದುಕ, "ಬೇಡ ಸ್ವಾಮಿ, ಕಾಲ ಮೇಲೆ ಬೀಳ್ತೀನಿ, ಈ ಸಲಕ್ಕೆ ಮಾಫ್ ಮಾಡಿ. ಒಂದು ವಾರ ಟೈಂ ಕೊಡಿ, ಹೇಗಾದ್ರೂ ಮಾಡಿ ಕೊಡ್ತೀನಿ," ಎಂದು ಕಾಲು ಹಿಡಿದ. "ಎಲ್ಲರಿಗೂ ಟೈಂ ಕೊಡ್ತಾ ಇದ್ದರೆ ನಾವು ಉದ್ಧಾರ ಆದ ಹಾಗೇ," ಎಂದು ಗದರಿಸಿದ ಸೇಲ್ಸ್ ಆಫೀಸರ್ ಕೊನೆಗೆ ಮನಸ್ಸಿಲ್ಲದ ಮನಸ್ಸಿನಿಂದ ಒಂದು ವಾರ ಸಮಯವಿತ್ತರು.

ಬಳಿಕ ಅದೇ ಊರಿನಲ್ಲಿದ್ದ ಮತ್ತೊಬ್ಬ ಸಾಲಗಾರನ ಮನೆಗೆ ಬಂದೆವು. ಆತ ಆ ಊರಿಗೆ ಸಾಹುಕಾರ. ದೊಡ್ಡದಾದ ಮನೆ. ವರಾಂಡದಲ್ಲಿ ವಿಶ್ವೇಶ್ವರಯ್ಯ, ಗಾಂಧಿ, ಮುಂತಾದವರ ಫೋಟೋ. ಗೇಟ್ ತೆರೆಯುತ್ತಿದ್ದಂತೆ ಜುಬ್ಬ ಪಂಚೆ ಧರಿಸಿದ್ದ ಆಸಾಮಿ, "ಬನ್ನಿ, ಬನ್ನಿ," ಎಂದು ಸ್ವಾಗತಿಸಿದ. ಕೂತ ಸ್ವಲ್ಪ ಹೊತ್ತಿಗೆ ನಮ್ಮ ಸೇಲ್ಸ್ ಆಫೀಸರ್, "ನಾನು ಬ್ಯಾಂಕಿನಿಂದ ಬಂದಿದ್ದೀನಿ. ನಿಮ್ಮದು ಸೊಸೈಟಿಗೆ ಬಾಕಿ ನಿಂತಿದೆ. ತೀರಿಸಿದರೆ ಅನುಕೂಲ. ನಿಮಗೇನೂ ದೊಡ್ಡದಲ್ಲ ನೋಡಿ," ಎಂದು ಹೇಳಿದರು. "ಎಷ್ಟಿದೆ ಬಾಕಿ?" ಎಂದು ಆ ಮನುಷ್ಯ ನನ್ನನ್ನು ಕೇಳಿದಾಗ ನಾನು, "ಎಲ್ಲ ಬಡ್ಡಿ ಸೇರಿ ೩,೦೦೦ ಆಗುತ್ತೆ ಸಾಲ ಕೊಟ್ಟು ಭಾಳ ವರ್ಷ ಆಯ್ತು," ಎಂದೆ. "ಹೂಂ, ಅಷ್ಟೆ ತಾನೆ, ಕೊಟ್ಟುಬಿಡೋಣ, ಒಂದೆರಡು ವರ್ಷದಲ್ಲಿ. ಅದರಲ್ಲೇನು?" ಎಂದರು. ಸೇಲ್ಸ್ಆಫೀಸರ್, "ಇರಲಿ ಸರ್, ಈ ದುಡ್ಡು ನಿಮಗೆ ದೊಡ್ಡದೇನಲ್ಲ. ಆದಷ್ಟು ಬೇಗ ತೀರಿಸಿಬಿಡಿ. ನಾವು ಬಂದ್ವಿ ಅಂತ ಮನಸ್ಸಿಗೆ ಏನೂ ತಿಳಿದುಕೊಳ್ಳಬೇಡಿ. ನಮ್ಮ ಡ್ಯೂಟಿ ನಾವು ಮಾಡಬೇಕಲ್ಲ," ಎಂದು ದೈನ್ಯದಿಂದ ಏನೋ ಮಾಡಬಾರದ ತಪ್ಪನ್ನು ಮಾಡಿದಂತೆ ಹೇಳಿದರು. "ಪರವಾಗಿಲ್ಲ. ನಿಮ್ಮ ಕೆಲಸ ನೀವು ಮಾಡಬೇಕಲ್ಲ, ಅದರಲ್ಲೇನು," ಎಂದು ಉದಾರವಾಗಿ ನಮ್ಮ ತಪ್ಪನ್ನು ಕ್ಷಮಿಸಿದಂತೆ ಆ ಸಾಹುಕಾರ ಮಾತನಾಡಿದ. ನಾವು ಹಿಂದಿರುಗಿದೆವು. ದಾರಿಯಲ್ಲಿ "ಏನ್ರಿ, ಅವರು ದೊಡ್ಡ ಮನುಷ್ಯರು. ಅವರ ಹತ್ರ ಹೇಗಂದ್ರಾಗೆ ಮಾತಾಡೋಕೆ ಆಗುತ್ತಾ?" ಎಂದು ಹೇಳಿ ನನ್ನ ಮುಖ ನೋಡಿದರು. ನಾನು ಆಕಾಶ ನೋಡಿದೆ.

—ಕೆ. ಪ್ರಾಣೇಶರಾವ್

ಇತ್ತೀಚೆಗೆ ದೆಹಲಿಯಿಂದ ಶ್ರೀನಗರ ಎಕ್ಸ್‌ಪ್ರೆಸ್ಸಿನಲ್ಲಿ ಜಮ್ಮುವಿಗೆ ಪ್ರಯಾಣ ಮಾಡುತ್ತಿದ್ದಾಗ ನಡೆದ ಸಂಗತಿಯಿದು. ದಾರಿಯಲ್ಲಿನ ಸ್ಟೇಷನ್ನೊಂದರಲ್ಲಿ ರೈಲು ನಿಂತಾಗ ಅಂಗವಿಕಲನೊಬ್ಬ ನಮ್ಮ ಕಂಪಾರ್ಟ್‌ಮೆಂಟಿಗೆ ಹತ್ತಿದ. ಸರಿ, ಇನ್ನೇನು ಭಿಕ್ಷೆಗಾಗಿ ಹಾಡು ಪ್ರಾರಂಭವಾಗುತ್ತದೆಂದೇ ತೀರ್ಮಾನಿಸಿದೆವು. ಆದರೆ ನಡೆದದ್ದೇ ಬೇರೆ. ಆತ, "ಬೂಟ್ ಪಾಲಿಷ್ ಸಾಬ್," ಎಂದು ಹತ್ತಿರ ಬಂದ. ಪೂರ್ತಿಯಾಗಿ ಮಂಡೆ ಹಾಗೂ ಅಂಗೈಯ ಮೇಲೇ ತೆವಳಿಕೊಂಡು ಬಂದ ಆತ, ಪಾಲೀಷಿನ ಸಾಮಾನುಗಳಿದ್ದ ಡಬ್ಬಕ್ಕೆ ಹಗ್ಗ ಕಟ್ಟಿ ಅದನ್ನು ಕೊರಳಿಗೆ ನೇತುಹಾಕಿಕೊಂಡಿದ್ದ. ಅವನನ್ನು ಕಂಡು ಕರುಣೆಯುಂಟಾಗಿ, ಪಾಲಿಷ್ ಮಾಡಿಸಿಕೊಂಡದ್ದಾಯಿತು. "ಕಿತನೇ ದೇನಾ?" (ಎಷ್ಟು ಕೊಡಬೇಕು?) ಎಂದು ಕೇಳಿದಾಗ "ತೀಸ್ ಪೈಸಾ, ಸಾಬ್" (೩೦ ಪೈಸೆ, ಸಾಬ್) ಎಂಬ ಉತ್ತರ ಬಂತು. ಇರಲಿ ಪಾಪ ಎಂದು ಎಂಟಾಣೆಯ ಬಿಲ್ಲೆಯನ್ನು ಕೈಗಿತ್ತಾಗ ೨೦ ಪೈಸೆ ಚಿಲ್ಲರೆಗಾಗಿ ಜೇಬು ತಡಕಾಡಿದ. "ಇರಲಿ ಪರವಾಗಿಲ್ಲ, ತೆಗೆದುಕೊ," ಎಂದು ಹೇಳುವಷ್ಟರಲ್ಲಿ, ಅವನಿಗೆ ೨೦ ಪೈಸೆ ಸಿಕ್ಕಿತು. ಸಾಲದ್ದಕ್ಕೆ, "ಕಾಮ್ ತೀಸ್ ಪೈಸಾ ಕಾ ಹೈ, ಸಾಬ್," (ಕೆಲಸ ೩೦ ಪೈಸದ್ದು ಸಾಬ್) ಎಂದು ಹೇಳಿ, ಕಾಸನ್ನು ಸೀಟಿನ ಮೇಲಿಟ್ಟು, ಒಂದು ಸಲಾಮ್ ಹೊಡೆದು, ನಮ್ಮ ಉತ್ತರಕ್ಕೂ ಕಾಯದೆ, ಪಕ್ಕದ ಸೀಟಿನ ಕಡೆ ಹೊರಟೇಹೋದ!

ಒಂದು ಕ್ಷಣ ನಮ್ಮ ಕಣ್ಣನ್ನು ನಾವೇ ನಂಬಲಾಗಲಿಲ್ಲ. ಕೈಕಾಲುಗಳೆರಡೂ ಗಟ್ಟಿಮುಟ್ಟಾಗಿದ್ದರೂ ಭಿಕ್ಷೆಗಾಗಿ ಕೈ ನೀಡುವವರನ್ನೇ ಹೆಚ್ಚಾಗಿ ಕಾಣುವ ನಮಗೆ, ಕಾಲು ಸ್ವಾಧೀನವಿಲ್ಲದಿದ್ದರೂ ಸಹ ಕೆಲಸ ಮಾಡಿ ಸಂಪಾದಿಸಿಬೇಕೆಂಬ ಮನೋಭಾವವುಳ್ಳ, ಅದರಲ್ಲೂ ತನ್ನ ಕೆಲಸದ ಬೆಲೆ ಎಷ್ಟೋ ಅಷ್ಟನ್ನೇ ತೆಗೆದುಕೊಳ್ಳಬೇಕೆಂಬಷ್ಟು ಸ್ವಾಭಿಮಾನವುಳ್ಳ ಈತನನ್ನು ನೋಡಿ ಈಗಿನ ಪ್ರಪಂಚದಲ್ಲಿ ಇಂತಹ ಜನರು ಇನ್ನೂ ಇದ್ದಾರೇನು ಎನಿಸದಿರಲಿಲ್ಲ.

—ಬೃಂದಾ ಎನ್. ರಾವ್

ವಸಂತ ಗುಮಾಸ್ತೆ



# ಜನಸಂಖ್ಯಾ ಸಮಸ್ಯೆ

ಜನವರಿ 'ಕಸ್ತೂರಿ'ಯಲ್ಲಿ ಪ್ರೊ. ಗುಮಾಸ್ತೆಯವರ 'ಜನಸಂಖ್ಯೆಯ ಸಮಸ್ಯೆ : ಆದಿಯೇ ? ಮತ್ತು ಅಂತ್ಯ ?' ಎಂಬ ಲೇಖನದ ಮೂಲ ಗ್ರಹಿಕೆಯನ್ನು ಪ್ರಶ್ನಿಸಿ ಫೆಬ್ರುವರಿ ಸಂಚಿಕೆಯಲ್ಲಿ ಶ್ರೀ ಪಿ. ಎಸ್. ಮುರಿಭಟ್ಟರು ಬರೆದರು. ಅವರು ಎತ್ತಿದ ಕೆಲ ಅಂಶಗಳಿಗೆ ಇಲ್ಲಿ ಪ್ರೊ. ಗುಮಾಸ್ತೆ ಉತ್ತರಿಸಿದ್ದಾರೆ. ವಿಷಯದ ಎರಡೂ ಬದಿಯಿಂದ ವಿಚಾರಗಳನ್ನು ಹೇಳಿದಂತಾಗಿರುವುದರಿಂದ ಈ ಲೇಖನದಿಂದಲೇ ಈ ಚರ್ಚೆಯನ್ನು ಮುಕ್ತಾಯಗೊಳಿಸುತ್ತಿದ್ದೇವೆ.

–ಸಂಪಾದಕ

ಶ್ರೀ ಮುರಿಭಟ್ಟರ ಉತ್ತರವನ್ನು ಓದಿದೆ. ಅವರು ತಮ್ಮ ಉತ್ತರದಲ್ಲಿ ಉಪಸ್ಥಿತಪಡಿಸಿದ ಕೆಲ ಅಂಶಗಳ ಬಗ್ಗೆ ನಾನು ನನ್ನ ನಿಲುವನ್ನು ವಿಶದಪಡಿಸಬಯಸುವೆ.

ಭಾರತ ಮತ್ತು ಇತರ ಬಡ ದೇಶಗಳಲ್ಲಿಯ ದಾರಿದ್ರ್ಯದ ಕಾರಣ ಜನಸಂಖ್ಯೆಯ ದಟ್ಟಣೆಯೋ ಅಲ್ಲವೋ ಎಂಬ ಬಗ್ಗೆ ನಾನು ನನ್ನ ಲೇಖನದಲ್ಲಿ ಒಂದು ವಾದವನ್ನು ಪ್ರತಿಪಾದಿಸಿರುವೆ. ಶ್ರೀ ಮುರಿಭಟ್ಟರೂ ತಮ್ಮ ಉತ್ತರದ ಕೊನೆಯಲ್ಲಿ ಬಡತನದ ಕಾರಣ ಜನಸಂಖ್ಯೆಯೇ 'ಆದಿ ಮತ್ತು ಅಂತ್ಯವಲ್ಲ' ಎಂದು ಭಾವಿಸುತ್ತಾರೆ. ಇದರ ಅರ್ಥ ಜನಸಂಖ್ಯೆಯನ್ನು ಹೊರತುಪಡಿಸಿ ಇನ್ನೂ ಕೆಲ ಕಾರಣಗಳಿವೆ ಎಂದು ಅವರು ಒಪ್ಪುತ್ತಾರೆ ಎಂದಾಯಿತು. ನನ್ನ ಲೇಖನ ಈ 'ಉಳಿದ' ಕಾರಣಗಳನ್ನು ಎತ್ತಿ ತೋರಿಸುವುದಾಗಿತ್ತು. ನನ್ನ ಪ್ರಕಾರ ನಾವು ಇಂದು ಅನುಭೋಗಿಸುತ್ತಿರುವ ಬಡತನದ ಸುಮಾರು ಏಕಮೇವ ಕಾರಣ ಪಶ್ಚಿಮದ ದೇಶಗಳ ರಾಜಕೀಯ ಮತ್ತು ಆರ್ಥಿಕ ಸಾಮ್ರಾಜ್ಯವಾದವಾಗಿದೆ— ಜನಸಂಖ್ಯೆಯಲ್ಲ. ಅರ್ನೆಸ್ಟ್-ಮ್ಯಾಂಡೆಲ್ ಎಂಬುವವರು ತಮ್ಮ Marxist Economic Theory ಎಂಬ ಗ್ರಂಥದಲ್ಲಿ ಈ ಸಂಗತಿಯನ್ನು ವಿಪುಲ ಅಂಕಿ ಅಂಶಗಳಿಂದ ಪುಷ್ಟೀಕರಿಸಿದ್ದಾರೆ. ಅವರ ಪುಸ್ತಕದಲ್ಲಿಯ ೧೩ನೆಯ ಪ್ರಕರಣದಲ್ಲಿಯ ಕೆಲ ಉದ್ಧರಣೆಗಳನ್ನು ನಾನು ಕೊಡಬಯಸುವೆ.

"ಜನದಟ್ಟಣೆಯ ಮೇಲೆ ಆರ್ಥಿಕ ಪ್ರಗತಿ ಅವಲಂಬಿಸಿರುತ್ತದೆ ಎಂಬ ಮತ ನಿರಾಧಾರವಾದದ್ದು...೧೮೫೦ ರಲ್ಲಿ ಭಾರತ ಮತ್ತು ಜಪಾನ ಇವೆರಡೂ ದೇಶಗಳು ಹಿಂದುಳಿದವಾಗಿದ್ದವು. ಈ ಎರಡು ದೇಶಗಳಲ್ಲಿ ಮೊದಲು ಔದ್ಯೋಗೀಕೃತವಾದ ದೇಶ (ಜಪಾನ)ದಲ್ಲಿ ಇನ್ನೂ ವರೆಗೂ ಹಿಂದುಳಿದ ದೇಶ(ಭಾರತ)ಕ್ಕಿಂತ ಹೆಚ್ಚು ಜನದಟ್ಟಣೆ ಇತ್ತು." ಎಂದಿದ್ದಾರವರು.

ನಮ್ಮ ಭಾರತದ ಬಗ್ಗೆ ಇನ್ನೊಂದೆಡೆ ಮತ್ತು ಪಾಟೀಲ್, "ವರ್ಣ, ಜಾತ್ಯತೆ, ಭೌಗೋಳಿಕ ಸ್ಥಾನ, ಧರ್ಮ ಇವ್ಯಾವುಗಳೊಂದೂ ಭಾರತದ ಬಡತನಕ್ಕೆ ಕಾರಣವಲ್ಲ. ಭಾರತವೇಕೆ ಬಡದು ಈ ದೇಶದಲ್ಲಿ ಸಾಮ್ರಾಜ್ಯವಾದಿ ಬಂಡವಾಳಶಾಹಿ ದೇಶವೊಂದು ಬೇರೂರಿ ಅದನ್ನು ಪರಾಕ್ರಾಂತ ಮಾಡಿತು ಹಾಗೂ ಪಕ್ಕಾ ಮಾಲು ಉತ್ಪಾದಿಸುತ್ತಿದ್ದ ದೇಶವಾಗಿದ್ದ ಭಾರತವನ್ನು ಕಚ್ಚಾ ಮಾಲು ಉತ್ಪಾದಿಸುವ ದೇಶವಾಗಿ ಪರಿವರ್ತಿಸಿದ್ದು (ಇದಕ್ಕೆ) ಕಾರಣ," ಎಂದು ಹೇಳುತ್ತಾರೆ.

ಈ ಮೇಲಿನ ಉದ್ಧರಣೆಗಳಿಂದ ಶ್ರೀ ಮರಿಭಟ್ಟರು ತಮ್ಮ ಲೇಖನದಲ್ಲಿ (ವಿಶೇಷತಃ ಪುಟ ೧೧೦ರಲ್ಲಿ) ಉಪಸ್ಥಿತಗೊಳಿಸಿದ ಸವಾಲುಗಳಿಗೆ ಸಮರ್ಪಕ ಉತ್ತರ ಸಿಗುತ್ತದೆ ಎಂದು ನಾನು ನಂಬುವೆ.

ಶ್ರೀ ಮರಿಭಟ್ಟರು ೧೮ ನೆಯ ಶತಮಾನದ ಅಂತ್ಯದಲ್ಲಿ ಮಾಲ್ಥಸ್ ಮಾಡಿದ ತಪ್ಪನ್ನು ೨೦೦ ವರ್ಷಗಳ ನಂತರ ೨೦ನೆಯ ಶತಮಾನದ ಅಂತ್ಯದಲ್ಲಿಯೂ ಮಾಡುತ್ತಿರುವುದು ಕಂಡು ಸೋಜಿಗವೆನ್ನಿಸುತ್ತದೆ. ದೇಶದ ಜನದಟ್ಟಣೆಯನ್ನು ಕೇವಲ ನೆಲದ ತುಲನೆಯಲ್ಲಿ ಮಾತ್ರ ಮಾಡುವುದೆ ? ಭಾರತದ ಪ್ರತಿಯೊಬ್ಬ ನಾಗರಿಕನು ಹೆಮ್ಮೆಯಿಂದ ಪುಲಕಿತನಾಗುವಷ್ಟು ಭೂಗತ ಸಂಪನ್ಮೂಲಗಳು ನಮ್ಮಲ್ಲಿ ಇರುವವು. ಬಡತನವನ್ನು ಹಿಂಗಿಸಲು ಈ ಸಂಪನ್ಮೂಲಗಳನ್ನೇಕೆ ಉಪಯೋಗಿಸಬಾರದು ? ಶ್ರೀ ಮರಿಭಟ್ಟರ ಲೇಖನದಲ್ಲಿ ನೆಲದ ವಿನಾ ಇನ್ನುಳಿದ ಸಂಪನ್ಮೂಲಗಳ ಬಗ್ಗೆ ಒಂದಕ್ಷರದ ಉಲ್ಲೇಖವೂ ಇಲ್ಲ! ಆರ್ಥಿಕ ಪ್ರಗತಿಗೆ ಜನಸಂಖ್ಯೆಯ ತುಲನೆಯಲ್ಲಿ ನೆಲದ ಲಭ್ಯತೆಯೇ ಅತ್ಯಂತ ನಿರ್ಣಾಯಕ ಸಂಗತಿಯಾಗಿದ್ದರೆ ಇಂದು ಆಫ್ರಿಕದಲ್ಲಿಯ ದೇಶಗಳು ಜಗತ್ತಿನಲ್ಲಿ ಅತಿ ಹೆಚ್ಚು ಶ್ರೀಮಂತ ರಾಷ್ಟ್ರಗಳಾಗಿರುತ್ತಿದ್ದವು. ಆಫ್ರಿಕದಲ್ಲಿ ಅಲ್ಲಿಯ ಜನಸಂಖ್ಯೆಯ ತುಲನೆಯಲ್ಲಿ ವಿಪುಲ ನೆಲವಿದೆ (ನನ್ನ ಲೇಖನ-ಕೋಷ್ಟಕ-೧). ಆದರೂ ಅಲ್ಲಿಯ ದೇಶಗಳು ಜಗತ್ತಿನಲ್ಲಿ ಅತಿ ಬಡ ದೇಶಗಳಾಗಿವೆ. ಇದರ ಶತಮಾನ ಕಾಲ ಈ ದೇಶವನ್ನು ಪರಕೀಯ ಜನರು ಕೊಳ್ಳೆ ಹೊಡೆದುದಾಗಿದೆ.

ಇನ್ನು ನಮ್ಮ ದೇಶಕ್ಕೆ ಹೊರಳೋಣ. ಶ್ರೀ ಮರಿಭಟ್ಟರ ಪ್ರಕಾರವೇ ನಮ್ಮ ರೈತ 'ದಿನಂದಿನದ ಹೊಟ್ಟೆಪಾಡಿಗೆ ಗತಿ ಇಲ್ಲದ'ವನಾಗಿದ್ದಾನೆ. ಅವನನ್ನು ಹೊಟ್ಟೆ ಪಾಡಿಗೆ ಇಲ್ಲದವನಂತೆ ಮಾಡಿದವರಾರು? ನಾನು ನನ್ನ ಲೇಖನದಲ್ಲಿ ಹೇಳಿದಂತೆ, ಭಾರತದಲ್ಲಿಯ ಶ್ರೀಮಂತರು ಬಡವರನ್ನು ಶೋಷಿಸಿ ಜೀವಿಸುತ್ತಾರೆ. ಹಳ್ಳಿಗಳಲ್ಲಿಯೂ ಬಡವರ ಶೋಷಣೆ. ಈ ಶೋಷಣೆಯ ರೀತಿಯನ್ನು ತಡೆಗಟ್ಟಬೇಕು. ಜನಸಂಖ್ಯೆಯ ಬೆಳವಣಿಗೆಯನ್ನು ತಡೆಗಟ್ಟಿ ಬಡತನವನ್ನು ನಿವಾರಿಸಲು ಹೋಗುವದೆಂದರೆ ಹಾವು ಕೊಲ್ಲಲು ಹುತ್ತು ಬಡಿದಂತಾಗುವದು.

ಶ್ರೀ ಮರಿಭಟ್ಟರು ನನ್ನ ಕೆಲ ಅಂಕಿಸಂಖ್ಯೆಗಳನ್ನು ಶಂಕಿಸಿದ್ದಾರೆ. ಉದಾಹರಣೆಗಾಗಿ, ನನ್ನ ಲೇಖನದಲ್ಲಿಯ ಕೋಷ್ಟಕ ೪ ರ ಅಂಕಿಸಂಖ್ಯೆಗಳು ಶುದ್ಧ ತಪ್ಪು ಎನ್ನುತ್ತಾರೆ. ನಾನು ಈ ಅಂಕಿಸಂಖ್ಯೆಗಳನ್ನು ಕಲ್ಪನೆಯಿಂದ ಬರೆಯುವದಂತೂ ಸಾಧ್ಯವಿಲ್ಲ. ಅವುಗಳನ್ನು Population and Economic Develoment* ಎಂಬ ಒಂದು ಲೇಖನದಿಂದ ತೆಗೆದುಕೊಂಡಿರುವೆ ಮತ್ತು ಪ್ರಸ್ತುತ ಲೇಖಕ ಆ ಅಂಕಿಸಂಖ್ಯೆಗಳನ್ನು ಸಂಯುಕ್ತ ರಾಷ್ಟ್ರಸಂಘದ Demographic Year Book 1957 ದಿಂದ ತೆಗೆದುಕೊಂಡಿದ್ದಾರೆ. ಇದರ ಮೇಲಿಂದ ನನ್ನ ಅಂಕಿಸಂಖ್ಯೆಗಳು ಸರಿ. ತಪ್ಪಿನ ಬಗ್ಗೆ ಶ್ರೀ ಮರಿಭಟ್ಟರೇ ವಿಚಾರಿಸಲಿ. ಇನ್ನೊಂದೆಡೆ ಕೂಡ ಶ್ರೀಯುತರು ನನ್ನ ಅಂಕಿ ಅಂಶಗಳನ್ನು ಶಂಕಿಸಿದ್ದಾರೆ. (ಉಳಲ್ಪಡುವ ನೆಲದ ಅನುಪಾತದ ಬಗ್ಗೆ ಅವರ ಉತ್ತರ ಪುಟ ೮೪). ಈ ಅಂಕಿಸಂಖ್ಯೆಗಳಿಗೆ ಭಾರತೀಯ ಅರ್ಥವ್ಯವಸ್ಥೆಯ ಬಗ್ಗೆ ಈಚೆಗೆ ಬರೆಯಲಾದ ಯಾವುದೇ ಪುಸ್ತಕವೂ ಆಧಾರವಾಗಬಹುದು.

* Population and Economic Development by Jagannath Pathy—Economic and Political Weekly—ಜುಲೈ ೨೬ ೧೯೭೬-ಪುಟ ೧೧೨೬

ಪ್ರಸ್ತುತ ನಾನು ಶ್ರೀ ರುದ್ರ ದತ್ತ ಮತ್ತು ಮತ್ತು ಶ್ರೀ ಕೆ. ಪಿ. ಎಂ. ಸುಂದರಂ ಅವರ Indian Economy ಎಂಬ ಪುಸ್ತಕ (೧೯೭೭ ಮುದ್ರಣ)ದಿಂದ ತೆಗೆದುಕೊಂಡಿರುವೆ.

ಶ್ರೀಯುತರು ಶ್ರಮಿಕರ ಅಂಚಿನ ಉತ್ಪಾದಕತೆ ಶೂನ್ಯವಿರುತ್ತದೆ ಎಂಬ ಕಲ್ಪನೆಯನ್ನು ಮಂಡಿಸಿರುವರು. ಈ ವಾದವನ್ನು ಅವರು ಮಾರು ವೇಷದ ನಿರುದ್ಯೋಗದ ಮೇಲೆ ಆಧರಿಸಿರುವದು ಸ್ಪಷ್ಟವಾಗಿದೆ. ಆದರೆ ಮಾರುವೇಷದ ನಿರುದ್ಯೋಗದ ಸಿದ್ಧಾಂತದ ತತ್ತ್ವವನ್ನು ಎಚ್. ಮಿಂಟ್ ಎಂಬುವವರು The Economics of The Developing Countries ಎಂಬ ಪುಸ್ತಕದಲ್ಲಿ (ಪುಟ ೮೭-೮೯) ತಪ್ಪು ಎಂದು ತೋರಿಸಿಕೊಟ್ಟಿರುವರು.

ನಮ್ಮ ಬಡತನಕ್ಕೆ ಪಶ್ಚಿಮದ ರಾಷ್ಟ್ರಗಳು ಮಾಡಿದ ಶೋಷಣೆಯೇ ಕಾರಣ ಎಂದು ಪ್ರತಿಪಾದಿಸಿ ನಮ್ಮಲ್ಲಿ ದೇಶಾಭಿಮಾನದ 'ಕಿಚ್ಚೆಬ್ಬಿಸಿದ್ದಾರೆ' ಎಂದು ಶ್ರೀ ಮರಿಭಟ್ಟರು ನನ್ನನ್ನು ಆಪಾದಿಸಿದ್ದಾರೆ. ನಮ್ಮ ದೇಶಬಾಂಧವರಲ್ಲಿ ದೇಶಾಭಿಮಾನದ ಕಿಚ್ಚೆಬ್ಬಿಸುವದು ತಪ್ಪೇ? ಅದು ಅಪರಾಧವೇ? ಹಿಂದುಳಿದ ದೇಶಗಳ ಆರ್ಥಿಕ ಪ್ರಗತಿಗೆ ಅಡ್ಡಗಲ್ಲಾಗಿರುವುದು ಜನದಟ್ಟಣೆಯಲ್ಲ; ಅವುಗಳಲ್ಲಿ ಕಂಡುಬರುವ ದೇಶಾಭಿಮಾನದ ಕೊರತೆಯೇ ಆಗಿದೆ. ಆರ್ಥಿಕ ಪ್ರಗತಿಗಾಗಿ ದೇಶಾಭಿಮಾನದ ಅವಶ್ಯಕತೆಯನ್ನು ಪ್ರತಿಪಾದಿಸುತ್ತ ಡಬ್ಲ್ಯು. ಡಬ್ಲ್ಯು. ರುಸ್ಟೊವ್ ಎಂಬುವವರು, "ಪ್ರತಿಕ್ರಿಯಾತ್ಮಕ ರಾಷ್ಟ್ರಾಭಿಮಾನವು ಹಿಂದುಳಿದ ದೇಶಗಳನ್ನು ಆಧುನೀಕರಣದತ್ತ ಒಯ್ಯುವ ಒಂದು ತೀರ ಮಹತ್ವದ ಹೆಜ್ಜೆಯಾಗಿದೆ," ಎಂದು ಹೇಳಿದ್ದಾರೆ.* ಜರ್ಮನಿ, ರಶಿಯ, ಜಪಾನ ಮತ್ತು ಚೀನ ದೇಶಗಳಲ್ಲಿ ಆರ್ಥಿಕ ಪ್ರಗತಿಯಾದದ್ದು [illegible] ಕೈ ಚೆಲ್ಲಿ ಕುಳಿತದ್ದರಿಂದ ಅಲ್ಲ-ಪ್ರಜ್ವಲ ದೇಶಾಭಿಮಾನ ಮತ್ತು ವಿದೇಶಗಳ ಬಗೆ ಕಟುತೆ [illegible] ಅತಿ ಆರ್ಥಿಕ ಪ್ರಗತಿಯಾಗಿದೆ. ಒಂದು ಹನಿ ತೈಲ ಮತ್ತು ಒಂದು ಗ್ರ್ಯಾಮ್ ಕಬ್ಬಿಣವ ಅದಿರು ಸಹ ಇಲ್ಲದ ಜಪಾನ ಇಂದು ಜಗತ್ತಿನಲ್ಲಿ ಅತಿ ಹೆಚ್ಚು ಗತಿಯಿಂದ ಆರ್ಥಿಕ ಪ್ರಗತಿ ಸಾಧಿಸಿದ್ದು ಅಲ್ಲಿಯ ಜನರ ದೇಶಾಭಿಮಾನದಿಂದ. ತದ್ವಿರುದ್ಧವಾಗಿ ಸುಮಾರು ಎಲ್ಲ ಖನಿಜಗಳನ್ನೂ ಹೊಂದಿಯೂ, ಪ್ರಗತಿಗೆ ಪ್ರಚೋದಕವಾದಂಥ ಅಂಶ ದೇಶಾಭಿಮಾನ ನಮ್ಮಲ್ಲಿ ಶೂನ್ಯವಾಗಿರುವುದರಿಂದ. ಭಾರತ ಹಿಂದುಳಿದಿದೆ.

ನಾನು 'ಸುಶ್ರಾವ್ಯ ಅಸತ್ಯ' ವನ್ನು ಸುತರಾಮ್ ಹೇಳಿಲ್ಲವಾದರೂ ಶ್ರೀ ಮರಿಭಟ್ಟರ ಈ ಆಪಾದನೆಯನ್ನು ಒಂದು ಕ್ಷಣ ಅವರ ಸಮಾಧಾನಕ್ಕಾಗಿ ಒಪ್ಪೋಣ. ಶ್ರೀ ಗುನ್ನರ್ ಮಿರ್ಡಲರು ತಮ್ಮ Asian Drama ಪುಸ್ತಕದಲ್ಲಿ ಪಾಕಿಸ್ತಾನದ ಯೋಜನಾ ಆಯೋಗದ ಒಬ್ಬ ಅಧಿಕಾರಿಯ ಹೇಳಿಕೆಯನ್ನು ಉದ್ಧರಿಸಿದ್ದಾರೆ. ಅದು ಇಂತಿದೆ: "Hope builds and fact destroys." ನಮ್ಮಲ್ಲಿ ಜನದಟ್ಟಣೆಯ ಸಮಸ್ಯೆ ಇದ್ದರೂ ಅದನ್ನು ಮರುಕಳಿಸಬಾರದು. ಏಕೆಂದರೆ, ಈ ಸಂಗತಿಗಳು ಜನತೆಯನ್ನು ವಿಹ್ವಲಪಡಿಸುತ್ತವೆ. ಆದರಿಂದ ಅವರ ಉತ್ಪಾದಕತೆಯ ಮೇಲೆ ಘಾತಕಾರಕ ಪರಿಣಾಮವಾಗುತ್ತದೆ. ಇದು ಉಚಿತವೆ?

ಶ್ರೀ ಮರಿಭಟ್ಟರು ನಾನು ಹೇಳಿದ್ದು ಹೊಸತೇನೂ ಅಲ್ಲವೆಂದು ಬಾರಿ ಬಾರಿ ಅನ್ನುತ್ತಾರೆ. ನಾನು ಈ ಲೇಖನ ಬರೆಯುವಾಗ ನನ್ನೆದುರು ಇದ್ದ ವಾಚಕ ಸರ್ವಸಾಮಾನ್ಯ ವಾಚಕನಾಗಿದ್ದ. ಸರ್ವಸಾಮಾನ್ಯ ವಾಚಕರೇ ನನ್ನ ಲೇಖನ ಕೇವಲ ಹಳೆಯ ಕಂತೆಯ ಪುನರುಚ್ಚರಣೆಯೇ ಎಂಬ ಬಗ್ಗೆ ನಿರ್ಧರಿಸಬೇಕು. ✡

---

* W. W. Rostow—The Stages of Economic Growth ಪುಟ ೨೬–೩೦ ಗಳ ಸಾರಾಂಶ

# ಓಮಗ್ರಂಥಿ: ದೇಹದ ಮಹಾರಕ್ಷಕ ಅಂಗ

ಎಸ್. ಬಿ. ವಸಂತಕುಮಾರ

ಒಂದು ರೀತಿಯಲ್ಲಿ ನಾವು ಹೋರಾಟಮಯ ವಾತಾವರಣದಲ್ಲಿ ವಾಸಿಸುತ್ತಿದ್ದೇವೆ ಎನ್ನುವುದು ಅಕ್ಷರಶಃ ಸತ್ಯ. ನಮ್ಮ ಶರೀರದ ಮೇಲೆ ದಾಳಿಮಾಡಲು ಕೋಟ್ಯಾನುಕೋಟಿ ಸೂಕ್ಷ್ಮಾಣುಜೀವಿಗಳು ನಿರಂತರವಾಗಿ ಯತ್ನಿಸುತ್ತಲೇ ಇರುತ್ತವೆ. ಇವುಗಳಿಂದ ನಮ್ಮನ್ನು ರಕ್ಷಿಸುವ ಕೆಲಸ ಓಮಗ್ರಂಥಿ(Thymus)ಯದು. ನಮ್ಮ ದೇಹದ ರಕ್ಷಣಾ ಸಿಬ್ಬಂದಿಯ ದಂಡನಾಯಕನಂತಿರುವ ಇದರ ಕಾರ್ಯ ಚಟುವಟಿಕೆಗಳು ತುಂಬಾ ಸ್ವಾರಸ್ಯಕರ.

ಓಮಗ್ರಂಥಿ ಓಮಗಿಡದ ಎಲೆಯಂತಿರುವ ಎರಡು ಹಾಲೆಗಳುಳ್ಳ ಅಂಗ. ಎದೆಗೂಡಿನ ಮೇಲ್ತುದಿಯಲ್ಲಿರುವ ಈ ಗ್ರಂಥಿಯ ಮುಂದೆ ಹಲಗೆಯ ತುಂಡಿನಂತಿರುವ ಮೂಳೆ ಮತ್ತು ಪಕ್ಕೆಲುಬುಗಳ ಮೆಲ್ಲೆಲುವುಗಳಿವೆ; ಹಿಂದುಗಡೆ ಹೃದಯವನ್ನಾವರಿಸಿರುವ ಹೃದಯದ ಬಹಿರಾವರಣ (Pericardium), ಶ್ವಾಸಕೋಶಗಳ ಅಂಚುಗಳು ಮತ್ತು ಗುಂಡಿಗೆಯಿಂದ ಹೊರಡುವ ಹಾಗೂ ಗುಂಡಿಗೆಯನ್ನು ತಲಪುವ ರಕ್ತನಾಳಗಳಿವೆ (ಚಿತ್ರ ನೋಡಿ). ಉಳಿದೆಡೆಗಳಲ್ಲಿ ಓಮಗ್ರಂಥಿಯ ಸುತ್ತ ಕೊಬ್ಬೂತಕ ಇದೆ.

ಮಗು ತಾಯಿಯ ಹೊಟ್ಟೆಯೊಳಗಿರುವಾಗ ಅದರ ಶ್ವಾಸಕೋಶಕ್ಕಿಂತಲೂ ದಪ್ಪನಾಗಿರುವ ಓಮಗ್ರಂಥಿ ನಸುನೇರಳೆ ಬಣ್ಣಕ್ಕಿರುತ್ತದೆ. ಜೀವನ ಪರ್ಯಂತ ತೂಕ, ಗಾತ್ರ, ಬಣ್ಣ ಮುಂತಾದುವುಗಳಲ್ಲಿ ಒಂದೇ ಆಗಿರದೆ ಕಾಲಕಾಲಕ್ಕೆ ಬದಲಾಗುತ್ತಾ ಹೋಗುವ ಈ ಗ್ರಂಥಿ ಮಗು ಹುಟ್ಟಿದಾಗ ೧೦–೧೫ ಗ್ರಾಂ ತೂಕವಿದ್ದು ಹುಡುಗ ಅಥವಾ ಹುಡುಗಿ ಹರೆಯಕ್ಕೆ ಬರುವ ತನಕ ಬೆಳೆಯುತ್ತಾ ಹೋಗಿ ೩೦–೪೦ ಗ್ರಾಂ ತೂಗುತ್ತದೆ. ವಯಸ್ಸಿಗೆ ಬಂದ ಹಾಗೆ ಓಮಗ್ರಂಥಿ ಕರಗುತ್ತಾ ಹೋಗುತ್ತದೆ. ಸುಮಾರು ೩೦–೪೦ ವರ್ಷಗಳ ವೇಳೆಗೆ ಕೇವಲ ೧೦ ಗ್ರಾಂ ತೂಗುವ ಈ ಗ್ರಂಥಿಯ ತುಂಬ ಕೊಬ್ಬೂತಕ ತುಂಬಿಕೊಂಡು ಹಳದಿ ಬಣ್ಣಕ್ಕೆ ಬರುತ್ತದೆ. ಮನುಷ್ಯ ಬದುಕಿದ್ದಂತೆಯೇ ನಶಿಸಿ ಹೋಗುವ ಮಟ್ಟಕ್ಕೆ ಬದಲಾವಣೆಗೊಳಗಾಗುವ ಓಮಗ್ರಂಥಿ ದೇಹದ ರಕ್ಷಣೆ ಮಾಡುತ್ತದೆಂದರೆ ಯಾರಿಗೂ ಸೋಜಿಗವಾಗದಿರದು!

ನಮ್ಮ ದೇಹದಲ್ಲಿ ನಖಶಿಖಾಂತವಾಗಿ ಹಬ್ಬಿರುವ ರಕ್ತನಾಳಗಳ ಜೊತೆಗೆ ದುಗ್ಧರಸನಾಳಗಳೂ (Lymphatics) ಇವೆ. ದುಗ್ಧರಸ ವ್ಯವಸ್ಥೆಯಲ್ಲಿ ದುಗ್ಧರಸನಾಳಗಳು, ದುಗ್ಧರಸ ಗ್ರಂಥಿಗಳು ಪ್ರಧಾನವಾಗಿವೆ. ಇವಕ್ಕೆ ಸಂಬಂಧಪಟ್ಟ ಇತರ ಭಾಗಗಳೆಂದರೆ ಗಂಟಲಿನಲ್ಲಿರುವ ಮೇಡಿಕೆ (Tonsil), ಕರುಳುಗಳ ಗೋಡೆ-

ಯಲ್ಲಿರುವ ದುಗ್ಧರಸ ಗಂಟುಗಳು, ತೊರಳೆ (Spleen) ಮುಂತಾದವು. ದುಗ್ಧರಸನಾಳಗಳನ್ನು ಬಿಟ್ಟು ಉಳಿದೆಲ್ಲವೂ ದುಗ್ಧರಸ ಕಣಗಳೆಂಬ ವಿಶೇಷ ಜೀವಕಣಗಳನ್ನು ಉತ್ಪಾದಿಸುತ್ತವೆ. ಓಮಗ್ರಂಥಿ ಒಂದು ವಿಶಿಷ್ಟ ರೀತಿಯ ರಸವನ್ನು ಉತ್ಪಾದಿಸಿ ಅದು ರಕ್ತನಾಳಗಳ ಮೂಲಕ ದೇಹದ ಎಲ್ಲೆಡೆಯೂ ತಲಪುವಂತೆ ಮಾಡುತ್ತದೆ. ಈ ರಸಕ್ಕೆ ಥೈಮೋಸಿನ್ ಎಂದು ಹೆಸರು. ಮೇಲೆ ಹೇಳಿದ ದುಗ್ಧರಸ ಭಾಗಗಳನ್ನು ತಲುಪಿದ ರಸ ಅವುಗಳಿಂದ ದುಗ್ಧರಸಕಣಗಳು ಉತ್ಪತ್ತಿಯಾಗುವಂತೆ ಮಾಡುತ್ತದೆ. ಹೀಗೆ ಓಮಗ್ರಂಥಿ ಇತರ ಭಾಗಗಳನ್ನು ಕಾರ್ಯೋನ್ಮುಖವಾಗಿಸುವುದಲ್ಲದೆ ದುಗ್ಧರಸಕಣಗಳನ್ನೂ ಉತ್ಪಾದಿಸುತ್ತದೆ. ಹೀಗೆ ಉತ್ಪಾದಿತವಾದ ದುಗ್ಧರಸಕಣಗಳು ರಕ್ತ ಪ್ರವಾಹದಲ್ಲಿ ಸೇರಿಕೊಳ್ಳುತ್ತವೆ.

ನಿರಂತರವಾಗಿ, ಜೀವವಿರುವವರೆಗೂ ದೇಹದ ತುಂಬಾ ಪರಿಚಲಿಸುತ್ತಿರುವ ರಕ್ತದೊಳಕ್ಕೆ ಸೇರಿಕೊಂಡು ತಾವೂ ಸುತ್ತತೊಡಗುವ ಈ ದುಗ್ಧರಸಕಣಗಳ ಕೆಲಸವಾದರೂ ಏನು? ನಾವು ಉಸಿರಾಡುವ ಗಾಳಿಯಲ್ಲಿ, ಸೇವಿಸುವ ಆಹಾರದಲ್ಲಿ ಹಾಗೂ ಕುಡಿಯುವ ನೀರಿನಲ್ಲಿ ನಮಗರಿವಿಲ್ಲದೆಯೋ ಅಥವಾ ಅನಿವಾರ್ಯ ಕಾರಣಗಳಿಂದಲೋ ಹಾನಿಕಾರಕ ವಿಷಕಣಗಳು (Viruses) ಹಾಗೂ ಏಕಾಣುಜೀವಿಗಳಂತಹ ಹಾನಿಕರ ವಸ್ತುಗಳು ದೇಹದೊಳಕ್ಕೆ ಪ್ರವೇಶ ಮಾಡುತ್ತವೆ. ಅನಂತರ ತಮ್ಮ ಸಂತಾನಾಭಿವೃದ್ಧಿಯನ್ನು ಭರದಿಂದ ಮಾಡತೊಡಗುತ್ತವೆ. ಈ ಸೂಕ್ಷ್ಮಾಣುಜೀವಿಗಳನ್ನು ಹಾಗೇ ಬಿಟ್ಟರೆ ಇಡೀ ದೇಹವನ್ನೇ ಆವರಿಸಿ ಕೊನೆಗೆ ಪ್ರಾಣಾಂತಿಕವಾಗುತ್ತವೆ. ಆದರೆ ಸಿಪಾಯಿಗಳಂತೆ ದೇಹವನ್ನು ರಕ್ಷಿಸುತ್ತಿರುವ ದುಗ್ಧರಸಕಣಗಳು ಅವುಗಳನ್ನು ನುಂಗಿ ಆ ಮೂಲಕ ದೇಹಕ್ಕೆ ನಂಜೇರದಂತೆ ನೋಡಿಕೊಳ್ಳುತ್ತವೆ. ದೇಹವನ್ನು ಸೇರುವ ಸಾಂಕ್ರಾಮಿಕ ವಸ್ತುಗಳ ಅಥವಾ ಕ್ರಿಮಿಗಳ ಪ್ರಭಾವ ಮತ್ತು ಪರಿಮಾಣ ದುಗ್ಧರಸಕಣಗಳ ನಿರೋಧಕ ಶಕ್ತಿಯನ್ನು ಮೀರಿದಾಗ (ಉದಾಹರಣೆಗೆ ಹಾವಿನ ವಿಷ) ಸಾವು ಸನ್ನಿಹಿತವಾಗುತ್ತದೆ. ಕಾಲಿಗೆ ಮುಳ್ಳು ಚುಚ್ಚಿದೆ ಎಂದುಕೊಳ್ಳಿ. ಮುಳ್ಳನ್ನು ಹೊರದೆಗೆದರೂ ಅದರ ಮೈಗೆ ಅಂಟಿಕೊಂಡಿದ್ದ ಎಷ್ಟೋ ಸಹಸ್ರಾವಧಿ ವಿಷಾಣುಗಳು ರಕ್ತದ ಮೂಲಕ ದೇಹವನ್ನು ತಲುಪಿ ತಮ್ಮ ದುಷ್ಪರಿಣಾಮ ತೋರಬಹುದು. ಆದರೆ ಹೀಗಾಗಲು ಬಿಡದೆ ರಕ್ತದೊಡನೆ ಸಂಚರಿಸುತ್ತಿರುವ ದುಗ್ಧರಸಕಣಗಳು ಆ ವಿಷಕಾರಕ ವಸ್ತುಗಳ ಪ್ರಭಾವವನ್ನು ನಿಷ್ಕ್ರಿಯಗೊಳಿಸುವ ಪ್ರತಿವಿಷ ವಸ್ತುವನ್ನು ತಯಾರಿಸುತ್ತವೆ. ಇಂತಹ ವ್ಯವಸ್ಥೆಯಲ್ಲಿ ಏನಾದರೂ ಏರುಪೇರಾಗಿದ್ದರೆ ಸಣ್ಣ ಪುಟ್ಟ



ಗಾಯಗಳೂ ಬಾತುಕೊಂಡು ಅನೇಕ ವೇಳೆ ಕಾಲನ್ನೇ ಕತ್ತರಿಸಬೇಕಾದ ಪ್ರಸಂಗ ಬರಬಹುದು. ಹೀಗೆ ಸ್ವಭಾವಜನ್ಯವಾದ ನಿರೋಧಕಶಕ್ತಿಯನ್ನು ದೇಹ ಪಡೆದಿರುವುದಕ್ಕೆ ಓಮಗ್ರಂಥಿಯೇ ಕಾರಣ. ವಯಸ್ಸಾದಂತೆ ಈ ಗ್ರಂಥಿ ಸಣಿಸುತ್ತಾ ಹೋಗಿ ೩೦ ರಿಂದ ೪೦ ವರ್ಷಗಳ ಅವಧಿಯಲ್ಲಿ ಪೂರ್ತಿಯಾಗಿ ಮಾಯವಾಗಿಬಿಡುತ್ತದೆ. ಈ ಅಂಶವನ್ನು ಸುಮಾರು ೩೦೦ಕ್ಕೂ ಹೆಚ್ಚು ಶವಗಳನ್ನು ಪರೀಕ್ಷಿಸಿ ನಾನು ಖಚಿತಪಡಿಸಿಕೊಂಡಿದ್ದೇನೆ. ತಾನು ಅಸ್ತವಾಗುವ ಹೊತ್ತಿಗೆ ಈ ಗ್ರಂಥಿ ಇದೇ ಕೆಲಸವನ್ನು ದೇಹದ ಇತರ ಭಾಗಗಳಿಗೆ ವಹಿಸಿಕೊಡುತ್ತದೆ ಎಂಬುದು ಗಮನಾರ್ಹ.

ಅನೇಕ ವೇಳೆ ಹುಟ್ಟುದೋಷದ ಪರಿಣಾಮವಾಗಿ ಕೂಸು ಓಮಗ್ರಂಥಿ ಇಲ್ಲದೇ ಜನಿಸಿಬಿಡುವುದುಂಟು. ಆಗ ಅದು ಕೆಲ ತಾಸುಗಳವರೆಗೆ ಬಾಹ್ಯಪ್ರಪಂಚದ ವಿಷಾಣುಗಳೊಡನೆ ಹೋರಾಡಿದ ನಂತರ ಸತ್ತುಹೋಗುತ್ತದೆ. ನಂತರ ಇಂಥ ಮಕ್ಕಳನ್ನು ವಿಷಾಣು, ವಿಷಕಣರಹಿತವಾದ ಕೃತಕ ವಾತಾವರಣದಲ್ಲಿ ಇಟ್ಟು ಬದುಕಿಸುವ ಸಾಧ್ಯತೆ ಇದ್ದರೂ ಅದು ವ್ಯವಹಾರ್ಯವಲ್ಲ. ಏಕೆಂದರೆ ಅಂತಹ ಮಗುವನ್ನು ಯಾವಾಗ ಹೊರತಂದರೂ ನಿರೋಧಕಶಕ್ತಿ ಇರದಿರುವುದರ ಪರಿಣಾಮವಾಗಿ ಅದು ಸಾಯಲೇಬೇಕಾಗುತ್ತದೆ. ಓಮಗ್ರಂಥಿ ಇರದ ಪಿಂಡಗೂಸು ವಿಷಕಣಗಳಿರದ "ಪುಟ್ಟ ಪ್ರಪಂಚ"ವಾದ ಗರ್ಭಕೋಶದೊಳಗಿರುವುದರಿಂದ ಹೊರಬರುವವರೆಗೂ ಬದುಕಿರುತ್ತದೆ; ಹುಟ್ಟಿದ ತಕ್ಷಣ ಸತ್ತುಹೋಗುತ್ತದೆ.

ಸಣ್ಣ ಪುಟ್ಟ ಗಾಯಗಳನ್ನು ಮಾಡಿಕೊಳ್ಳುವುದು ನಿತ್ಯ ಜೀವನದಲ್ಲಿ ಸಾಮಾನ್ಯ. ಆಗ ತುಸು ಹೊತ್ತು ರಕ್ತ ಸೋರಿ ನಂತರ ನಿಲ್ಲುತ್ತದೆ. ಸ್ಥಾನಿಕವಾಗಿ ರಕ್ತ ಹೆಪ್ಪುಗಟ್ಟಿಕೊಂಡು ರಕ್ತಸ್ರಾವವಾಗದಂತೆ ಮಾಡಿರುವುದೊಂದು ಪ್ರಕೃತಿಯ ಉಪಕಾರವಾದರೆ ಗಾಯವಾದ ಜಾಗದ ಮೂಲಕ ವಾತಾವರಣದಿಂದ ಹಾನಿಕಾರಕ ವಸ್ತುಗಳು ಸೇರದಂತೆ, ಒಂದು ಪಕ್ಷ ಹಾಗೆ ಒಳ ಸೇರಿದರೂ ಅವು ಮುಂದೆ ಸಾಗದಂತೆ ಅವುಗಳನ್ನು ಅಲ್ಲಿಯೇ ನುಂಗಿ ನಿಷ್ಕ್ರಿಯಗೊಳಿಸಲು ರಕ್ತದಲ್ಲಿ ಸಂಚರಿಸುತ್ತಿರುವ ದುಗ್ಧರಸಕಣಗಳು ಸನ್ನದ್ಧವಾಗಿ ಗಾಯದ ಸುತ್ತ ಕೂಡಿಕೊಳ್ಳುವುದು ಶರೀರಕ್ಕಿರುವ ಮತ್ತೊಂದು ವಿಶೇಷ ರಕ್ಷಣೆ.

ಚಿಕ್ಕ ಮಕ್ಕಳಲ್ಲಿ ಓಮಗ್ರಂಥಿ ಕೆಲವೊಮ್ಮೆ ಊದಿಕೊಳ್ಳಬಹುದು. ಊದಿಕೊಂಡು ದಪ್ಪನಾದ ಗ್ರಂಥಿ ಮುಂದುಗಡೆ ಇರುವ ಮೂಳೆಗೆ ಏನೂ ಮಾಡಲಾರದು. ಆದರೆ ತನ್ನ ಹಿಂದಿರುವ ಮೆದು ಅಂಗಗಳನ್ನೆಲ್ಲ ಹಿಸುಕುತ್ತದೆ. ರಕ್ತನಾಳಗಳು ಅದುಮಲ್ಪಡುವುದರಿಂದ ದೇಹದ ವಿವಿಧ ಭಾಗಗಳಿಗೆ ರಕ್ತಸಂಚಾರ ಇಲ್ಲದಂತಾಗುತ್ತದೆ. ಶ್ವಾಸನಾಳ ಹಿಸುಕಲ್ಪಟ್ಟು ಗಾಳಿಯು ಓಡಾಡುವುದು ದುಸ್ತರವಾಗುತ್ತದೆ. ಆಗ ಒಂದು ತೆರನಾದ ಗೊರ್ ಗೊರ್ ಶಬ್ದ ಕೇಳಿಬರುತ್ತದೆ. ಅನ್ನನಾಳ ಅದುಮಲ್ಪಟ್ಟು ತುತ್ತು ನುಂಗುವುದೂ ಕಷ್ಟವಾಗುತ್ತದೆ; ಕೆಮ್ಮು ಬರುತ್ತದೆ. ಕೊನೆಗೆ ಶರೀರವೆಲ್ಲ ಒಂದು ರೀತಿ ನೀಲಿ ಬಣ್ಣಕ್ಕೆ ತಿರುಗುತ್ತದೆ. ಇಂತಹ ಚಿಹ್ನೆಗಳು ಕಂಡುಬಂದಲ್ಲಿ ತಕ್ಷಣ ಮಗುವನ್ನು ವೈದ್ಯರೆಡೆಗೆ ಕರೆದೊಯ್ಯಬೇಕು. ✡



# ಅಪಹೃತ

ರಾಜಕೀಯ ಅರ್ಥದಲ್ಲಿ ಚೀನ ಯಾವಾಗಲೂ ಸ್ವತಂತ್ರವಾಗಿಯೇ ಇತ್ತು. ಆದರೆ ಅದು ಮಧ್ಯಯುಗೀನ ಅರಸು ಮನೆತನವೊಂದರ ನಿರಂಕುಶ ಪ್ರಭುತ್ವ. ಪ್ರಜೆಗಳೆಲ್ಲ ಕುರಿಗಳ ಲೆಕ್ಕಕ್ಕೇ. ಆ ಕರಾಳ ನಿರಂಕುಶ ಪ್ರಭುತ್ವದ ವಿರುದ್ಧ ಬಂಡೆದ್ದು ಅಲ್ಲಿ ಪ್ರಜಾಪ್ರಭುತ್ವವನ್ನು ಸ್ಥಾಪಿಸಿದ, ಚೀನೀ ರಾಷ್ಟ್ರಪಿತನೆನಿಸಿದ ಮಹಾನ್ ವ್ಯಕ್ತಿಯ ಜೀವನದಲ್ಲಿ ಅಪಾಯಕಾರಿಯಾಗಿದ್ದಷ್ಟೆ ರೋಮಾಂಚಕವೂ ಆದೊಂದು ಘಟನೆ ಇಲ್ಲಿದೆ.

ಅಂದು ೧೮೯೬ರ ಅಕ್ಟೋಬರ್ ೧ನೆಯ ತಾರೀಖು. 'ಮೆಜೆಸ್ಟಿಕ್' ಹಡಗು ಅಮೇರಿಕದಿಂದ ಲಿವರ್‌ಪೂಲಿಗೆ ಆಗಮಿಸಿತು. ಅದರಿಂದ ಇಳಿದ ಒಬ್ಬ ತರುಣ ಸದ್ದುಗದ್ದಲವಿಲ್ಲದೆ ರೈಲು ಹತ್ತಿ ಅಂದು ಸಂಜೆಯೇ ಲಂಡನ್ ತಲುಪಿದ. ಅವನ ವೇಷಭೂಷಣ, ಅಚ್ಚುಕಟ್ಟಾದ ಕ್ರಾಪು, ಕಿರುಮೀಸೆ, ನೇರ ನಿಲುವು, ದಿಟ್ಟ ನಡೆ ಇವುಗಳೆಲ್ಲವೂ ಇಂಗ್ಲೆಂಡಿಗೆ ಓದಲು ಬರುವ ಒಬ್ಬ ಏಷ್ಯನ್ ವಿದ್ಯಾರ್ಥಿಯಂತೆಯೇ ಕಾಣುತ್ತಿದ್ದುವು. ಅವನು ಹಾದಿಯಲ್ಲಿ ಸಾಗುತ್ತಿದ್ದ ಒಂದು ಕೋಚ್ ಗಾಡಿಯನ್ನು ಕೂಗಿ ನಿಲ್ಲಿಸಿ ಅದರಲ್ಲಿ ಕುಳಿತು ಹ್ಯಾಕ್ಸೆಲ್ ಹೋಟೆಲಿಗೆ ಕರೆದೊಯ್ಯುವಂತೆ ಹೇಳಿದ.

ಅಲ್ಲಿ ಅವನಿಗೆ ಸುಸಜ್ಜಿತವಾದ ಕೋಣೆಯೊಂದು ದೊರೆಯಿತು. ಅದರಲ್ಲಿ ತಂಗಿದ ಆ ಚೀನೀ ತರುಣ ಕಿಟಕಿಯ ಬಳಿ ಬಂದು ನಿಂತ. ಹೊರಗೆ ತುಂತುರು ಮಳೆ ಹನಿದು ರಸ್ತೆ ಒದ್ದೆಯಾಗಿದ್ದರೂ ವಾತಾವರಣ ಆಹ್ಲಾದಕರವಾಗಿತ್ತು. ಸಂಜೆಗತ್ತಲಿನಲ್ಲಿ ನಗರದ ಬೀದಿದೀಪಗಳು ಪ್ರಕಾಶಮಾನವಾಗಿ ಬೆಳಗುತ್ತಿದ್ದವು. ವಾಹನಗಳು ಅತ್ತಿಂದಿತ್ತ ಸಂಚರಿಸುತ್ತಿದ್ದುವು. ವರ್ಣರಂಜಿತ ಉಡುಪುಗಳನ್ನು ಧರಿಸಿದ ಜನಜಂಗುಳಿ ಸಾವಕಾಶವಾಗಿ ಓಡಾಡುತ್ತಿತ್ತು. ಅವರ ಅನಿರ್ಬಂಧಿತ ತಿರುಗಾಟ, ಸ್ನೇಹಪರತೆ, ಮೋಜಿನ ಮನೋಭಾವದಿಂದ ಅವನ ಮನಸ್ಸು ಉಲ್ಲಾಸಗೊಂಡಿತು. ತಾನು ಹಾಂಗ್‌ಕಾಂಗಿನಲ್ಲಿ ಮೆಡಿಕಲ್ ವಿದ್ಯಾರ್ಥಿಯಾಗಿದ್ದಾಗ ಕಳೆದ ದಿನಗಳ ನೆನಪು ಅವನಿಗೆ ಬಂತು.

ಅವನೊಬ್ಬ ಚೀನೀ ತರುಣ. ಅವನ ತಾಯ್ನಾಡನ್ನು ಮಂಚು ಮನೆತನದ ಚಕ್ರವರ್ತಿ ನಿರಂಕುಶ ರೀತಿಯಲ್ಲಿ ಆಳುತ್ತಿದ್ದ. ವ್ಯಕ್ತಿಸ್ವಾತಂತ್ರ್ಯವಾಗಲಿ, ವಾಕ್‌ಸ್ವಾತಂತ್ರ್ಯವಾಗಲಿ ಅಲ್ಲಿರಲಿಲ್ಲ. ಭ್ರಷ್ಟಾಚಾರ ಮುಗಿಲು ಮುಟ್ಟಿತ್ತು. ಪ್ರಜೆಗಳ ಗೋಳನ್ನು ಕೇಳುವವರೇ ಇರಲಿಲ್ಲ. ರಾಜಕೀಯ ಸುಧಾರಣೆಗಾಗಿ ಈ ಯುವಕ ಒಂದು ಪಕ್ಷವನ್ನು ಕಟ್ಟಿ ಚಕ್ರವರ್ತಿಗೆ ಮನವಿಪತ್ರವೊಂದನ್ನು ಸಲ್ಲಿಸಿದ್ದ. ಅದೇ ಅವನು ಮಾಡಿದ್ದ ದೊಡ್ಡ ಅಪರಾಧವಾಗಿತ್ತು. ಅಂದಿನಿಂದ ಅವನ ದಸ್ತಗಿರಿಗಾಗಿ ಚೀನೀ ಸರಕಾರ ಅವನನ್ನು ಶೋಧಿಸುತ್ತಿತ್ತು. ಆದರೆ ಅವನು ಈಗಾಗಲೇ ಜಪಾನ್, ಇಂಡೊನೇಷಿಯಾ, ಸಿಂಗಾಪುರಗಳ ಮೂಲಕ ಅಮೇರಿಕವನ್ನು ತಲುಪಿ, ಅಲ್ಲಿಂದ ಸ್ವಾತಂತ್ರ್ಯದ ತವರುಮನೆಯೆಂದು ಹೆಸರಾಗಿರುವ ಬ್ರಿಟನ್ನಿಗೆ ಆಗಮಿಸಿದ್ದ. ತನ್ನನ್ನು ಸೆರೆಹಿಡಿಯಲು ಪ್ರಯತ್ನಿಸುತ್ತಿರುವ ಚೀನೀ ಗುಪ್ತ ಪೋಲೀಸರಿಗೂ ತನಗೂ ಅರ್ಧ ಜಗತ್ತಿನಷ್ಟು ಅಂತರವನ್ನು ಸೃಷ್ಟಿಸಿಕೊಂಡ ಬಳಿಕ ಅವನಿಗೆ ಹಾಯಾಗಿ ಉಸಿರೆಳೆಯಲು ಸಾಧ್ಯವಾಯಿತು.

ಹೊರಗಿನ ಸ್ವಾತಂತ್ರ್ಯದ ಗಾಳಿ ಅವನನ್ನು ಕೈ ಬೀಸಿ ಕರೆಯುತ್ತಿತ್ತು. ಯಾರಾದರೊಬ್ಬ ಸಹೃದಯಿಯೆದುರು ತನ್ನ ಹೋರಾಟ ಮತ್ತು ಸಾಧನೆಗಳನ್ನು ಹೇಳಿಕೊಳ್ಳಬೇಕೆನಿಸಿತು. ಅವನಿಗೆ ಕೂಡಲೆ ಹಿಂದೆ ಹಾಂಗ್‌ಕಾಂಗ್ ಮೆಡಿಕಲ್

ಕಾಲೇಜಿನ ಪ್ರಿನ್ಸಿಪಾಲರಾಗಿದ್ದು ಈಗ ನಿವೃತ್ತರಾಗಿ ಲಂಡನ್ನಿನಲ್ಲಿ ನೆಲೆಸಿರುವ ಡಾಕ್ಟರ್ ಕ್ಯಾಂಟ್ಲೀಯವರು ನೆನಪಿಗೆ ಬಂದರು. ಅವರನ್ನು ಕಂಡು ಮಾತಾಡಿ ಬರಲು ಅವನು ತೆರಳಿದ.

ಡೆವೋನ್‌ಷೈರ್ ಬೀದಿಯ ೪೬ನೇ ನಂಬರಿನ ಮನೆಯಲ್ಲಿದ್ದ ಡಾಕ್ಟರ್ ಕ್ಯಾಂಟ್ಲೀ ದಂಪತಿಗಳು ತಮ್ಮ ಹಳೆಯ ವಿದ್ಯಾರ್ಥಿಯನ್ನು ಅನಿರೀಕ್ಷಿತವಾಗಿ ಕಂಡು ಆನಂದಾಶ್ಚರ್ಯದಲ್ಲಿ ಮುಳುಗಿದರು. ಅವರು ತಮ್ಮ ಹಳೆಯ ಮಿತ್ರರು, ಅಳಿದುಹೋದ ಮಧುರ ಪ್ರಸಂಗಗಳು, ಇತ್ತೀಚಿನ ಕರಾಳ ಘಟನೆಗಳನ್ನು ಕುರಿತು ಸುದೀರ್ಘ ಮಾತುಕತೆಗಳನ್ನಾಡಿದರು. ಚೀನದ ಸ್ವಾತಂತ್ರ್ಯಸಮರದ ಸಂಬಂಧದಲ್ಲಿ ಇತ್ತೀಚಿನ ಗಂಡಾಂತರಕಾರಿ ವಾರ್ತೆಗಳನ್ನು ಅರಿತ ಬಳಿಕ ಅವರು ತಮ್ಮ ಮೆಚ್ಚಿನ ಶಿಷ್ಯನಾಗಿದ್ದ ಆ ಚೀನಿ ಯುವಕರಿಗೆ ಎಚ್ಚರಿಕೆಯಿತ್ತರು: "ಚೀನೀ ರಾಯಭಾರಿ ಕಚೇರಿ ನಮ್ಮ ಸಮೀಪವಾಗೇ ಇದೆ. ಜೋಕೆ!...ನೀನು ಇಲ್ಲಿರುವ ವರೆಗೂ ಅಪ್ಪಿತಪ್ಪಿಯಾದರೂ ಆ ಕಡೆ ಸುಳಿಯಬೇಡ...ನಿನ್ನನ್ನು ಅಪಹರಿಸಿ, ಚೀನಕ್ಕೆ ರವಾನಿಸಿಬಿಡಲು ಅವರು ಹೇಸುವುದಿಲ್ಲ!"

ಅವರ ನೆರವಿನಿಂದ ಅವನು ಗ್ರೇಸ್ ಇನ್ ರಸ್ತೆಯಲ್ಲಿ ಒಂದು ಚಿಕ್ಕ ಕೋಣೆಯನ್ನು ನಾಲ್ಕಾರು ದಿನಗಳಲ್ಲಿಯೇ ಬಾಡಿಗೆಗೆ ಗೊತ್ತುಮಾಡಿಕೊಂಡ. ಅಲ್ಲಿ ಇನ್ನಿತರ ಅಸಂಖ್ಯಾತ ಏಷ್ಯನ್ ವಿದ್ಯಾರ್ಥಿಗಳಂತೆ ಸೌಮ್ಯವಾಗಿ ಜೀವಿಸತೊಡಗಿದ.

ಅವನು ಲಂಡನ್ನಿಗೆ ಬಂದು ಹನ್ನೊಂದನೆಯ ದಿನ ತನ್ನ ಕೋಣೆಯನ್ನು ಬಿಟ್ಟು ಬೀದಿಗೆ ಕಾಲಿರಿಸಿದ. ತನ್ನ ಗುರುಗಳಾದ ಡಾ. ಕ್ಯಾಂಟ್ಲೀಯವರೊಡನೆ ಚರ್ಚಿಗೆ ಹೋಗಿ ಬರುವುದೇ ಅವನ ಉದ್ದೇಶವಾಗಿತ್ತು. ಅವನು ಆಕ್ಸ್‌ಫರ್ಡ್ ಸರ್ಕಸ್ಸಿನ ಬಳಿಗೆ ಬರುತ್ತಿದ್ದಂತೆಯೇ ಅವನಿಗೆ ಏನೋ ಒಂದು ಬಗೆಯ ಸಂಶಯ ಹುಟ್ಟಿತು. ಯಾರೋ ತನ್ನನ್ನು ಹಿಂಬಾಲಿಸುತ್ತಿರುವಂತೆ ಅವನಿಗೆ ಅನಿಸಿತು. ಚೀನೀ ರಾಯಭಾರಿ ಕಚೇರಿಯಿದ್ದ ಪೋರ್ಟ್‌ಲೆಂಡ್ ಪ್ಲೇಸಿಗೆ ಬಹಳ ಸಮೀಪವಾಗಿ ತಾನು ಬಂದುಬಿಟ್ಟಿರಬಹುದೆಂದು ಶಂಕೆ ತಲೆದೋರಿತು. ಅಲ್ಲಿ ಎಂದೂ ಹೀಗೆ ಕಾಲಿರಿಸದಿದ್ದ ತಾನು ಈ ದಿನವೇಕೆ ಹೀಗೆ ಮಾಡಿದೆ ಎಂದು ವಿಸ್ಮಯಗೊಂಡ ಅವನು ಅಲ್ಲಿಂದ ಹಿಂದೆ ಸರಿಯಲು ಆಲೋಚಿಸುತ್ತಾ, ಎಚ್ಚರಿಕೆ, ಸಂಶಯಗಳಿಂದ ಒಮ್ಮೆ ಹಿಂತಿರುಗಿ ನೋಡಿದ.

ಅಲ್ಲಿ ಅವನ ಹಿಂದೆಯೇ ಮಂಡರಿನ್ ಪೋಷಾಕು ಧರಿಸಿದ್ದ ಒಬ್ಬ ಚೀನೀ ವ್ಯಕ್ತಿ ನಡೆದು ಬರುತ್ತಿದ್ದ. ಯುವಕ ಬೆಚ್ಚಿ ಬಿದ್ದವನಂತೆ ತನ್ನ ಹೆಜ್ಜೆಗಳನ್ನು ಚುರುಕುಗೊಳಿಸಿದ. ಆ ವ್ಯಕ್ತಿಯೂ ಚುರುಕಾಗಿ ಹಿಂಬಾಲಿಸಿದ. ಯುವಕ ಲಗುಬಗೆಯಿಂದ ರಸ್ತೆಯನ್ನು ದಾಟಿದ. ಆ ವ್ಯಕ್ತಿಯೂ ರಸ್ತೆಯನ್ನು ದಾಟಿದ. ಯುವಕ ಮನಸ್ಸನ್ನು ಗಟ್ಟಿ ಮಾಡಿಕೊಂಡು ಗಂಭೀರವಾಗಿ ನಡೆಯತೊಡಗಿದ. ಆ ವ್ಯಕ್ತಿಯೂ ಹಸನ್ಮುಖಿಯಾಗಿ ಯುವಕನ ಪಕ್ಕಕ್ಕೇ ಸರಿದು ಬಂದು ವಿನಯದಿಂದ, ಸ್ವಚ್ಛ ಇಂಗ್ಲೀಷಿನಲ್ಲಿ ಮಾತಾಡಿಸಿದ: "ಸರ್!... ತಾವು ಚೀನೀಯರೇ? "

"ಹೌದು."

"ಅಲ್ಲಿ ಯಾವ ಪ್ರಾಂತ್ಯ ತಮ್ಮದು?"

"ಕ್ಯಾಂಟನ್."

ಆ ವ್ಯಕ್ತಿ ಅತ್ಯಂತ ಸಂತೋಷದಿಂದ ಎರಡು ಕೈಗಳನ್ನೂ ಉಜ್ಜಿ, ಗಹಗಹಿಸಿ ನಕ್ಕು, "ಚೆನ್ನಾಯ್ತು ಬಿಡಿ!... ನಾವಿಬ್ಬರೂ ಒಂದೇ ಭಾಷೆಯನ್ನಾಡುವವರು. ನನ್ನ ಊರು ಸಹ ಕ್ಯಾಂಟನ್," ಎಂದು ಚೀನೀ ಭಾಷೆಯಲ್ಲಿ ಅತ್ಯಂತ ಸ್ನೇಹಪರತೆಯಿಂದ ನುಡಿದ.

ಇಬ್ಬರೂ ತಮ್ಮ ತಾಯ್ನುಡಿಯಲ್ಲೇ ಮಾತನಾಡುತ್ತಾ ಮುಂದೆ ಸಾಗಿದರು. ಅವರು ಕ್ಯಾವೆಂಡಿಷ್ ರಸ್ತೆಗೆ ಬರುತ್ತಿದ್ದಂತೆಯೇ ಸದ್ದಿಲ್ಲದಂತೆ ಮತ್ತೊಬ್ಬ ಚೀನೀ ವ್ಯಕ್ತಿ ಅವರೊಡನೆ ಸೇರಿಕೊಂಡ. ಅವನೂ ಮಂಡರಿನ್ ಪೋಷಾಕು ಧರಿಸಿದ್ದ. ಯುವಕನ ಇನ್ನೊಂದು ಮಗ್ಗುಲಲ್ಲಿ ಅವನು ನಿಷ್ಕಪಟಿಯಂತೆ ಜೊತೆ ಜೊತೆಗೇ ನಡೆದು ಬರತೊಡಗಿದ. ಚೀನೀ ಭಾಷೆಯಲ್ಲಿ ಮಾತನಾಡಿಕೊಂಡೇ ಅವರು ಮುನ್ನಡೆಯುತ್ತಿದ್ದರು. ಆಗ ಎರಡನೆ ಚೀನೀ ವ್ಯಕ್ತಿ

ಅವರನ್ನು ತನ್ನ ಕೋಣೆಗೆ ಆಹ್ವಾನಿಸಿದ. ಒಂದು ಲೋಟ ಚಹ ಸ್ವೀಕರಿಸಿ ಹೋಗ-ಬೇಕೆಂದು ಕೇಳಿಕೊಂಡ. ಆ ಯುವಕ.

"ಕ್ಷಮಿಸಿ. ನಾನೀಗ ಮಿತ್ರರೊಬ್ಬರನ್ನು ಕಾಣಲು ಹೊರಟಿದ್ದೇನೆ. ಮತ್ತೊಮ್ಮೆ ಖಂಡಿತ ನಿಮ್ಮ ಆಹ್ವಾನ ಸ್ವೀಕರಿಸುವೆ," ಎಂದು ಹೇಳು-ತ್ತಿದ್ದಂತೆಯೇ ಎಲ್ಲಿಂದಲೋ ಮತ್ತೊಬ್ಬ ಚೀನೀ ವ್ಯಕ್ತಿ ಅವರೊಡನೆ ಸೇರಿಕೊಂಡ. ಅವನೂ ಮಂದರಿನ್ ಪೋಷಾಕನ್ನು ಧರಿಸಿದ್ದ. ಅವನ ಮುಖ ಯಾರಲ್ಲೂ ಭಯ ಹುಟ್ಟಿಸುವಷ್ಟು ಕ್ರೂರವಾಗಿತ್ತು. ಎಂಥ ಹೇಯ ಕೃತ್ಯವನ್ನಾ-ದರೂ ಮಾಡಬಲ್ಲವನಂತೆ ಅವನು ಕಾಣುತ್ತಿದ್ದ.

ಈಗ ಆ ಮೂವರೂ ಹೊಸಬರು ತಮ್ಮ ಸೌಜನ್ಯವನ್ನು ಬಿಟ್ಟರು; ಸಭ್ಯತೆಯ ಮುಖ-ವಾಡವನ್ನೂ ಕಿತ್ತೊಗೆದರು. ಯುವಕನ ಎರಡು ತೋಳುಗಳನ್ನೂ ಭದ್ರವಾಗಿ ಹಿಡಿದುಕೊಂಡು ರಸ್ತೆಯ ಒಂದು ತಿರುವಿಗೆ ಎಳೆದೊಯ್ದರು. ಅಲ್ಲೇ ಇತ್ತು ೪೯, ಪೋರ್ಟ್‌ಲ್ಯಾಂಡ್ ಪ್ಲೇಸ್... ಚೀನೀ ರಾಯಭಾರಿ ಕಚೇರಿ!

ಯುವಕನಿಗೆ ಚೀನೀ ರಾಯಭಾರಿ ಕಚೇರಿ ಎಲ್ಲಿದೆ ಎಂದು ಒಂದು ಸ್ಥೂಲ ಕಲ್ಪನೆಯಿತ್ತೇ ವಿನಾ ಅದನ್ನವನು ಒಮ್ಮೆಯೂ ಕಣ್ಣಾರೆ ಕಂಡಿರಲಿಲ್ಲ. ಈಗ ಈ ಚೀನಿಯರು ತನ್ನನ್ನು ಅಲ್ಲಿಗೇ ಎಳೆದು ತಂದಿರುವರೇ ಎಂಬ ಭೀತಿ ಹುಟ್ಟಿತು. ಆ ಕಟ್ಟಡದ ಬಾಗಿಲು ಅವರು ಸಮೀಪಿಸುತ್ತಿದ್ದಂತೆಯೇ ತೆರೆದುಕೊಂಡಿತು. ಆ ಯುವಕನನ್ನು ಅವರು ಅದರೊಳಕ್ಕೆ ದಬ್ಬಿ ತಾವೂ ಒಳಗೆ ಬಂದರು. ಕಟ್ಟಡದ ಬಾಗಿಲನ್ನು ಭದ್ರವಾಗಿ ಮುಚ್ಚಿಕೊಂಡರು.

ಕೆಲವೇ ನಿಮಿಷಗಳಲ್ಲಿ ಜನನಿಬಿಡ ಲಂಡನ್ನಿನ ಬೀದಿಗಳಲ್ಲಿ ಈ ಅಪಹರಣ ನಡೆದುಹೋಯಿತು.

•

ತನ್ನನ್ನು ಇಲ್ಲಿಗೆ ಎಳೆದು ತಂದ ಈ ಚೀನೀ-ಯರು ಯಾರು? ಎಲ್ಲಿಗೆ ಕರೆತಂದಿದ್ದಾರೆ? ಏಕೆ ಕರೆತಂದಿದ್ದಾರೆ? ಇದಾವ ಪ್ರಶ್ನೆಗಳಿಗೂ ಅವನಿಗೆ ತಟ್ಟನೆ ಉತ್ತರ ದೊರೆಯಲಿಲ್ಲ.

ಅವರು ಅವನನ್ನು ಮೊದಲು ಕೆಳ ಅಂತಸ್ತಿ-ನಲ್ಲಿದ್ದ ಒಂದು ದೊಡ್ಡ ಹಾಲಿನಲ್ಲಿ ಕೂಡಿಸಿದರು. ಒಂದು ಗಂಟೆಯ ಬಳಿಕ ಅವನನ್ನು ಎರಡನೆಯ ಅಂತಸ್ತಿನ ಒಂದು ಕೋಣೆಗೆ ಕರೆತಂದರು. ಅಲ್ಲಿನ ಕಿಟಕಿಗಳಿಗೆ ಬಲವಾದ ಕಬ್ಬಿಣದ ಸರಳು-ಗಳಿದ್ದುವು. ಬಾಗಿಲಿಗೆ ಅಡ್ಡವಾಗಿ ದಪ್ಪ ಕಬ್ಬಿಣದ ಪಟ್ಟಿಯಿತ್ತು. ಅಲ್ಲಿ ಇದ್ದವರೆಲ್ಲರೂ ಚೀನೀಯರೇ. ಎಲ್ಲರೂ ಅವನನ್ನು ಕುತೂಹಲ ದಿಂದ ಮೌನವಾಗಿ ನೋಡುವವರೇ. ಆದರೆ ಒಬ್ಬರೂ ಒಂದು ಮಾತೂ ಆಡರು. ಇದೆಲ್ಲವನ್ನು ಕಂಡ ಬಳಿಕ ಅವನಿಗೆ ಎಲ್ಲವೂ ಸ್ಪಷ್ಟವಾಗಿ ಅರ್ಥವಾಯಿತು. ಬೀದಿಯಲ್ಲಿ ತನ್ನನ್ನು ಮಾತ-ನಾಡಿಸಿದವರು ಚೀನೀ ಗುಪ್ತಚಾರರು. ಅವರು ತನ್ನನ್ನು ಅಪಹರಿಸಿಕೊಂಡು ಬಂದಿರುವುದು ಚೀನೀ ರಾಯಭಾರಿ ಕಚೇರಿಗೆ. ಅರ್ಧ ಪ್ರಪಂಚ-ವನ್ನೇ ಬಳಸಿ ಬಂದಿದ್ದರೂ ನಾಲ್ಕಾರು ವರ್ಷ ಕಾಲ ಚೀನೀ ಗುಪ್ತ ಪೋಲೀಸರಿಗೆ ಮಣ್ಣು ಮುಕ್ಕಿಸಿದ್ದರ ಸ್ವಾತಂತ್ರ್ಯದ ತವರು ಮನೆ-ಯಂತಿರುವ ಇಂಗ್ಲೆಂಡಿನ ರಾಜಧಾನಿಯಲ್ಲೇ ಇಷ್ಟು ನಿರಾಯಾಸವಾಗಿ ಸಿಕ್ಕುಬಿದ್ದೆನಲ್ಲಾ ಎಂದು ಅವನು ಘೋರ ಪಶ್ಚಾತ್ತಾಪಕ್ಕೆ ಈಡಾದ.

'ಈಗ ನನ್ನ ಬ್ರಿಟಿಷ್ ಪ್ರೊಫೆಸರು ಏನು ಮಾಡುತ್ತಾರೆ? ನನ್ನನ್ನು ನಿರೀಕ್ಷಿಸಿ, ನಾನು ಬಾರದೇ ಇರುವುದನ್ನು ಕಂಡು ನಾನು ಅಪಹರಣ ಗೊಂಡಿರಬಹುದೆಂದು ಊಹಿಸಿ, ನನ್ನನ್ನು ಬಿಡಿಸಲು ಪ್ರಯತ್ನಿಸುವರೋ? ಇಲ್ಲವೆ ಎಷ್ಟೋ ವಿದ್ಯಾರ್ಥಿಗಳಂತೆ ಶಾಲೆಗೆ ತಪ್ಪಿ ನಾನೂ ಬಂದಿಲ್ಲವೆಂದು ತಿಳಿದು ಅಲಕ್ಷ್ಯ ದಿಂದಿದ್ದು ಬಿಡುವರೋ? ಒಂದು ವೇಳೆ ಹೇಗೇನಾದರೂ ಅವರು ತಿಳಿದುಬಿಟ್ಟರೆ ಇನ್ನೇನು ನನ್ನ ಗತಿ! ಎಂದು ಆ ಯುವಕ ಚಿಂತಿಸತೊಡಗಿದ.

ಆಗ ಇಬ್ಬರು ಚೀನೀ ಅಧಿಕಾರಿಗಳು ಅವನ ಕೋಣೆಗೆ ಬಂದರು. ಅವನ ಜೇಬು, ಬಟ್ಟೆ ಬರೆಗಳನ್ನೆಲ್ಲಾ ಹುಡುಕಿ, ತಡಕಾಡಿ, ಅವನ ಬಳಿಯಿದ್ದ ಎಲ್ಲ ವಸ್ತುಗಳನ್ನೂ ಕಸಿದೊ-ಯ್ದರು. ಅವನ ಕೈಗಡಿಯಾರವನ್ನೂ ಅವರು ಬಿಡಲಿಲ್ಲ. ಅನಂತರ ಅವರು ಅವನನ್ನು ಮೂರನೆಯ ಅಂತಸ್ತಿನ ಮತ್ತೊಂದು ಕೋಣೆಗೆ

ರಚಿಸಿ ಹೊರಡಿಸಲ್ಪಡುವ ಚೀನೀ ಚಕ್ರವರ್ತಿಗೆ ಅದನ್ನು ಕಳಿಸಲು ಯತ್ನಿಸಿದೆ, ಅಲ್ಲವೇ?"

"ಹೌದು."

"ಸಮ್ರಾಟರ ಇಂಗಿತ ಅರಿಯುವವರೆಗೆ ಇಲ್ಲಿರುವ ನಾವು ನಿನ್ನನ್ನು ಲಂಡನ್ನಿನಲ್ಲೇ ಸೆರೆಯಲ್ಲಿಟ್ಟಿರಲು ಆಜ್ಞೆಯಾಗಿದೆ."

ಸಮ್ರಾಟರ ಇಂಗಿತ ಹೇಗಿರುತ್ತದೆ ಎಂಬುದನ್ನು ಯುವಕ ಊಹಿಸಿಕೊಂಡ. ಅಗಲವಾದ, ಹೊಳೆಯುವ ಖಡ್ಗ ಹಿಡಿದ ದೈತ್ಯನೊಬ್ಬ ಮಧ್ಯಸ್ಥಾನದಲ್ಲಿ ನಿಂತಿರುವ ದೃಶ್ಯ ಅವನ ಒಳಗಣ್ಣುಗಳ ಮುಂದೆ ಸುಳಿಯಿತು. ಅವನು ಕೇಳಿದ, "ನಾನು ದೂತಾವಾಸದಲ್ಲಿರುವ ಸಂಗತಿಯನ್ನು ನನ್ನ ಇಂಗ್ಲಿಷ್ ಮಿತ್ರರಿಗೆ ಈಗ ನಾನು ತಿಳಿಸಬಹುದೇ?"

"ಇಲ್ಲ. ಅದು ಸಾಧ್ಯವಾಗುವದಿಲ್ಲ. ಆದರೆ ನೀನು ನಿನ್ನ ಕೋಣೆಯ ಮಾಲೀಕನಿಗೊಂದು ಪತ್ರ ಬರೆದು, ನಿನ್ನ ಬಟ್ಟೆ-ಬರೆ, ಟ್ರಂಕುಗಳನ್ನು ಇಲ್ಲಿಗೆ ತರಿಸಿಕೊಳ್ಳಬಹುದು."

ಅದಕ್ಕೊಪ್ಪಿ ಕೈದಿ ಒಂದು ಪತ್ರ ಬರೆದುಕೊಟ್ಟ.

ಅಷ್ಟು ಹೇಳಿದ ಬಳಿಕ ಇಂಗ್ಲಿಷ್ ವಕೀಲ ಮತ್ತೆ ಏನನ್ನೂ ಅವನೊಡನೆ ಮಾತಾಡಲು ಇಚ್ಛಿಸಲಿಲ್ಲ. ಮೇಲೆದ್ದು ಕೋಣೆಯಿಂದ ಹೊರಕ್ಕೆ ನಡೆದ. ಯುವಕ ತನ್ನ ಆಲೋಚನೆಗಳಲ್ಲೇ ಮುಳುಗಿದ.

ತನ್ನ ಕೋಣೆಯ ಪುಸ್ತಕಗಳು, ಕಾಗದಗಳ ಸಂಬಂಧಿಸಿದ ತನ್ನ ಗೆಳೆಯರ ಮತ್ತು ಸಂಗಾತಿಗಳ ಹೆಸರು, ವಿಳಾಸಗಳನ್ನು ತಿಳಿಯುವುದಕ್ಕೇ ಇಂಗ್ಲಿಷ್ ವಕೀಲ ಈ ಪತ್ರ ಪಡೆದದ್ದು ಎಂದು ತಟ್ಟನೆ ಅವನಿಗೀಗ ಹೊಳೆಯಿತು.

ಒಂದೆರಡು ಕ್ಷಣಗಳಲ್ಲಿಯೇ ಬಾಗಿಲ ಬಳಿ ಭಯಂಕರ ಶಬ್ದವಾಗತೊಡಗಿತು. ಬಾಗಿಲಿಗೆ ಎರಡನೆಯ ಇನ್ನೊಂದು ಚಿಲಕವನ್ನು ಬಡಗಿಗಳು ಜಡಿಯುತ್ತಿದ್ದರು. ಬಾಗಿಲ ಹೊರಗೆ ಇಬ್ಬರು ದ್ವಾರಪಾಲಕರೂ ನಿಂತಿದ್ದರು. ಅವರು ಕ್ಯಾಂಟನ್ ಪ್ರಾಂತ್ಯದ ಭಾಷೆಯಲ್ಲಿಯೇ ಮಾತಾಡುತ್ತಿದ್ದರು. ಯುವಕ ಅವರನ್ನು ಮಾತಾಡಿಸಲು ಯತ್ನಿಸಿದ. ಅವರು ಮಾತಾಡಲಿಲ್ಲ. ಅದಕ್ಕೆ ಬದಲು ಬಾಗಿಲು ತೆಗೆದು ಒಳಕ್ಕೇ ಬಂದರು. ಅವನನ್ನು ಮತ್ತೊಮ್ಮೆ ಶೋಧಿಸಿದರು. ಅವನ ಜೇಬಿನಲ್ಲಿದ್ದ ಬೀಗದ ಕೈ ಗೊಂಚಲು ಮತ್ತು ಪುಟ್ಟ ಚಾಕುವನ್ನು ಸಹ ಕಸಿದೊಯ್ದರು. ಆದರೆ ಯುವಕ ಗುಪ್ತವಾಗಿರಿಸಿಕೊಂಡಿದ್ದ ನೋಟುಗಳ ಕಂತೆಯೊಂದು ಮಾತ್ರ ಅವರಿಗೆ ದೊರೆಯಲಿಲ್ಲ.

ಇನ್ನಾವ ಘಟನೆಯೂ ಇಲ್ಲದೆ ದಿನ ಕಳೆದು ಹೋಯಿತು. ಸಂಜೆಯಾಗುತ್ತಲೇ ದ್ವಾರಪಾಲಕರು ಅವನಿಗೆ ತಿನ್ನಲು ಏನು ಬೇಕು ಎಂದು ಕೇಳಿದರು. ಅವನಿಗೆ ದೈಹಿಕವಾಗಿಯೂ ಮಾನಸಿಕವಾಗಿಯೂ ವಿಪರೀತ ಆಯಾಸವಾಗಿತ್ತು. ಒಂದು ಲೋಟ ಹಾಲು ಸಾಕು ಎಂದ. ಸಂಜೆ ಏಳರ ಸಮಯದಲ್ಲಿ ಇಬ್ಬರು ಇಂಗ್ಲಿಷ್ ಜವಾನರು ಕೋಣೆಯ ಕಸ ಗುಡಿಸಲು ಬಂದರು. ಅವರು ಅಗ್ಗಿಷ್ಟಿಕೆಗೆ ಇದ್ದಲು ಮತ್ತು ಸೌದೆಗಳನ್ನೂ ತಂದರು. ಅವರಿಗೆ ಕೈದಿಯನ್ನು ಮಾತಾಡಿಸಕೂಡದೆಂದು ನಿಷ್ಠುರ ಆಜ್ಞೆಯಾಗಿತ್ತು. ಅವರು ಅವನನ್ನು ಕಣ್ಣೆತ್ತಿ ನೋಡಲೂ ಇಲ್ಲ. ಮೌನವಾಗಿ ತಮ್ಮ ಕೆಲಸ ಮುಗಿಸಿ ಕೋಣೆಯಿಂದ ನಿರ್ಗಮಿಸಿದರು.

ಅಂದು ರಾತ್ರಿ ಅವನಿಗೆ ನಿದ್ದೆ ಹತ್ತಲಿಲ್ಲ. ಕೋಣೆಯಲ್ಲಿ ಹಾಸಿಗೆ, ಹೊದಿಕೆಗಳಿದ್ದರೂ ಅವನು ತನ್ನ ಬಟ್ಟೆ ಬಿಚ್ಚಿ ವಿರಮಿಸಿಕೊಳ್ಳಲಿಲ್ಲ. ಹೊರಗೆ ದ್ವಾರಪಾಲಕರು ಆಡುತ್ತಿದ್ದ ಮಾತು. ಬೀದಿಯಲ್ಲಿ ಓಡಾಡುತ್ತಿದ್ದ ಕುದುರೆಗಾಡಿಗಳ ಗೊರಸು ಮತ್ತು ಚಕ್ರಗಳ ಧ್ವನಿ ಅವನ ಕಿವಿಗೆ ಮೇಲೆ ಬೀಳುತ್ತಿತ್ತು. ಅವನ ತಲೆಯಲ್ಲಿ ಘನಘೋರ ಯೋಚನೆಗಳು ಸುಳಿದಾಡುತ್ತಿದ್ದುವು. ಅವನಿಗೆ ಸಾಯಲು ಹೆದರಿಕೆಯಾಗುತ್ತಿರಲಿಲ್ಲ; ಆದರೆ ಹೀಗೆ ಬೋನಿಗೆ ಸಿಕ್ಕಿಬಿದ್ದ ಒಂದು ಇಲಿಯಂತೆ ಅಸಹಾಯಕನಾಗಿ ಸಾಯುವುದು ಮಾತ್ರ ಇಷ್ಟವಿರಲಿಲ್ಲ. ಮೆಕ್‌ಟರ್ನಿಯಂಥ ಆಧುನಿಕ ಇಂಗ್ಲಿಷ್ ಮನುಷ್ಯ ಏಕೆ ಚೀನೀ ಪಾಳೆಯಗಾರನಾಯಕನ ಗುಲಾಮನಾಗಿರಬೇಕು? ಎಂಬುದು ಅವನಿಗೆ ಅರ್ಥವೇ ಆಗಿರಲಿಲ್ಲ. 'ಹಣಕ್ಕಾಗಿ ಅವನು ಹೀಗೆ ಮಾಡುತ್ತಿರಬೇಕಲ್ಲವೇ? ಹಾಗಾದರೆ ಹಣ-

ದಿವೆ," ಎಂದು ಆತ ಹೇಳಿದ. ಅವನಿಗೆ ಅಷ್ಟರಿಂದಲೇ ತೃಪ್ತಿಯಾಗಲಿಲ್ಲ.

"ನೀನು ಚೀನಾ ದೇಶದಲ್ಲಿ ಚಿರಪರಿಚಿತ. ನಿನ್ನ ಹೆಸರು ಚಕ್ರವರ್ತಿಗೂ ಗೊತ್ತು. ನಿನ್ನ ರಾಜಕೀಯ ಚಟುವಟಿಕೆಗಳೂ ಅವರಿಗೆ ತಿಳಿದಿದೆ. ಒಂದು ಕ್ಷಣ ಯೋಚಿಸಿ ನೋಡು. ನೀನು ಧೈರ್ಯವಾಗಿ ನಿನ್ನ ಹೆಸರನ್ನು ಹೇಳಿ, ಚೀನಾಕ್ಕೆ ಹೋಗಿ ಮರಣದಂಡನೆಗೆ ಗುರಿಯಾದರೆ ಎಷ್ಟು ದೊಡ್ಡ ಹುತಾತ್ಮನಾಗಿಬಿಡುವೆ! ದೇಶದ ಯುವಕರ ಪಾಲಿಗೆ ನೀನೊಬ್ಬ ಒಮ್ಮೆಲೇ ಧೀರ ನಾಯಕನಾಗಿಬಿಡುವೆ," ಎಂದು ಕೊಚ್ಚಿದ.

"ನಾನು ಸತ್ತೇ ಸಾಯುತ್ತೇನೆಂದು ನೀವು ಹೇಗೆ ಹೇಳುತ್ತೀರಿ?..." ಎಂದು ಅವನನ್ನು ಕೇಳಿದ ಯುವಕ. "ನಾನೇನು ಚೀನಾ ದೇಶದಲ್ಲಿಲ್ಲ, ಇಂಗ್ಲೆಂಡಿನಲ್ಲಿದ್ದೇನೆ. ಇದು ಸ್ವತಂತ್ರ ಭೂಮಿ. ನೀವು ಇಲ್ಲಿ ನನಗೇನು ತಾನೆ ಮಾಡಲು ಸಾಧ್ಯ? ಅದು ನಿಜ, ನೀವು ನನ್ನನ್ನು ಈ ದೂತಾವಾಸದಲ್ಲೇ ಗುಪ್ತವಾಗಿ ಮುಗಿಸಿಬಿಡಬಹುದು. ಅದನ್ನು ಮಾತ್ರ ನೀವು ಸುಲಭವಾಗಿ ಮಾಡಿಬಿಡಬಹುದು. ಆದರೆ ವಿಚಾರಣೆಯಿಲ್ಲದೆ ಮಾಡುವ ಅಂಥ ಕೆಲಸಗಳಿಗೆ ಇಲ್ಲಿ 'ಖೂನಿ' ಎಂದು ಕರೆಯುತ್ತಾರೆ. 'ಖೂನಿ' ಹೇಗೋ ಹೊರಕ್ಕೆ ಗೊತ್ತಾಗಿಬಿಡುತ್ತದೆ. ಅದು ಖೂನಿಯ ಗುಣ. ಖಂಡಿತ ಬ್ರಿಟಿಷ್ ಸರಕಾರದ ಹಗೆತನ ನಿಮಗೆ ಬೇಡ. ಇಲ್ಲವೆ ನನ್ನನ್ನು ಚೀನಾ ದೇಶಕ್ಕೆ ವರ್ಗಾಯಿಸಲು ನೀವು ಬ್ರಿಟಿಷ್ ಸರಕಾರವನ್ನು ಪ್ರಾರ್ಥಿಸಬಹುದು. ಆದರೆ ಅದೆಲ್ಲಾ ತುಂಬಾ ಸಮಯ ತೆಗೆದುಕೊಳ್ಳೋ ಕೆಲಸ. ಬ್ರಿಟಿಷ್ ಸರಕಾರಕ್ಕೆ ನನ್ನನ್ನು ಅಕ್ರಮವಾಗಿ ಬಂಧಿಸಿರೋ ವಿಚಾರ ಬೇರೆ ತಿಳಿಯಪಡಿಸಬೇಕಾಗುತ್ತೆ. ಇಂಗ್ಲೆಂಡ್ ನನ್ನನ್ನು ನಿಮ್ಮ ಕೈಗೆ ಒಪ್ಪಿಸಿಕೊಡುತ್ತೆ ಅನ್ನೋದು ಮಾತ್ರ ಸುಳ್ಳು. ಈ ದೇಶ ರಾಜಕೀಯ ಆಶ್ರಯ ಕೋರಿದವರನ್ನು ಬಿಟ್ಟುಕೊಡೋದಿಲ್ಲ," ಎಂದು ಯುವಕ ನುಡಿಯುತ್ತಿರುವಂತೆ, ತಿರಸ್ಕಾರದ ಕಿರುನಗೆ ಟಾಂಗನ ಮುಖವನ್ನಾವರಿಸಿತು.

"ನಿನ್ನನ್ನ ವರ್ಗಾಯಿಸಿ ಕೊಡಿ ಎಂದು ನಾವು ಖಂಡಿತ ಇಂಗ್ಲೆಂಡ್ ಸರಕಾರವನ್ನು ಕೇಳೋಲ್ಲ. ಅದೊಂದು ಮೂರ್ಖ ಕ್ರಮ. ಸೌತಾಂಪ್ಟನ್‌ನಲ್ಲಿ ಒಂದು ನೌಕೆ ಈಗ ನಿನಗಾಗಿ ಕಾಯುತ್ತ ನಿಂತಿದೆ. ಇಲ್ಲಿಂದ ನಿನ್ನನ್ನು ತೆಪ್ಪಗಾಗುವಂತೆ ಮಾಡಿ, ನೌಕೆಗೆ ಸಾಗಿಸಿ, ಅಲ್ಲಿ ನಿನಗೆ ಬೇಡಿ ಹಾಕಿ ಕಟ್ಟಿಹಾಕೋದು ಏನೂ ಅಸಾಧ್ಯದ ಕೆಲಸ ಅಲ್ಲ. ನೌಕೆ ಹಾಂಗ್‌ಕಾಂಗ್ ತಲುಪುವವರೊಳಗೆ ದಾರಿಯಲ್ಲೇ ಒಂದು ಗನ್‌ಬೋಟ್ ನಿನ್ನನ್ನು ಇಳಿಸಿಕೊಂಡು ಕ್ಯಾಂಟನ್‌ಗೆ ಒಯ್ಯುತ್ತದೆ. ಅಲ್ಲಿ ನಿನ್ನ ಶಿರಚ್ಛೇದನ ನಡೆಯುತ್ತದೆ."

"ಯಾವ ವಿಚಾರಣೆಯ ತಂಟೆಗೂ ಹೋಗದೆ!" ಎಂದು ತಿರಸ್ಕಾರದಿಂದ ಫೂತ್ಕರಿಸಿದ ಯುವಕ.

"ಎಲ್ಲಾ ಸಂಪ್ರದಾಯಗಳನ್ನು ಪಾಲಿಸಲಾಗುತ್ತೆ. ನಾವೇನು ಅನಾಗರಿಕರಲ್ಲ. ಅದು ನಿನಗೆ ಗೊತ್ತೇ ಇರಬೇಕು. ಮೊದಲು ವಿಚಾರಣೆ, ಅನಂತರ ಶಿರಚ್ಛೇದನ ಎಂದು ನಿರ್ಲಿಪ್ತನಾಗಿ ನುಡಿದ ಆ ಅಧಿಕಾರಿ.

"ನೀವೊಂದು ದೊಡ್ಡ ಗಂಡಾಂತರಕ್ಕೆ ಕೈ ಹಾಕ್ತಿಲ್ಲವೆ? ಇಂಗ್ಲೆಂಡಿನ ಪೋಲೀಸಿನವರಿಗೆ ಈ ಸುದ್ದಿ ತಿಳಿದರೇನು ಗತಿ? ನಾನು ಈ ಸುದ್ದಿ ಅವರಿಗೆ ತಿಳಿಸಬಹುದು ಅಥವಾ ತಪ್ಪಿಸಿಕೊಂಡು ಬಿಡಬಹುದು. ಆಗ ನೀವೆಲ್ಲಾ ದೊಡ್ಡ ಫಜೀತಿಗೆ ಸಿಕ್ಕು ಬೀಳೊಲ್ವೆ?"

ಅಂಥ ಅಚಾತುರ್ಯಕ್ಕೆ ಸಾಧ್ಯವೇ ಇಲ್ಲವೆಂದೂ ಇಲ್ಲಿ ಅವನನ್ನು ಸರ್ಪಗಾವಲಿಟ್ಟು ಕಾಯುತ್ತಿರುವುದಾಗಿಯೂ ಟಾಂಗ್ ಹೆಮ್ಮೆಯಿಂದ ಹೇಳಿದ.

"ನೌಕೆಯಲ್ಲಿ ಕೆಲಸಗಾರರು, ಅಧಿಕಾರಿಗಳು, ಇತರ ಪ್ರಯಾಣಿಕರು ಇರೋಲ್ಲವೆ? ಅವರೆಲ್ಲರಿಗೂ ಏನೋ ಕರಾಮತ್ತು ನಡೀತಿದೆ ಎಂದು ಸಂಶಯ ಬರೋಲ್ವೆ?" ಯುವಕ ಪ್ರಶ್ನಿಸಿದ.

ಅದಕ್ಕೆ ಟಾಂಗ್ ಗಾಬರಿಗೊಳ್ಳದೆ ಉತ್ತರಿಸಿದ: "ನೌಕೆ ಇಂಗ್ಲಿಷ್ ವರ್ತಕನ ಮಿತ್ರನಿಗೆ ಸೇರಿದೆ. ಗ್ಲೆನ್ ಲೈನ್ ಸ್ಟೀಮರ್‌ಗಳಲ್ಲಿ ಅದೊಂದು. ಅವರಿಗೆ ಚೀನೀ ವ್ಯಾಪಾರ ಅಗತ್ಯವಾಗಿದೆ. ಅದನ್ನು ನಾವು ಕೊಡುತ್ತೇವೆ. ಪ್ರತಿಯಾಗಿ ಅವರು ನಿನ್ನೊಬ್ಬನನ್ನೇ ಇತರ ವ್ಯಾಪಾರದ ಸರಕುಗಳೊಡನೆ ಒಂಟಿಯಾಗಿ ಒಯ್ಯಲು ಒಪ್ಪಿದ್ದಾರೆ. ಯಾವ ಗಲಭೆಗೂ ಅವಕಾಶವಿಲ್ಲ. ಇನ್ನೊಂದು ವಾರದಲ್ಲಿ ನೌಕೆ

ಕೇವಲ ಮಾತುಗಳು ಪೊಳ್ಳು ಮಾತುಗಳಲ್ಲ ಎಂದು ಅಧಿಕಾರಿ ಅರಿತ. ಕೂಡಲೇ ಅವನ ನಡತೆ ಪರಿವರ್ತನಗೊಂಡಿತು.

"ನಾನೊಬ್ಬನೇ ನಿಮ್ಮ ಕೊಲೆಯಂಥ ಹೇಯ ಕೆಲಸಕ್ಕೆ ಕೈ ಹಾಕಲಾರೆ. ಛೆ! ಛೆ! ಅದು ಅಸಾಧ್ಯದ ಮಾತು!... ನೋಡಿ! ಎಷ್ಟೇ ಆಗಲಿ, ನಾನೊಬ್ಬ ಸಣ್ಣ ಅಧಿಕಾರಿ. ನನ್ನ ಮೇಲಿನ ಅಧಿಕಾರಿಗಳ ಆಜ್ಞೆಯನ್ನು ನಾನು ಪಾಲಿಸಬೇಕು. ನೀವೊಂದು ಕೆಲಸ ಮಾಡಿ ಈಗ. ಅದರಿಂದ ನಿಮ್ಮ ಪ್ರಾಣ ಈಗಲೂ ಉಳಿದುಕೊಳ್ಳಬಹುದು. ಕ್ಯಾಂಟನ್ ಫಿತೂರಿಯಲ್ಲಾಗಲಿ ರಾಜಕೀಯ ಕ್ರಾಂತಿಯಲ್ಲಾಗಲಿ ನೀವು ಯಾವ ಪಾತ್ರವನ್ನೂ ವಹಿಸಿಲ್ಲವೆಂದು ಹೇಳಿಕೆ ಕೊಡಿ. ನಿಮ್ಮನ್ನು ಅಪಾದನೆ ಮಾಡುತ್ತಿರುವವರ ಮೇಲೆಯೇ ಆಪಾದನೆ ಹೊರಿಸಿ, ಇದೆಲ್ಲವೂ ಮಂಡಾರಿನ್ ಅಧಿಕಾರಿ ಹೂಡಿರುವ ಫಿತೂರಿ ಎಂದು ಹೇಳಿ. ನೀವೇ ಖುದ್ದಾಗಿ ಸ್ವಂತ ಇಚ್ಛೆಯಿಂದ ದೂತಾವಾಸಕ್ಕೆ ಬಂದು ಶರಣಾಗತರಾಗಿರುವ ನಿಮ್ಮ ಪ್ರಕರಣವನ್ನು ಪುನರ್ವಿಮರ್ಶೆ ಮಾಡಬೇಕೆಂದೂ ಪ್ರಾರ್ಥಿಸಿಕೊಳ್ಳಿ. ಇದೊಂದು ಉಳಿದಿರುವ ಅತ್ಯುತ್ತಮ ದಾರಿ" ಎಂದು ಅವನು ಸೂಚಿಸಿದ.

ಈ ಮಾರ್ಗ ಅತ್ಯಂತ ದೀನ ಕ್ರಮವೆಂದು ಯುವಕನಿಗೆ ಅನ್ನಿಸಿದರೂ ಮತ್ತಾವ ಮಾರ್ಗಗಳೂ ಇಲ್ಲದಿದ್ದುದರಿಂದ ಅವನು ಒಪ್ಪಿದ. ಅವರಂತೆ ಒಂದು ಪತ್ರವನ್ನು ಬರೆದು ಕೊಟ್ಟ. ಈ ಕ್ರಮದಿಂದ ತನ್ನನ್ನು ಅಪಹರಿಸಿದ ಚೀನೀ ಅಧಿಕಾರಿಗಳ ಹೃದಯವಾದರೂ ಸ್ವಲ್ಪ ಕರಗಿದೀತು ಎಂದು ನಂಬಿದ. ಹೀಗೆ ಕಾಗದ ಬರೆದು ಕೊಟ್ಟ ಕೂಡಲೇ ಟಾಂಗ್ ಅದನ್ನು ತನ್ನ ಜೇಬಿಗೆ ಸೇರಿಸಿದ. ವಿಲಕ್ಷಣ ನಗೆಯೊಂದನ್ನು ಬೀರಿ ಮೇಲೆದ್ದು ಹೊರಗೆ ಹೊರಟ. ಅವನನ್ನು ಮತ್ತೆ ಆ ಯುವಕ ಕಾಣಲಿಲ್ಲ.

ದಿನಗಳೆದಂತೆ ಈ ಪತ್ರ ಬರೆದು ಕೊಟ್ಟು ತಾನೊಂದು ದೊಡ್ಡ ತಪ್ಪು ಮಾಡಿಬಿಟ್ಟಿರುವುದಾಗಿ ಯುವಕನಿಗೆ ಅನಿಸತೊಡಗಿತು. ತಾನೇ ಸ್ವಂತ ಇಚ್ಛೆಯಿಂದ ದೂತಾವಾಸಕ್ಕೆ ಬಂದಿರುವುದಾಗಿ ಬರೆದು ಕೊಟ್ಟಿರುವುದರಿಂದ ಇಂಗ್ಲೆಂಡ್ ಸರಕಾರ ಚೀನೀ ದೂತಾವಾಸದ ಮೇಲೆ ತೆಗೆದುಕೊಳ್ಳಬಹುದಾಗಿದ್ದ ತನಿಖೆ ಕ್ರಮಗಳೆಲ್ಲ ಎಲ್ಲಿ ಹಾಳಾದವೋ ಎಂದು ಅವನು ಚಿಂತಿಸತೊಡಗಿದ.

ಒಂದೊಂದಾಗಿ ದಿನಗಳು ಉರುಳಿಹೋಗುತ್ತಿದ್ದುವು. ತಾನು ಜೀವಂತವಾಗಿ ದೂತಾವಾಸದಲ್ಲಿ ಸೆರೆಯಾಗಿರುವುದು ಜಗತ್ತಿನಲ್ಲಿ ಯಾರಿಗೂ ಗೊತ್ತಿಲ್ಲವೋ ಎನ್ನುವ ಕರಾಳ ಸಂಶಯ ಯುವಕನಿಗೆ ಉಂಟಾಯಿತು. ಅವನು ತಾನಿದ್ದ ಕೋಣೆಯಿಂದ ಬಾಹ್ಯ ಜಗತ್ತಿನೊಡನೆ ಸಂಪರ್ಕ ಬೆಳೆಸಲು ಸರ್ವ ಸಾಹಸ ಮಾಡಿದ. ತನ್ನ ಗೆಳೆಯರಿಗೆ ಕಾಗದಗಳನ್ನು ತಲುಪಿಸಿದರೆ ಲಂಚ ಕೊಡುವುದಾಗಿ ಕಾವಲುಗಾರರಿಗೆ ಹೇಳಿದ. ಅವರು ಒಪ್ಪಲಿಲ್ಲ. ಪುಟ್ಟ ಕಾಗದದ ಚೂರುಗಳ ಮೇಲೆ ಸಂದೇಶ ಬರೆದು ಕಿಟಕಿಯ ಮೂಲಕ ಬೀದಿಗೆ ಎಸೆಯಲು ಪ್ರಯತ್ನಿಸಿದ. ಸ್ನೋವಲ-

ಬೇಡಲು ನಾನು ಇಲ್ಲಿಗೆ ಬಂದೆ. ನಾನೂ ನಿಮ್ಮಂತೆ ಒಬ್ಬ ಕ್ರಿಶ್ಚಿಯನ್. ನೀವು ವೃತ್ತ-ಪತ್ರಿಕೆಗಳಲ್ಲಿ ಓದಿರಬಹುದು ಟರ್ಕಿಯ ಸುಲ್ತಾನ ಆರ್ಮೀನಿಯನ್ ಕ್ರಿಶ್ಚಿಯನ್ನರನ್ನು ಕೊಲೆ ಮಾಡುತ್ತಿದ್ದಾನೆ ಅಂತ. ಅದೇ ರೀತಿ ಚೀನದ ಚಕ್ರವರ್ತಿಯೂ ನನ್ನನ್ನು ಕೊಲ್ಲಲು ಯತ್ನಿಸಿ-ದ್ದಾನೆ. 'ಏಕೆಂದರೆ, ನಾನೊಬ್ಬ ಕ್ರಿಶ್ಚಿಯನ್. ಇಂಗ್ಲೆಂಡಿನಲ್ಲಿರುವಂತೆ ಎಲ್ಲರಿಗೂ ಪ್ರಜಾಸತ್ತಾ-ತ್ಮಕ ಅಧಿಕಾರ ಮತ್ತು ಒಳ್ಳೆಯ ಸರಕಾರ ಇರ-ಬೇಕೆಂದು ಕೇಳುವ ಒಂದು ರಾಜಕೀಯ ಪಕ್ಷಕ್ಕೆ ನಾನು ಸೇರಿದ್ದೇನೆ. ನಾನು ಯಾರಿಗೂ ಯಾವ ಹಾನಿಯನ್ನೂ ಮಾಡಿಲ್ಲ. ಆದರೂ ನನ್ನನ್ನು ವಂಚನೆಯಿಂದ ಇಲ್ಲಿಗೆ ಕರೆತಂದು ಬಲಾತ್ಕಾರ-ದಿಂದ ಸೆರೆಯಲ್ಲಿಟ್ಟಿದ್ದಾರೆ," ಎಂದು ನಿವೇದಿ-ಸಿಕೊಂಡ. ಇಷ್ಟು ದೀರ್ಘವಾಗಿ ತಾನು ಮಾತ-ನಾಡಿದರೆ ಅದು ಹೊರಗಿನ ದ್ವಾರಪಾಲಕರ ಕಿವಿಗೆ ಬೀಳುವ ಶಂಕೆಯಿದ್ದರೂ ಸೇವಕನ ಕನಿಕರವನ್ನು ಹಿಡಿಯಲು ಅವನು ಇಷ್ಟು ಮಾತನಾಡಲೇಬೇಕಾಗಿತ್ತು. ಆದಕ್ಕೆ ಕೋಲ್ ಯಾವ ಉತ್ತರವನ್ನು ಕೊಡಲಿಲ್ಲ. ಮೌನವಾಗಿ ಕಸ ಗುಡಿಸಿದ. ಹೊರಗೆ ಹೋಗುವಾಗ ಪಿಸು ಮಾತಿನಲ್ಲಿ ಉಸುರಿದ: "ಇಂಗ್ಲೆಂಡ್ ಸರಕಾರ ನಿನಗೆ ಸಹಾಯ ಮಾಡುವುದೋ ಇಲ್ಲವೋ ನನಗೆ ಗೊತ್ತಿಲ್ಲ. ನೀನೂ ಚೀನೀ, ಈ ಜನರೂ ಚೀನೀಯರು."

ಅವನ ನಿರಾಶಾದಾಯಕ ಉತ್ತರವನ್ನು ಕೇಳಿ ಕೈದಿ ಉದ್ವೇಗದಿಂದ ಹೇಳಿದ: "ಇಂಗ್ಲಿಷ್ ಸರಕಾರ ಖಂಡಿತವಾಗಿ ನನಗೆ ಸಹಾಯ ಮಾಡುತ್ತೆ. ಅದಕ್ಕೋಸ್ಕರವೇ ಈ ಜನ ನನ್ನನ್ನು ಇಷ್ಟು ಗುಟ್ಟಾಗಿ, ಇಂಥ ದಿಗ್ಬಂಧನದಲ್ಲಿ ಇರಿಸಿದ್ದಾರೆ. ಇಂಗ್ಲಿಷ್ ಸರಕಾರಕ್ಕೆ ನನ್ನ ಬಂಧನ ತಿಳಿದರೆ, ನನ್ನ ಅಧಿಕೃತ ವರ್ಗಾವಣೆ ಆಗದೆ ನನ್ನನ್ನು ಚೀನಕ್ಕೆ ಕದೊಯ್ಯಲು ಸಾಧ್ಯವಿಲ್ಲ."

ಇಂಗ್ಲಿಷ್ ಸೇವಕ ನಿರ್ಲಿಪ್ತನಾಗಿ ತನ್ನ ಕೆಲಸಗಳನ್ನು ತಾನು ಮಾಡಿಕೊಂಡು ಹೋಗು-

[illegible]. ಅವನು ತನಗೆ ಸಹಾಯ ಮಾಡುವನೋ ಇಲ್ಲವೋ ಎಂದು ಯುವಕನ ಮನ ಹೊಯ್ದಾಡುತ್ತಿತ್ತು. ಅವನು ಉತ್ಕಂಠಿತನಾಗಿ ಮತ್ತೆ ನುಡಿದ: "ಸರ್, ನನ್ನ ಪ್ರಾಣ ನಿಮ್ಮ ಕೈಯಲ್ಲಿದೆ. ಸರಿಯಾದ ಅಧಿಕಾರಿಗಳಿಗೆ ನನ್ನ ಬಂಧನದ ವಿಚಾರ ತಿಳಿದರೆ ನಾನು ಬದುಕಿಕೊಳ್ಳುತ್ತೇನೆ. ಇಲ್ಲದಿದ್ದರೆ ನನಗೆ ಸಾವು ಖಂಡಿತ. ಒಬ್ಬನ ಪ್ರಾಣ ಹೋಗುತ್ತಿರುವಾಗ, ಉಳಿಸಲು ಸಾಧ್ಯವಿದ್ದರೆ ಅವನ್ನು ಉಳಿಸುವುದು ಒಳ್ಳೆಯದಲ್ಲವೆ? ಒಬ್ಬ ಕ್ರಿಶ್ಚಿಯನ್ ಆಗಿ ನೀವು ಇನ್ನೊಬ್ಬ ಕ್ರಿಶ್ಚಿಯನ್ನನಿಗೆ ಮಾಡಬೇಕಾದ ಈ ಕರ್ತವ್ಯ ನಿಮ್ಮ ಧಣಿಗಾಗಿ ಮಾಡಬೇಕಾಗಿರುವ ಕರ್ತವ್ಯಕ್ಕೂ ಮಿಗಿಲಾದುದಲ್ಲವೆ?"

ಏನೋ ಎಂತೋ, ಈ ರೀತಿ ಒಬ್ಬ ಮನುಷ್ಯ ತನ್ನನ್ನು ಬೇಡಿಕೊಳ್ಳುವುದನ್ನಂತೂ ಕೋಲ್ ಇದುವರೆಗೆ ಕಂಡಿರಲಿಲ್ಲ. ಆತ ಯಾವಾಗಲೂ ಅತ್ಯಂತ ವಿಧೇಯ ಕೆಲಸಗಾರನಾಗಿದ್ದ. ಅಲ್ಲದೆ ತನ್ನ ಧಣಿಗಳ ಕಾರ್ಯಭಾರದ ವಿವರಗಳನ್ನು ತಲೆಗೆ ಹಚ್ಚಿಕೊಳ್ಳುತ್ತಲೂ ಇರಲಿಲ್ಲ. ಆತ ಒಬ್ಬ ನಿಷ್ಠಾವಂತ ಸೇವಕನಂತೆ ತನ್ನ ಕೆಲಸ ಮುಗಿಸಿ, ಅಲ್ಲಿಂದ ನಿರ್ಗಮಿಸಿದ.

ಅಂದು ರಾತ್ರಿ ಆ ಯುವಕ ನಿದ್ರಿಸಲಿಲ್ಲ. ತನ್ನ ಮನವಿಯಿಂದ ಇಂಗ್ಲಿಷ್ ಸೇವಕ ಕೋಲ್ ಪರಿವರ್ತಿತನಾಗಿದ್ದನೊ ಇಲ್ಲವೋ? ಎಲ್ಲವನ್ನೂ ತನ್ನ ಧಣಿಗಳಿಗೆ ನಿವೇದಿಸಿಬಿಡುವನೋ ಹೇಗೆ? ಏಂಬ ಆಸೆ–ನಿರಾಸೆ–ಭೀತಿಗಳ ಹೊಯ್ದಾಟಗಳಲ್ಲಿ ಅವನು ಇಡೀ ರಾತ್ರಿ ತನ್ನ ಹಾಸಿಗೆಯಲ್ಲಿ ಹೊರಳಾಡಿದ.

ಬೆಳಗಾದಾಗ ಕೋಲ್ ಅವನಿಗೆ ತಿಂಡಿ ತಂದು, ಅವನ್ನು ಒಂದು ಟೇಬಲ್ಲಿನ ಮೇಲಿರಿಸಿ, ಅತ್ತಿತ್ತ ತಿರುಗಿ ನೋಡದೆ ಹೊರಕ್ಕೆ ಹೋದ. ಯುವಕನ ಕರುಣಾಜನಕ ನೇತ್ರಗಳು ಅವನನ್ನೇ ಎವೆಯಿಕ್ಕದೆ ನೋಡುತ್ತಿದ್ದರೂ ಅವನು ಹಾಗೆ ಮಾಡಿದ್ದ. ಸಂಜೆ ಇದ್ದಲನ್ನು ತಂದು ಅಗ್ಗಿಷ್ಟಿಕೆಗೆ ಹಾಕಿದಾಗಲೂ ಅವನು ಒಂದು ಮಾತನ್ನೂ [illegible]. ಅದಕ್ಕೆ ಬದಲು ತಾನು ತಂದಿದ್ದ [illegible] ಕಡೆಗೆ ಬೆರಳು ತೋರಿಸಿ [illegible].

ಇದ್ದಲಿನ ಡಬ್ಬಿಯಲ್ಲಿ ಒಂದು ಬಿಳಿಯ ಚೀಟಿಯಿತ್ತು. ಯುವಕ ಅದನ್ನು ಬಡಿದುಕೊಳ್ಳುವ ಹೃದಯದಿಂದ ಕೈಗೆತ್ತಿಕೊಂಡು ಓದಿದ. "ನಾನು ನಿನ್ನ ಯಾರಾದರೂ ಒಬ್ಬ ಗೆಳೆಯರಿಗೆ ಪತ್ರ ತಲುಪಿಸಬಲ್ಲೆ. ಪೋಲೀಸರಿಗೆ ಪತ್ರ ತಲುಪಿಸಲಾರೆ. ನೀನು ಟೇಬಲ್ಲಿನ ಮುಂದೆ ಕುಳಿತು ಪತ್ರ ಬರೆದರೆ ಹೊರಗಿರುವ ಕಾವಲುಗಾರರಿಗೆ ಕಾಣಿಸುತ್ತದೆ. ನಿನ್ನ ಹಾಸಿಗೆಯಲ್ಲಿ ಕುಳಿತು ಬರೆದರೆ ಅವರಿಗೆ ಕಾಣಿಸುವುದಿಲ್ಲ," ಎಂದದರಲ್ಲಿ ಬರೆದಿತ್ತು.

ಯುವಕ ಕೂಡಲೇ ಹಾಸಿಗೆಯ ಮೇಲೆ ಹಾರಿ ಕುಳಿತ. ತನ್ನ ಬಳಿಯಿದ್ದ ಚೂರು ಸೀಸದ ಕಡ್ಡಿಯಿಂದ ತನ್ನ ಬಳಿಯಿದ್ದ ಒಂದು ಹಳೆಯ ವಿಸಿಟಿಂಗ್ ಕಾರ್ಡಿನ ಹಿಂದೆ ಬರೆದ: "ಡಾ. ಜೇಮ್ಸ್ ಕ್ಯಾಂಟ್ಲೀ,

೪೬, ಡೆವೊನ್‌ಷೈರ್ ಸ್ಟ್ರೀಟ್.

ದಯವಿಟ್ಟು ಈ ಸಂದೇಶ ತರುವ ದೂತನ ರಕ್ಷಣೆ ನೋಡಿಕೊಳ್ಳಿ. ಆತ ಬಡವ. ಅವನು ನನಗೆ ಸಹಾಯ ಮಾಡಿದ ವಿಷಯ ತಿಳಿದರೆ ಅವನ ನೌಕರಿ ಹೋಗುತ್ತದೆ. ನನ್ನನ್ನು ಚೀನೀ ದೂತಾವಾಸಕ್ಕೆ ಅಪಹರಿಸಿ ತಂದಿದ್ದಾರೆ. ಇಲ್ಲಿಂದ ನನ್ನನ್ನು ಕದ್ದು ಚೀನಕ್ಕೆ ಸಾಗಿಸಿ ಮರಣದಂಡನೆ ವಿಧಿಸುತ್ತಾರೆ. ಕೂಡಲೆ ನನ್ನನ್ನು ರಕ್ಷಿಸಿ. ನನ್ನನ್ನು ರವಾನೆ ಮಾಡಲು ನೌಕೆಯೊಂದು ಈಗಾಗಲೇ ಸಿದ್ಧವಾಗಿದೆ. ನಾನು ಯಾರೊಡನೆಯೂ ಸಂಪರ್ಕ ಬೆಳೆಸದಂತೆ ಗುಪ್ತವಾಗಿ ಇಟ್ಟಿದ್ದಾರೆ. ಅಯ್ಯೋ! ನನ್ನ ದುರ್ವಿಧಿಯೇ!"

ಆದರೆ ಈ ಚೀಟಿಯನ್ನು ಕೋಲ್ ನೇರವಾಗಿ ಅವರಿಗೆ ತಲುಪಿಸಲಿಲ್ಲ. ಆತ ಅಕ್ಟೋಬರ್ ೧೭ರವರೆಗೆ ತಡೆದ. ಅಂದು ಆತನಿಗೆ ಬಿಡುವು. ಆತ ಇನ್ನೊಂದು ಚೀಟಿ ಬರೆದು ಅದನ್ನು ಮತ್ತೊಬ್ಬ ಗೆಳೆಯನ ಮೂಲಕ ಅವರಿಗೆ ತಲುಪಿಸಿದ. ಆ ಚೀಟಿಯಲ್ಲಿ, "ಕಳೆದ ಭಾನುವಾರದಿಂದ ನಿಮ್ಮ ಗೆಳೆಯರೊಬ್ಬರು ಚೀನೀ ದೂತಾವಾಸದಲ್ಲಿ ಕೈದಿಯಾಗಿದ್ದಾರೆ. ಆತನನ್ನು ಚೀನಕ್ಕೆ ರವಾನಿಸಿ ಅಲ್ಲಿ ಮರಣದಂಡನೆ ವಿಧಿಸುತ್ತಾರಂತೆ. ಆ ಬಡಪಾಯಿಗೆ

ಕೂಡಲೇ ನೀವು ಸಹಾಯ ಮಾಡಿ ಬಿಡಿಸದಿದ್ದರೆ ಆತನನ್ನು ಯಾರ ಕಣ್ಣಿಗೂ ಬೀಳದಂತೆ ಚೀನಕ್ಕೆ ಕೊಂಡೊಯ್ಯುವುದು ಖಚಿತ. ನಾನು ನನ್ನ ಹೆಸರು ಹೇಳಲಾರೆ. ಆದರೆ ನಾನು ಹೇಳುತ್ತಿರುವುದು ಸತ್ಯ. ಆದ್ದರಿಂದ ನನ್ನ ಮಾತನ್ನು ನಂಬಿ. ನೀವೂ ಏನೇ ಮಾಡಿದರೂ ಬೇಗ ಮಾಡಿ. ಇಲ್ಲದಿದ್ದರೆ ಕಾರ್ಯ ಮೀರಿ ಹೋಗುವುದು. ಆತನ ಹೆಸರು ಲಿನ್ ಯೆನ್ ಸೆನ್ ಇರಬೇಕು" ಎಂದು ಬರೆದಿದ್ದ.

ಕ್ಯಾಂಟ್ಲೀ ದಂಪತಿಗಳು ಅಂದು ಶನಿವಾರ ಮನೆಯಲ್ಲೇ ಹಾಯಾಗಿ ಕಾಲ ಕಳೆಯು-ತ್ತಿದ್ದರು. ತಮ್ಮ ಚೀನೀ ವಿದ್ಯಾರ್ಥಿ ಏಕೆ ತುಂಬಾ ದಿನಗಳಿಂದ ಪಠಾತ್ತನೆ ಬರುವುದನ್ನು ನಿಲ್ಲಿಸಿಬಿಟ್ಟ ಎನ್ನುವುದಕ್ಕೆ ಅವರಿಗೆ ಈಗ ನಿಜವಾದ ಕಾರಣ ಅರಿವಾಯಿತು. ಈಗ ಅವರು ಕೂಡಲೇ ಕಾರ್ಯೋನ್ಮುಖರಾಗಬೇ-ಕಾಗಿತ್ತು. ಅವರು ವೈದ್ಯಶಾಸ್ತ್ರದ ಪ್ರೊಫೆಸರ್. ಅವರಿಗೆ ತನಿಖೆ, ಗುಪ್ತಚರ್ಯೆ, ಅಪಹರಣ, ರಾಜಕಾರಣ ಇವುಗಳು ತಿಳಿಯದ ವಿಚಾರಗಳೇ ಆಗಿದ್ದುವು. ಆದರೂ ಸರ್ ಹ್ಯಾಲಿಡೇ ಮೆಕಾರ್ಟನೀ ಚೀನೀ ದೂತಾವಾಸದ ಇಂಗ್ಲಿಷ್ ವಕೀಲ ಎಂದು ಅವರಿಗೆ ತಿಳಿದಿತ್ತು. ಆತನನ್ನು ಕೂಡಲೇ ನೋಡಲು ನಿರ್ಧರಿಸಿದರು. ಪೋಲೀಸರನ್ನು ಕಾಣಬೇಕೆಂದು ಅವರಿಗೆ ಹೊಳೆಯಲೇ ಇಲ್ಲ. ಅವರು ಇಂಗ್ಲಿಷ್ ವಕೀಲ-ನನ್ನು ಕಾಣಲು ಹೋದರು. ಆದರೆ ಆತ ಮನೆ ಬದಲಿಸಿ ಆರು ತಿಂಗಳಾಗಿತ್ತು; ಹೊಸ ವಿಳಾಸ ದೊರೆಯಲಿಲ್ಲ. ಆಗ ಅವರು ಪೋಲೀಸ್ ಠಾಣೆಗೆ ನಡೆದರು. ಅಲ್ಲಿ ಅವರು ನೀಡಿದ ವರದಿಯನ್ನು ಕೇಳಿ, ಪೋಲೀಸರು ಡಾ. ಕ್ಯಾಂಟ್ಲೀ ಅರೆಹುಚ್ಚ-ರಿರಬಹುದೆಂದು ತೀರ್ಮಾನಿಸಿ, ಅವರನ್ನು ಗೌರವದಿಂದ ಕಳಿಸಿಕೊಟ್ಟರು. ಮಧ್ಯರಾತ್ರಿಯಲ್ಲಿ ಮನೆ ಸೇರಿದ ಡಾ. ಕ್ಯಾಂಟ್ಲೀ ಮಾರನೆಯ ಬೆಳಿಗ್ಗೆ ಎಂಟು ಗಂಟೆಗೇ ಮತ್ತೊಬ್ಬ ಗೆಳೆಯ-ನನ್ನು ಜೊತೆ ಮಾಡಿಕೊಂಡು ಸ್ಕಾಟ್ಲೆಂಡ್ ಯಾರ್ಡಿಗೆ ಹೋದರು; ವಿದೇಶಾಂಗ ಶಾಖೆಗೆ ಹೋದರು. ಆದರೆ ಎಲ್ಲಿ ಹೋದರೂ ಅಂದು ಭಾನುವಾರವಾದುದರಿಂದ ಅವರಿಗೆ ಯಾವ ಜವಾಬ್ದಾರಿಯುತ ಅಧಿಕಾರಿಯೂ ದೊರೆಯ-ಲಿಲ್ಲ. ಕೊನೆಗೆ ಅವರು ನೇರವಾಗಿ ಚೀನೀ ದೂತಾವಾಸಕ್ಕೇ ನಡೆದುಬಂದರು. ಅವರನ್ನು ವಿಚಾರಿಸಲು ಟಾಂಗ್ ಬಂದ. ಅವನನ್ನು ಅವರು ಕೇಳಿದರು: "ನನ್ನ ಹಳೆಯ ವಿದ್ಯಾರ್ಥಿ-ಯೊಬ್ಬರನ್ನು ನೀವು ಇಲ್ಲಿ ಕೈದಿಯಾಗಿ ಇಟ್ಟಿ-ದ್ದೀರಿ. ನಾನು ಆತನನ್ನು ಕಾಣಬೇಕು. ತೋರಿಸಿ."

ಟಾಂಗನ ಮುಖ ಕಪ್ಪಿಟ್ಟಿತು. ಅವನು ಅಪುಡುಗಚ್ಚಿ, ನುಡಿದ: "ಇಲ್ಲಿ ಯಾರನ್ನೂ ನಾವು ಬಂಧನದಲ್ಲಿರಿಸಿಲ್ಲ: ನೀವು ಹೇಳುತ್ತಿರುವ ವಿದ್ಯಾರ್ಥಿಯ ಹೆಸರು ಏನು?"

"ಸನ್ ಯೆನ್."

"ಆ ಹೆಸರಿನ ಯಾರೂ ಈ ದೂತಾವಾಸದಲ್ಲಿ ಇಲ್ಲ."

# ಜಂಬೋ ಬಂಪರ್ ಡ್ರಾ 10-5-77

# ಕರ್ನಾಟಕ ರಾಜ್ಯ ಲಾಟರಿ




1ನೇ ಬಂಪರ್ ಬಹುಮಾನ

## ರೂ. 20,00,000

2ನೇ ಬಂಪರ್ ಬಹುಮಾನ

## ರೂ. 5,00,000

ರೂ. 2/- ಟಿಕೆಟ್ಟಿಗೆ

5 ಮೊದಲನೆಯ ಬಹುಮಾನಗಳು
**ರೂ. 1,00,000**

5 ಎರಡನೆಯ ಬಹುಮಾನಗಳು
**ರೂ. 10,000**

5 ಮೂರನೆಯ ಬಹುಮಾನಗಳು
**ರೂ. 5,000**

50 ನಾಲ್ಕನೆಯ ಬಹುಮಾನಗಳು
**ರೂ. 1,000**

100 ಐದನೆಯ ಬಹುಮಾನಗಳು
**ರೂ. 500**

1,000 ಆರನೆಯ ಬಹುಮಾನಗಳು
**ರೂ. 100**

5,000 ಏಳನೆಯ ಬಹುಮಾನಗಳು
**ರೂ. 20**

50,000 ಎಂಟನೆಯ ಬಹುಮಾನಗಳು
**ರೂ. 10**

ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿಟೆಡ್ ಬೆಂಗಳೂರು 560 052

CAS-MSIL-774 4 Kan.

"ಆತ ಇಲ್ಲಿ ಇದ್ದಾನೆ ಎಂದು ನನಗೆ ಗೊತ್ತು. ಸ್ಕಾಟ್ಲೆಂಡ್ ಯಾರ್ಡಿಗೂ ಗೊತ್ತು, ವಿದೇಶಾಂಗ ಕಚೇರಿಗೂ ಗೊತ್ತು." ಟಾಂಗ್ ಸ್ವಲ್ಪವೂ ಅಧೀರನಾಗಲಿಲ್ಲ. "ಅಂಥ ಯಾವ ವ್ಯಕ್ತಿಯೂ ದೂತಾವಾಸದಲ್ಲಿ ಇಲ್ಲ. ನಾವು ಯಾರನ್ನೂ ಇಲ್ಲಿ ಬಂಧನದಲ್ಲಿರಿಸಿಲ್ಲ," ಎಂದು ಒತ್ತಿ ಹೇಳಿದ. ಅಲ್ಲಿಗೆ ಬಂದಿದ್ದ ಅವರ ಮಿತ್ರನೂ, "ಎಲ್ಲೋ ಇದು ಊಹಾಪೋಹದ ಮಾತಿರಬೇಕು. ಬನ್ನಿ ಹೋಗೋಣ," ಎಂದರು.

ಆದರೂ ಡಾ. ಕ್ಯಾಂಟ್ಲೀ ಅಲ್ಲಿಂದ ಕದಲಲಿಲ್ಲ. ಚೀನೀ ದೂತಾವಾಸಕ್ಕೆ ತಾವು ಬಂದು, ತಮ್ಮ ಹಳೆಯ ವಿದ್ಯಾರ್ಥಿಯನ್ನು ಕಾಣಬೇಕೆಂದು ಒತ್ತಾಯಮಾಡಿದ ಬಳಿಕ, ಅಲ್ಲಿಂದ ತಾವು ತೆಪ್ಪಗೆ ಹಿಂದಕ್ಕೆ ಹೋಗುವುದು ಅತ್ಯಂತ ಅನರ್ಥಕಾರಿಯೆಂದು ಅವರಿಗೆ ತೋರಿತು. ತಾವು ಕಣ್ಮರೆಯಾದೊಡನೆಯೇ ಯುವಕನನ್ನು ಅವರು ಹೊರಕ್ಕೆ ಸಾಗಿಸಿಬಿಡಬಹುದು. ಎಲ್ಲರ ಕಣ್ಣು ತಪ್ಪಿಸಿ ನೌಕೆಗೆ ಸಾಗಿಸಿ ಕೂಡಲೇ ಆತನನ್ನು ಚೀನಕ್ಕೆ ರವಾನಿಸಿಬಿಡಬಹುದು. ಈ ಕಾರಣದಿಂದ ಅವರು ಒಬ್ಬ ಖಾಸಗಿ ಗುಪ್ತಚಾರನನ್ನು ಗೊತ್ತುಮಾಡಲು ಯತ್ನಿಸಿದರು. ಅಂದು ಭಾನುವಾರವಾಗಿದ್ದರಿಂದ ಯಾರೂ ದೊರೆಯಲಿಲ್ಲ. ಅವರು ದಿಕ್ಕೆಟ್ಟಂತಾದರು. ಸ್ಕಾಟ್ಲೆಂಡ್ ಯಾರ್ಡಿಗೆ ಹೋಗಿ ಒಬ್ಬ ಗುಪ್ತಚಾರನನ್ನು ದೂತಾವಾಸದ ಮೇಲೆ ಕಾವಲು ಹಾಕುವಂತೆ ಕೇಳಿಕೊಂಡರು. ಇದು ವಿದೇಶಾಂಗ ಖಾತೆಗೆ ಸಂಬಂಧಪಟ್ಟ ವಿಚಾರವಾದುದರಿಂದ ತಾವು ಕೈ ಹಾಕುವಂತಿಲ್ಲ ಎಂದು ಉತ್ತರ ಬಂದಿತು. ಗುಪ್ತಚಾರ ಬೇಕಿದ್ದರೆ ವೆಸ್ಟ್ ಎಂಡ್ ಪೋಲೀಸ್ ಠಾಣೆಗೆ ಹೋಗಲು ಅವರು ಡಾ. ಕ್ಯಾಂಟ್ಲೀಯವರಿಗೆ ತಿಳಿಸಿದರು. ಠಾಣೆಗೆ ಹೋದಾಗ ಅವರಿಗೆ ಇನ್ನೂ ನಿರಾಶೆ ಕಾದಿತ್ತು. ರುಜುವಾತುಪಡಿಸುವ ಯಾವ ದಾಖಲೆಗಳೂ ಇಲ್ಲದಿರುವಾಗ ಕೇವಲ ಊಹಾಪೋಹದ ಮೇಲೆ ತಾವು ಚೀನೀ-ದೂತಾವಾಸದ ಮೇಲೆ ಕಾವಲು ಹಾಕಲು ಬರುವುದಿಲ್ಲವೆಂದು ಅವರಿಗೆ ಅಲ್ಲಿ ತಿಳಿಸಲಾಯಿತು. "ಯಾರಾದರೂ ಒಬ್ಬ ನನ್ನ ಜೊತೆಗೆ ಕಳಿಸಿ; ಆತನಿಗೆ ನಾನು ಹಣ ಕೊಡುವೆ," ಎಂದು ಡಾ. ಕ್ಯಾಂಟ್ಲೀ ಪೋಲೀಸರನ್ನು ಪ್ರಾರ್ಥಿಸಿದರು.

"ನೋಡಿ! ಇಂಥಾ ಪ್ರಸಂಗಗಳಲ್ಲಿ ಉಪಯೋಗಕ್ಕೆ ಬರುವ ಒಬ್ಬ ನಿವೃತ್ತ ಪೋಲೀಸ್ ಪೇದೆ ಇಸ್ಲಿಂಗ್‌ಟನ್‌ನಲ್ಲಿ ಇದ್ದಾನೆ. ಅವನನ್ನು ಹೋಗಿ ಕೇಳಿ," ಎಂದು ಅವನ ಹೆಸರು, ವಿಳಾಸ ತಿಳಿಸಿದರು.

ಆ ದಿಕ್ಕಿನತ್ತ ಅವರು ವೇಗ ವೇಗವಾಗಿ ನಡೆಯುತ್ತಿರುವಾಗ ತಾವು ಫ್ಲೀಟ್ ಸ್ಟ್ರೀಟ್ ಮೂಲಕ ಹಾದು ಹೋಗುತ್ತಿರುವುದು ಅವರ ಗಮನಕ್ಕೆ ಬಂತು. ಕೂಡಲೇ ಅವರ ತಲೆಯಲ್ಲಿ ಯಾವುದೋ ಒಂದು ಹೊಸ ಆಲೋಚನೆ ಮಿಂಚಿತು. ಅವರು ನೇರವಾಗಿ 'ಟೈಮ್ಸ್' ದಿನಪತ್ರಿಕೆಯ ಕಚೇರಿಯೊಳಗೆ ನುಗ್ಗಿದರು. ಬಾಗಿಲ ಬಳಿಯ ಸ್ವಾಗತಕಾರ ಅವರನ್ನು ತಡೆದು ಅವರು ಬಂದಿರುವ ಕಾರ್ಯವೇನೆಂದು ಕೇಳಿ ಒಂದು ಚೂರು ಕಾಗದವನ್ನು ಕೊಟ್ಟ. ಡಾ. ಕ್ಯಾಂಟ್ಲೀಯವರು ಅವಸರದಲ್ಲಿ ಗೀಚಿದರು.

'ಯುವಕನ ಅಪಹರಣ. ಚೀನೀ ದೂತಾವಾಸದಲ್ಲಿ ಬಂಧನ. ಪ್ರಾಣಾಪಾಯದ ಶಂಕೆ.'

ಆ ಚೀಟಿಯನ್ನು ಓದಿ ಸ್ವಾಗತಕಾರ, "ಸಂಪಾದಕರೇ ಇದನ್ನು ವಿಚಾರಿಸಬೇಕು. ಈಗ ಅವರು ಕಚೇರಿಯಲ್ಲಿಲ್ಲ. ರಾತ್ರಿ ಹತ್ತು ಗಂಟೆಗೆ ಅವರು ಬರುತ್ತಾರೆ. ಆಗ ಬನ್ನಿ," ಎಂದ.

ಡಾ. ಕ್ಯಾಂಟ್ಲೀಗೆ ಸಾಕಾಗಿತ್ತು. ಅವರು "ಖಂಡಿತ ಬರುವೆ," ಎಂದು ಅಲ್ಲಿಂದ ಇಂಸ್ಲಿಂಗ್‌ಟನ್‌ನಲ್ಲಿದ್ದ ನಿವೃತ್ತ ಪೋಲೀಸ್ ಪೇದೆಯನ್ನು ಹುಡುಕುತ್ತಾ ಹೊರಟರು. ಅಲ್ಲಿ ಅವನು ದೊರೆತರೂ ಅವನಿಗೆ ಬೇರೊಂದು ಕಾರ್ಯಭಾರವಿದ್ದುದರಿಂದ, ಬದಲಿಯವನನ್ನು ನೇಮಕಮಾಡಲು ಒಪ್ಪಿಕೊಂಡ.

ಇಷ್ಟು ಹೊತ್ತಿಗೆ ಡಾ. ಕ್ಯಾಂಟ್ಲೀ ಆಯಾಸಗೊಂಡಿದ್ದರು. ಅವರಿಗೆ ವಯಸ್ಸಾಗಿತ್ತು. ಆದರೆ ಕರ್ತವ್ಯಪ್ರಜ್ಞೆ ಅವರನ್ನು ಕೈ ಬೀಸಿ ಕರೆಯುತ್ತಿತ್ತು. ಅವರು ರಾತ್ರಿ ಹತ್ತು ಗಂಟೆಗೆ ಸರಿಯಾಗಿ 'ಟೈಮ್ಸ್' ಪತ್ರಿಕೆಯ

# ಬೇಡೇಕರ್ ಉಪ್ಪಿನಕಾಯಿಯನ್ನು ತಯಾರಿಸುವುದು ಎಷ್ಟು ಸುಲಭ

ನೀವು ಸಿದ್ಧವಾದ ಉಪ್ಪಿನಕಾಯಿಯ ಮಸಾಲೆಯನ್ನು (ರೆಡಿ ಮಿಕ್ಸ್ಡ್ ಪಿಕಲ್ ಸ್ಪೈಸಿಸ್) ಕೊಂಡಾಗ ಇದು ಕೇವಲ ಮಸಾಲೆ ಎಂದಿಷ್ಟೇ ಭಾವಿಸಬೇಡಿರಿ. ನಿಮ್ಮ ತೋಟದ ಹಚ್ಚ ಹಸಿರು ಮಾವಿನಕಾಯಿ ಅಥವಾ ಬಂಗಾರದ ಬಣ್ಣದ ನಿಂಬೆ ಇವುಗಳಿಂದ ಉಪ್ಪಿನಕಾಯಿ ತಯಾರಿಸುವ ಸೂತ್ರವೇ (ಫಾರ್ಮ್ಯುಲಾ) ಇದಾಗಿದೆ. ಪ್ರತಿಯೊಂದು ಪ್ಯಾಕಿನೊಂದಿಗೆ ನೀಡಲಾದ ನಿರ್ದೇಶನಗಳನ್ನು ಪಾಲಿಸಿರಿ, ಮತ್ತು ಉತ್ತಮ ಉಪ್ಪಿನಕಾಯಿಯನ್ನು ತಯಾರಿಸಿರಿ.

ನೀವು ಅಷ್ಟೇ ಅಲ್ಲ, ನಿಮ್ಮ ಪರಿವಾರದವರೆಲ್ಲ ಈ ಉಪ್ಪಿನಕಾಯಿಯನ್ನು ಬಹಳೇ ಮೆಚ್ಚುವಿರಿ.

ಹಾಂ, ಮತ್ತೆ ನೀವು ಕೂಡ ಬೇಡೇಕರರಷ್ಟೇ ಉತ್ತಮವಾಗಿ ಉಪ್ಪಿನಕಾಯಿಯನ್ನು ತಯಾರು ಮಾಡುತ್ತೀರಿ, ಅದು ಕೂಡ ಯಾವ ಶ್ರಮವಿಲ್ಲದೆ, ಆಡುತ್ತ, ನಗುನಗುತ್ತ!

ಬೇಡೇಕರ 'ರೆಡಿ ಮಿಕ್ಸ್ಡ್ ಪಿಕಲ್ ಸ್ಪೈಸಿಸ್' (ಉಪ್ಪಿನಕಾಯಿಯ ಮಸಾಲೆ) ಪಡೆಯಿರಿ ಮತ್ತು ನೀವೇ ಸ್ವತಃ ಉಪ್ಪಿನಕಾಯಿಯನ್ನು




ತಯಾರಿಸಿ ನೋಡಿರಿ. ಒಂದು ವೇಳೆ, ನಿಮಗೆ ತಯಾರಿಸುವುದು ಬೇಡವಾಗಿದ್ದರೆ, ಬೇಡೇಕರರ ವಿವಿಧ ತರಹದ ಉಪ್ಪಿನಕಾಯಿಗಳು ದೊರೆಯುತ್ತವೆ. ನಿಮ್ಮ ನಚ್ಚಿನದನ್ನು ಆರಿಸಿರಿ.



## ಬೇಡೇಕರ್

ಮುಂಬಯಿ 400 004



ವಿತರಕರು : ದಾಸ್ತಾನುದಾರರು : ಮೆ|| ವಿಶಾಲ ಟ್ರೇಡರ್ಸ್, ೧೫ ನೇ ಮಂಪಡಿ. ಶಫಿ ಕಟ್ಟಡ, ಕಲಾಸಿಪಾಳ್ಯಂ ಮುಖ್ಯ ಬೀದಿ, ಬೆಂಗಳೂರು-೫೬೦೦೦೨ ಫೋ: ೬೩೦೨೯

ಭೇಟಿಮಾಡಿ, ಎಲ್ಲ ಸಂಗತಿಗಳನ್ನೂ ತಿಳಿಸಿದರು. ಅತ್ಯಂತ ಚುರುಕಾಗಿ, ಉತ್ಸಾಹಭರಿತನಾಗಿ ಕಾಯುತ್ತಿದ್ದ ಸಂಪಾದಕರು ಹೇಳಿದರು : "ಇದು ನಿಜಕ್ಕೂ ಅತ್ಯಂತ ವಿಸ್ಮಯಕರ ಮತ್ತು ಮಹತ್ವದ ವಿಚಾರ. ಸಂಪಾದಕೀಯ ಮಂಡಲಿಗೆ ತಿಳಿಸದೆ ನಾನೊಬ್ಬನೇ ಏನನ್ನೂ ಮಾಡಲಾರೆ."

ಡಾ. ಕ್ಯಾಂಟ್ಲೀಯವರಿಗೆ ಅತ್ಯಂತ ನಿರಾಸೆಯಾಯಿತು. ಅವರು ತುಂಬಾ ಬೇಸರದಲ್ಲಿ ಅಲ್ಲಿಂದ ಕಾಲ್ತೆಗೆದರು. ಅವರ ಪ್ರತಿಯೊಂದು ಪ್ರಯತ್ನವೂ ಸಂಪೂರ್ಣವಾಗಿ ನಿರರ್ಥಕಗೊಂಡಿದ್ದಂತೆ ಅವರಿಗೆ ಅನಿಸಿತು.

ಅವರು ರಾತ್ರಿ ಹನ್ನೊಂದೂವರೆ ಗಂಟೆಗೆ ಮನೆ ತಲುಪಿದರು. ಬೆಳಗಿನ ಎಂಟು ಗಂಟೆಯಿಂದ ಅವರು ಸತತವಾಗಿ ಲಂಡನ್ನಿನ ಹಾದಿ ಬೀದಿಗಳನ್ನು ಸುತ್ತಿ ದಣಿದಿದ್ದರೂ ಅವರಿಗೆ ನಿದ್ರೆ ಹತ್ತಲಿಲ್ಲ.

"ತೆಪ್ಪಗೆ ಮಲಗಿ ನಿದ್ರಿಸಿ. ನಾಳೆ ಬೆಳಿಗ್ಗೆ ಯಾವುದಾದರೂ ಹೊಸ ಉಪಾಯ ಹೊಳೆದೀತು," ಎಂದು ಅವರ ಪತ್ನಿ ಹೇಳುತ್ತಿದ್ದರೂ ಅವರು ಕೇಳದೆ ಹಾಗೆ ಬಿಟ್ಟು ಬಿಟ್ಟು ಕುಳಿತರು. ಇಡೀ ಜೀವನಮಾನವನ್ನು ಅವರು ವಿಜ್ಞಾನಿಯಾಗಿ ಕಳೆದಿದ್ದರು. ಮತ್ತೆ ಮತ್ತೆ ಪ್ರಯತ್ನಗಳನ್ನು ಮಾಡುವುದರ ಮಹತ್ವ ಅವರಿಗೆ ಚೆನ್ನಾಗಿ ತಿಳಿದಿತ್ತು. ಅವರು ಬೆಚ್ಚಗಿನ ಉಡುಪು ಧರಿಸಿ ಆ ನಡುರಾತ್ರಿಯಲ್ಲಿ ಮನೆ ಬಿಟ್ಟು ಹೊರಟರು. ಇಡೀ ರಾತ್ರಿ ನಿದ್ರೆಗೆಟ್ಟು ತಾವೇ ಚೀನೀ ದೂತಾವಾಸವನ್ನು ಖುದ್ದಾಗಿ ಕಾಯ್ದರು. ಅವರು ಹಾಗೆ ಮಾಡಿದ್ದು ಒಳ್ಳೆಯದೇ ಆಯಿತು. ಆ ಮೊದಲು ಅವರು ಕಂಡಿದ್ದ ನಿವೃತ್ತ ಪೋಲೀಸನು ಯಾವ ಬದಲಿ ಪೋಲೀಸ್ ಪೇದೆಯನ್ನೂ ಅಲ್ಲಿ ಕಾವಲಿಗೆ ನೇಮಿಸಿರಲಿಲ್ಲ. ಬೆಳಕು ಹರಿಯುವವರೆಗೂ ಅವರು ಚೀನೀ ದೂತಾವಾಸಕ್ಕೆ ಸರ್ಪಗಾವಲಿನಂತಿದ್ದು, ಪ್ರಾತಃಕಾಲ ಸಾಲ್ಟರ್ ಎಂಬ ಖಾಸಗೀ ಪತ್ತೇದಾರರ ಕಚೇರಿ ತೆರೆದ ಕೂಡಲೇ ಅಲ್ಲಿನ ಅನೇಕ ಪೇದೆಗಳಿಗೆ ಹಣ ಕೊಟ್ಟು ಕಾವಲಿಗೆ ಹಾಕಿದರು. ಹಗಲೂ ರಾತ್ರಿ ಅವರು ದೂತಾವಾಸವನ್ನು ಕಾಯಬೇಕೆಂದು ಆಜ್ಞೆ ಮಾಡಿದರು.

ಅಲ್ಲಿಂದ ಅವರು ನೇರವಾಗಿ ವಿದೇಶಾಂಗ ಕಚೇರಿಗೆ ಹೋಗಿ ಎಲ್ಲ ಸಂಗತಿಗಳನ್ನೂ ಅಲ್ಲಿನ ಅಧಿಕಾರಿಗೆ ತಿಳಿಸಿದರು. ಆತ ನಿರಾಶಾಭಾವದಲ್ಲಿಯೇ ಹೇಳಿದ : "ನೋಡಿ! ಈ ಪ್ರಕರಣದಲ್ಲಿ ಆತ ಅಪಹರಣಗೊಂಡಿದ್ದಾನೆ ಎಂದು ಯಾರೋ ಬರೆದ ಪತ್ರ ಬಿಟ್ಟು ಬೇರಾವ ದಾಖಲೆಗಳೂ ಇಲ್ಲ. [illegible]. ಯಾವ ತೀವ್ರ ಕ್ರಮ ಕೈಗೊಂಡರೂ ರಾಜತಾಂತ್ರಿಕವಾಗಿ ತೊಂದರೆಗಳು ಉದ್ಭವವಾಗುತ್ತವೆ. ಆದರೂ ನಾನು ಒಂದು ಕೆಲಸ ಮಾಡುವೆ. ಚೀನಕ್ಕೆ ಯಾನಮಾಡಲು ಒಂದು ನೌಕೆಯನ್ನು ಚೀನೀ ದೂತಾವಾಸ ಗೊತ್ತುಪಡಿಸಿದೆಯೋ, ಇಲ್ಲವೋ ಎಂಬುದನ್ನು ತಿಳಿಯಲು ಸ್ಕಾಟ್‌ಲೆಂಡ್ ಯಾರ್ಡಿಗೆ ಆಜ್ಞಾಪಿಸುವೆ," ಎಂದ.

ಸ್ಕಾಟ್‌ಲೆಂಡ್ ಯಾರ್ಡ್ ಬೇಕೆಂದರೆ ಚುರು-

ಪ್ರಜೆಗಳಾಗಲಿ ಇಂಗ್ಲೆಂಡಿನ ಪ್ರಜೆಗಳಾಗಲಿ ಈ ಬಗೆಯ ಅಪಹರಣ, ಗುಪ್ತ ಬಂಧನ, ಗಡೀಪಾರು, ಅತ್ಯಾಚಾರಗಳನ್ನು ಸಹಿಸೋಲ್ಲ. ನಿಮ್ಮ ಮಾತು ಸುಳ್ಳಾಗಿದ್ದಲ್ಲಿ ನಿಮ್ಮನ್ನು ನೀವೇ ರಕ್ಷಿಸಿಕೊಳ್ಳಬೇಕಾದೀತು. ಜನತೆ ಆಗಲೇ ಉದ್ರೇಕಗೊಂಡಿದೆ. ದ್ವಾರದ ಸ್ಥಳದಲ್ಲಿ ದಂಡು ಜನರು ನಿಮ್ಮ ದೂತಾವಾಸಕ್ಕೆ ಮುತ್ತಿಗೆ ಹಾಕಿ, ಕಾಯುತ್ತಿದ್ದಾರೆ. ನಿಜ ಹೇಳಿ! "ಎಂದು ಸ್ಪಷ್ಟಪಡಿಸಿದರು.

ಆಗ ದೂತಾವಾಸದ ಇಂಗ್ಲಿಷ್ ವಕೀಲ ಸರ್ ಹ್ಯಾಲಿಡೇ ಮೆಕಾರ್ಟಿನಿ ಅಲ್ಲಿಗೆ ಹಾಜರಾದ. ವರದಿಗಾರರು ಅವನನ್ನು ಕೇಳಿದರು. "ನಿಮಗೆ ವಿದೇಶಾಂಗ ಕಚೇರಿಯಿಂದ ಕರೆ ಬಂದಿತ್ತಲ್ಲವೆ?"

"ಹೌದು, ಬಂದಿದೆ."

"ಈ ಪ್ರಕರಣದ ಬಗ್ಗೆ ಏನು ಹೇಳುವಿರಿ?"

"ಪ್ರಕಟವಾಗಿರುವ ವಿಚಾರಗಳನ್ನು ಬಿಟ್ಟು, ಹೆಚ್ಚಿಗೆ ಏನನ್ನೂ ಹೇಳಲಾರೆ."

"ವಿದೇಶಾಂಗ ಖಾತೆಯ ಲಾರ್ಡ ಸಾಲಿಸ್‌ಬರಿ ಚೀನೀ ರಾಯಭಾರಿಗಳಿಗೆ ಖಂಡಿತ ಚೀನೀ ಯುವಕನನ್ನು ಬಿಡುಗಡೆ ಮಾಡಿರೆಂದು ಆಜ್ಞಾಪಿಸಿಲ್ಲವೆ?".

"ಹೌದು; ಆದರೆ ಇಲ್ಲಿ ಬಂಧಿತರು ಯಾರೂ ಇಲ್ಲ. ಇಲ್ಲಿರುವ ಯುವಕ ತಾವೇ ಸ್ವಂತ ಇಚ್ಛೆಯಿಂದ ದೂತಾವಾಸಕ್ಕೇ ಬಂದು ಶರಣಾಗಿದ್ದಾನೆ. ಯಾರೂ ಅವನನ್ನು ಅಪಹರಣ ಮಾಡಿಲ್ಲ. ಆತ ಒಬ್ಬ ಗುಪ್ತಚಾರನಿರಬೇಕೆಂಬ ಸಂಶಯದ ಮೇಲೆ ಆತನನ್ನು ನಾವು ಇನ್ನೂ ಇಲ್ಲೇ ಇರಿಸಿಕೊಂಡಿದ್ದೇವೆ. ಚೀನೀ ಸರಕಾರದ ಆಜ್ಞೆಯನ್ನು ಕಾಯುತ್ತಿದ್ದೇವೆ.

"ಆತ ಚೀನೀ ಪ್ರಜೆ. ದೂತಾವಾಸ ಚೀನೀ ಪ್ರದೇಶ. ಇಲ್ಲಿಗೆ ಆಗಮಿಸಿದ ಯಾವ ಚೀನೀ ಪ್ರಜೆಯನ್ನಾಗಲಿ ಸಂಶಯದ ಮೇಲೆ ದಸ್ತಗಿರಿ ಮಾಡಬಹುದು. ಇಂಗ್ಲೆಂಡ್ ಭೂಪ್ರದೇಶದಲ್ಲಿ ಹೀಗೆ ವಾರೆಂಟ್ ಇಲ್ಲದೆ ದಸ್ತಗಿರಿಯಾಗಿದ್ದ ಪಕ್ಷ ಅದು ಅಕ್ರಮವಾಗುತ್ತಿತ್ತು. ಈಗ ಯಾವ ಅಕ್ರಮವೂ ನಡೆದಿಲ್ಲ."

"ಆತನಿಗೆ ನೀವು ಚಿತ್ರಹಿಂಸೆ ಕೊಡುತ್ತಿಲ್ಲವೆ?" ಎಂದೊಬ್ಬ ವರದಿಗಾರ ಕೇಳಿದ.

"ಆತನನ್ನು ತುಂಬಾ ಚೆನ್ನಾಗಿ ನೋಡಿಕೊಳ್ಳಲಾಗುತ್ತಿದೆ." ಎಂದು ಮೆಕಾರ್ಟನಿ ಆಶ್ವಾಸನೆ ನೀಡಿದ. ಆ ಇಂಗ್ಲಿಷ್ ವಕೀಲನ ಸಮಾಧಾನಗಳನ್ನು ಬ್ರಿಟಿಷ್ ಪತ್ರಿಕಾಕರ್ತರು ಪೂರ್ತಿಯಾಗಿ ನಂಬಲಿಲ್ಲ.

ಬ್ರಿಟಿಷ್ ವಿದೇಶಾಂಗ ಶಾಖೆಯು ಬಂಧಿತ ವ್ಯಕ್ತಿಯನ್ನು ಬಿಡುಗಡೆ ಮಾಡಬೇಕೆಂದು ನೀಡಿದ ಆದೇಶವನ್ನು ಪ್ರಸ್ತಾಪಿಸಿ, ಚೀನೀ ಸರಕಾರ ಅನಾಗರಿಕ ರೀತಿಯಲ್ಲಿ ಒಬ್ಬ ವ್ಯಕ್ತಿಯನ್ನು ಅಪಹರಿಸಿ ಗುಪ್ತವಾಗಿ ತಮ್ಮ ದೂತಾವಾಸದಲ್ಲಿ ಸೆರೆ ಇಟ್ಟಿರುವ ಸಂಗತಿಯನ್ನು ಖಂಡಿಸಿ ಎಲ್ಲ ಪತ್ರಿಕೆಗಳಲ್ಲಿಯೂ ಸಂಪಾದಕೀಯ ಲೇಖನಗಳು ಪ್ರಕಟವಾದುವು. ಕೂಡಲೇ ಸ್ಕಾಟ್ಲೆಂಡ್ ಯಾರ್ಡ್ ಚೀನೀ ದೂತಾವಾಸಕ್ಕೆ ಕಾವಲಿಟ್ಟಿತು. ಬ್ರಿಟನ್ನಿನ ವಿದೇಶಾಂಗ ಮಂತ್ರಿ ಲಾರ್ಡ್ ಸ್ಯಾಲಿಸ್‌ಬರಿಯು ಚೀನೀ ರಾಯಭಾರಿಗೆ ಒಂದು ಅಧಿಕೃತ ಪ್ರತಿಭಟನಾಪತ್ರ ಬರೆದು ಬಂಧಿತ ವ್ಯಕ್ತಿಯನ್ನು ಕೂಡಲೇ ಬಿಡುಗಡೆ ಮಾಡುವಂತೆ ಆದೇಶ ನೀಡಿದರು.

ಮುಂದಿನ ಎರಡು ಗಂಟೆಗಳಲ್ಲಿಯೇ ಚೀನೀ ದೂತಾವಾಸದ ಅಧಿಕಾರಿಗಳು ಬಂಧಿತ ಯುವಕನೆಡೆಗೆ ಬಂದು ಬಟ್ಟೆ ಧರಿಸಿಕೊಂಡು ಸಿದ್ಧವಾಗುವಂತೆ ಹೇಳಿದರು. ಆತ ತನ್ನ ಕೋಟು, ಬೂಟುಗಳನ್ನು ಹಾಕಿಕೊಂಡ.

ತನ್ನನ್ನು ಬಿಡುಗಡೆ ಮಾಡುವರೊ ಇಲ್ಲವೇ ಮತ್ತಾವುದಾದರೂ ನೆಲ ಮಾಳಿಗೆಗೆ ಒಯ್ದು ಗುಂಡಿಟ್ಟು ಕೊಲ್ಲುವರೋ? ಎಂದು ಸಂಶಯ ಯುವಕನಿಗೆ ಉಂಟಾಯಿತು.

"ನನ್ನನ್ನು ಎಲ್ಲಿಗೆ ಕರೆಯುತ್ತೀರಿ?" ಎಂದು ಅವನು ಪ್ರಶ್ನಿಸಿದ.

ಅದಕ್ಕೆ ಯಾರೂ ಉತ್ತರ ಕೊಡಲಿಲ್ಲ. ಮೌನವಾಗಿ ಅವರು ಅವನನ್ನು ಒಂದು ಸುಸಜ್ಜಿತವಾದ ವಿಸ್ತಾರವಾದ ದಿವಾನ್‌ಖಾನೆಗೆ ಕರೆದುಕೊಂಡು ಬಂದರು. ಅಲ್ಲಿದ್ದ ಒಂದು ಸೋಫಾದ ಮೇಲೆ ಮೂವರು ವ್ಯಕ್ತಿಗಳು ಕುಳಿತಿದ್ದರು. ಅವರಲ್ಲೊಬ್ಬರು ಡಾ. ಕ್ಯಾಂಟ್ಲೆ. ಯುವಕನಿಗೆ ಅವರ ಸ್ನೇಹಪರ ಮುಖವನ್ನು ನೋಡಿದೊಡನೆಯೇ ಮತ್ತೊಮ್ಮೆ ಹುಟ್ಟಿ ಬಂದಂತಾಯಿತು. ಅವರ ಜೊತೆಗೆ ಇದ್ದ

ಇನ್ನಿಬ್ಬರಲ್ಲಿ ಒಬ್ಬರು ಸ್ಕಾಟ್ಲೆಂಡ್ ಯಾರ್ಡಿನ ಪೋಲೀಸ್ ಇನ್‌ಸ್ಪೆಕ್ಟರ್, ಇನ್ನೊಬ್ಬರು ವಿದೇಶಾಂಗ ಕಚೇರಿಯ ಒಬ್ಬ ಅಧಿಕಾರಿ. ಅಲ್ಲಿ ಟಾಂಗನೂ ಇರಲಿಲ್ಲ, ಚೀನೀ ದೂತಾವಾಸದ ಒಬ್ಬ ನರಪಿಳ್ಳೆಯೂ ಇರಲಿಲ್ಲ.

ಚೀನೀ ದೂತಾವಾಸದ ಹೆಬ್ಬಾಗಿಲು ವಿಶಾಲವಾಗಿ ತೆರೆದುಕೊಂಡಿತು. ನಾಲ್ಕು ಜನರೂ ಸಂತೋಷದಿಂದ ಹೊರಕ್ಕೆ ಬಂದರು. ನೂರಾರು ಪತ್ರಿಕಾಕರ್ತರು ಅವರನ್ನು ಮುತ್ತಿಕೊಂಡು ಯುವಕನಿಗೆ ಪ್ರಶ್ನೆಗಳ ಸುರಿಮಳೆಯನ್ನೇ ಹಾಕಿದರು. ಎಲ್ಲಕ್ಕೂ ಅವನು ಸ್ನೇಹಪರನಾಗಿ ಉತ್ತರಿಸಿದ. ಆದರೆ ತಾನು ಹೇಗೆ ಬಾಹ್ಯಜಗತ್ತಿನೊಡನೆ ಸಂಪರ್ಕ ಬೆಳೆಸಿದೆನೆಂಬುದನ್ನು ಆತ ಹೇಳಲು ಒಪ್ಪಲಿಲ್ಲ. ತನ್ನ ಪ್ರಾಣ ಉಳಿಸಿದ್ದ ಸಾಮಾನ್ಯ ಸೇವಕನಿಗೆ ಆತ ಪ್ರತ್ಯುಪಕಾರ ಸಲ್ಲಿಸಬೇಕಾಗಿತ್ತು.

ಸ್ಕಾಟ್ಲೆಂಡ್ ಯಾರ್ಡಿಗೆ ಹೋಗಿ, ಅಲ್ಲಿನ ಅಧಿಕೃತ ಪತ್ರಗಳಿಗೆ ಸಹಿ ಹಾಕಿದ ಬಳಿಕ ಆ ಯುವಕ ಡಾ. ಕ್ಯಾಂಟ್ಲೀಯವರ ಮನೆಗೆ ಹೋಗಿ ಸಂತೋಷದಿಂದ ಊಟ ಮಾಡಿದ. ಅನಂತರ ಲಂಡನ್ನಿನ ಪ್ರತಿಯೊಂದು ಪತ್ರಿಕೆಗೂ ತನ್ನ ಕೃತಜ್ಞತೆಗಳನ್ನು ಬರೆದು ತಿಳಿಸಿದ:

"ಪತ್ರಿಕಾಸ್ವಾತಂತ್ರ್ಯ, ಪ್ರಜಾಪ್ರಭುತ್ವ, ಸ್ವಾತಂತ್ರ್ಯಪ್ರೇಮ ಇವುಗಳಿಗೆ ತವರುಮನೆಯಂತಿರುವ ಇಂಗ್ಲೆಂಡ್ ದೇಶ ನನಗೆ ಪುನರ್ಜನ್ಮ ಕೊಟ್ಟಿದೆ. ಇದೇ ಬಗೆಯ ರಾಷ್ಟ್ರವನ್ನು ಕಟ್ಟಲು ಯತ್ನಿಸುತ್ತಿರುವ ನನಗೆ ಚೀನೀ ಸರಕಾರದ ಕ್ರೂರ ದಬ್ಬಾಳಿಕೆಯನ್ನು ವಿರೋಧಿಸಲು ನಿಮ್ಮ ಪತ್ರಿಕೆಗಳು, ಸರಕಾರ ಮತ್ತು ಜನತೆ ಮತ್ತೊಮ್ಮೆ ಅವಕಾಶ ಮಾಡಿಕೊಟ್ಟಿವೆ. ನಾನು ನಿಮ್ಮ ಉಪಕಾರವನ್ನು ಎಂದಿಗೂ ಮರೆಯಲಾರೆ. ನಿಮ್ಮ ಆದರ್ಶಗಳನ್ನು ನನ್ನ ನಿರ್ಭಾಗ್ಯ ದೇಶದಲ್ಲಿಯೂ ಸ್ಥಾಪಿಸಲು ನಾನು ಅಹೋರಾತ್ರಿ ದುಡಿಯುವೆ.

ನಿಮ್ಮ ವಿಶ್ವಾಸಿ
ಸನ್ ಯತ್ ಸೆನ್"

ಈ ಪತ್ರವನ್ನು ಪ್ರಕಟಿಸಿದ ಯಾವ ಪತ್ರಿಕಾ ಸಂಪಾದಕರಾರೂ, ಮುಂದೊಂದು ದಿನ ಚೀನೀ ಕ್ರಾಂತಿಯ ಮಹಾ ಸೇನಾನಿಯಾಗಿ, ಅಲ್ಲಿನ ಕ್ರೂರ ಸಮ್ರಾಟರ ನಿರಂಕುಶ ಆಳ್ವಿಕೆಯನ್ನು ಕಿತ್ತೊಗೆದು, ಚೀನಾದಲ್ಲಿ ಪ್ರಜಾಪ್ರಭುತ್ವ ಸ್ಥಾಪಿಸಿ ಅದರ ಪ್ರಥಮ ರಾಷ್ಟ್ರಾಧ್ಯಕ್ಷನಾಗುವ ಒಬ್ಬ ಮಹಾ ವ್ಯಕ್ತಿಯಿಂದ ಈ ಪತ್ರ ಬಂದಿದೆ ಎಂದು ತಿಳಿಯಲಿಲ್ಲ. ಬಡ ರೈತ ಕುಟುಂಬವೊಂದರಲ್ಲಿ ಹುಟ್ಟಿ ಬೆಳೆದ ಸನ್ ಯತ್ ಸೆನ್ ಚೀನಾ ದೇಶದಲ್ಲಿ ನಿರಂಕುಶ ಪ್ರಭುತ್ವ ನಡೆಸುತ್ತಿದ್ದ ಕ್ರೂರ ಮಂಚೂ ಸಾಮ್ರಾಟರನ್ನು ಕಿತ್ತೊಗೆದು ಅಲ್ಲಿ ಸ್ವತಂತ್ರ, ಪ್ರಜಾಪ್ರಭುತ್ವ ರಾಷ್ಟ್ರವನ್ನು ನಿರ್ಮಾಣ ಮಾಡಿದ. ಯಾರ ಕೈಸೆರೆಗೆ ಎರಡೂವರೆ ಲಕ್ಷ ಡಾಲರುಗಳ ಬಹುಮಾನವನ್ನು ಘೋಷಿಸಲಾಗಿತ್ತೋ ಆತ ೧೯೧೨ರಲ್ಲಿ ಸ್ವತಂತ್ರ ಚೀನದ ಪ್ರಥಮ ರಾಷ್ಟ್ರಾಧ್ಯಕ್ಷನಾಗಿ ರಾಷ್ಟ್ರಪಿತ ಎಂದೆನಿಸಿಕೊಂಡ. ಪತ್ರಿಕಾಸ್ವಾತಂತ್ರ್ಯ ಬಂಧಿಯೊಬ್ಬನನ್ನು ರಾಷ್ಟ್ರಪಿತನನ್ನಾಗಿ ರೂಪಿಸಿತು.



Printed & published by Shri K. Janardana for the Karnataka Patrika Private Ltd. at the Samyukta Karnatak Press, Koppikar Road, Hubli. Rep; Bombay: V. Satyamurthy Tel. No. 522412; Calcutta: H. Muzamdar, Phone: 46-4238: Madras: K. A. Subramaniam 611326; New Delhi: P. R. Chopra Phone: 224130.

KASTURI PRICE: 1·25 Regd. No. KRN
Registered with the Registrar of Newspapers for India under No. 36331/57